# ಶಿವಮೊಗ್ಗ ಜಿಲ್ಲೆಯ ಆದಿವಾಸಿ ಆಚರಣೆಗಳು ಸಾಮಾಜಿಕ ಅಧ್ಯಯನ

(ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು

ಅನುಷಾ ಎಸ್.ಈ.





ಮಾರ್ಗದರ್ಶಕರು

ಡಾ. ತಾರಿಹಳ್ಳಿ ಹನುಮಂತಪ್ಪ

ಸಹಾಯಕ ಪ್ರಾಧ್ಯಾಪಕರು

ಮಾನವಶಾಸ್ತ್ರ ವಿಭಾಗ

ಸಹ ಮಾರ್ಗದರ್ಶಕರು

ಡಾ. ಕೆ.ಎಂ. ಮೇತ್ರಿ

ಪ್ರಾಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ






ಮಾನವಶಾಸ್ತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬


೨೦೧೮

# ಶಿವಮೊಗ್ಗ ಜಿಲ್ಲೆಯ ಆದಿವಾಸಿ ಆಚರಣೆಗಳು: ಸಾಮಾಜಿಕ ಅಧ್ಯಯನ

(ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿರುತ್ತಿರುವ ಮಹಾಪ್ರಬಂಧ)

ಸಂಶೋಧಕರು
**ಅನುಷಾ ಎಸ್.ಈ.**

ಮಾರ್ಗದರ್ಶಕರು
**ಡಾ. ತಾರಿಹಳ್ಳಿ ಹನುಮಂತಪ್ಪ**
ಸಹಾಯಕ ಪ್ರಾಧ್ಯಾಪಕರು
ಮಾನವಶಾಸ್ತ್ರ ವಿಭಾಗ

ಸಹ ಮಾರ್ಗದರ್ಶಕರು
**ಡಾ. ಕೆ.ಎಂ. ಮೇತ್ರಿ**
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ



**ಮಾನವಶಾಸ್ತ್ರ ವಿಭಾಗ**
ಸಮಾಜ ವಿಜ್ಞಾನಗಳ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ – ೫೮೩೨೭೬

೨೦೧೮

# ಮಾರ್ಗದರ್ಶಕರ ದೃಢೀಕರಣ ಪತ್ರ

**ಅನುಷಾ ಎಸ್.ಈ. ಅವರು ಶಿವಮೊಗ್ಗ ಜಿಲ್ಲೆಯ ಆದಿವಾಸಿ ಆಚರಣೆಗಳು:ಸಾಮಾಜಿಕ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ **ಪಿಎಚ್.ಡಿ.** ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಮಾನವಶಾಸ್ತ್ರ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

**ಮಾರ್ಗದರ್ಶಕರು**

T. Hanumanthappa

**ಡಾ. ತಾರಿಹಳ್ಳಿ ಹನುಮಂತಪ್ಪ**
ಸಹಾಯಕ ಪ್ರಾಧ್ಯಾಪಕರು
ಮಾನವಶಾಸ್ತ್ರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ : 3/12/2018

# ಸಹ ಮಾರ್ಗದರ್ಶಕರ ದೃಢೀಕರಣ ಪತ್ರ

**ಅನುಪಾ ಎಸ್.ಈ.** ಅವರು **ಶಿವಮೊಗ್ಗ ಜಿಲ್ಲೆಯ ಆದಿವಾಸಿ ಆಚರಣೆಗಳು:ಸಾಮಾಜಿಕ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ **ಪಿಎಚ್.ಡಿ.** ಪದವಿಗಾಗಿ ನನ್ನ ಸಹಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಮಾನವಶಾಸ್ತ್ರ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

**ಮಾರ್ಗದರ್ಶಕರು**

**ಡಾ. ಕೆ.ಎಂ. ಮೇತ್ರಿ**
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ : 03.12.2018

## ಸಂಶೋಧಕರ ಪ್ರಮಾಣ ಪತ್ರ

**ಶಿವಮೊಗ್ಗ ಜಿಲ್ಲೆಯ ಆದಿವಾಸಿ ಆಚರಣೆಗಳು: ಸಾಮಾಜಿಕ ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸಲು ಮಾನವಶಾಸ್ತ್ರ ವಿಭಾಗದ ಸಹಾಯಕ ಪ್ರಾಧ್ಯಾಪಕರಾದ **ಡಾ.ತಾರಿಹಳ್ಳಿ ಹನುಮಂತಪ್ಪ** ಅವರ ಮಾರ್ಗದರ್ಶನ ಹಾಗೂ **ಡಾ.ಕೆ.ಎಂ.ಮೇತ್ರಿ** ಅವರ ಸಹಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿ ಇಲ್ಲವೇ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

Anusha S.E.

**(ಅನುಷಾ ಎಸ್.ಈ.)**
ಸಂಶೋಧನಾ ವಿದ್ಯಾರ್ಥಿನಿ
ಮಾನವಶಾಸ್ತ್ರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ: 3/12/18.

## ಪರಿವಿಡಿ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ಸ್ವರೂಪ

೧.೧. ಪ್ರಸ್ತಾವನೆ

೧.೨. ಅಧ್ಯಯನದ ಉದ್ದೇಶ

೧.೩. ಅಧ್ಯಯನದ ವ್ಯಾಪ್ತಿ ಮತ್ತು ಸ್ವರೂಪ

೧.೪. ಅಧ್ಯಯನದ ವಿಧಾನಗಳು

೧.೫. ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆಗಳು

೧.೬. ಆದಿವಾಸಿ ಬುಡಕಟ್ಟು ಸಮುದಾಯದ ಅರ್ಥ ವಿವರಣೆ

೧.೭. ಆದಿವಾಸಿ ಸಮುದಾಯದ ಗುಣಲಕ್ಷಣಗಳು

ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ಸ್ವರೂಪ

## ೧.೧. ಪ್ರಸ್ತಾವನೆ

ದಶರಥನ ಕಂದ ರಾವಣನ ಕೊಂದ ಸೀತೆಯನ್ನು ತಂದ ಎಂದು ನಮ್ಮ ಬುಡಕಟ್ಟು ಸಮುದಾಯ ಅಥವಾ ನಮ್ಮ ಜನಪದರು ಮಜ್ಜಿಗೆ ರಾಮಾಯಣವನ್ನು ಮೂರು ವಾಕ್ಯದಲ್ಲಿ ಹೇಳಿಬಿಡುತ್ತಾರೆ. ಅಂದರೆ ಅವರ ಒಡಲೊಳಗೆ ಮೌಖಿಕ ಸಾಹಿತ್ಯ ಅಷ್ಟೊಂದು ಶ್ರೀಮಂತವಾಗಿರುತ್ತದೆ. ಭಾರತವು ಹಲವಾರು ಬುಡಕಟ್ಟುಗಳ ತವರುಮನೆ. ಒಂದೊಂದು ಬುಡಕಟ್ಟುಗಳಿಗೂ ಅವರದೇ ಆದ ಆಚರಣೆಗಳು ಹಿನ್ನೆಲೆಗಳು ಇರುತ್ತವೆ. ಮಾನವ ಜನಾಂಗದ ಇತಿಹಾಸ ಪುರಾತನವಾದದ್ದು. ಪೂರ್ವದಲ್ಲಿ ಆದಿವಾಸಿಯಾಗಿದ್ದ ಮಾನವನು ಕಾಲಾಂತರದಲ್ಲಿ ನಾಗರೀಕತೆಯನ್ನು ಮೈಗೂಡಿಸಿಕೊಂಡು ಆಧುನಿಕ ಸ್ಥಿತಿಗೆ ಬಂದಿದ್ದಾನೆ. ಪ್ರಸ್ತುತ ಸಂದರ್ಭದಲ್ಲಿ ಒಂದೆಡೆ ಬೆಳೆದು ನಿಂತ ಮಾನವರ ಚರಿತ್ರೆಯನ್ನು ನಾಗರಿಕ ಚರಿತ್ರೆಯೆಂದು ಮತ್ತೊಂದಡೆ ಮೂಲ ಸಹಜ ಸ್ಥಿತಿಯನ್ನು ಉಳಿಸಿಕೊಂಡು ಜೀವಿಸುತ್ತಿರುವ ಚರಿತ್ರೆ ಮೂಲ ನಿವಾಸಿಗಳ ಚರಿತ್ರೆ ಅಥವಾ ಬುಡಕಟ್ಟುಗಳ ಚರಿತ್ರೆಯೆಂದು ಕರೆಯಬಹುದು. ಇಂದಿನ ಆಧುನಿಕ ನಾಗರಿಕ ಪರಿಸರದಲ್ಲಿ ತಮ್ಮ ಮೂಲ ಸಂಸ್ಕೃತಿಯ ಅಂಶಗಳನ್ನು ಉಳಿಸಿಕೊಂಡು ಜೀವಿಸುತ್ತಿರುವಂತಹ ಬುಡಕಟ್ಟುಗಳು ಪ್ರಮುಖವಾಗಿ ಕಂಡುಬರುತ್ತವೆ. ಈ ಅಧ್ಯಯನಕ್ಕೆ ಶಿವಮೊಗ್ಗ ಜಿಲ್ಲೆಯಲ್ಲಿ ಕಂಡುಬರುವ ಎರಡು ಪ್ರಮುಖ ಬುಡಕಟ್ಟುಗಳನ್ನು ಮಾತ್ರ ಅಯ್ದುಕೊಳ್ಳಲಾಗಿದೆ. **ಬೇಡ ಮತ್ತು ಹಸಲರು ಬುಡಕಟ್ಟು** ಸಮುದಾಯಯಗಳಾಗಿವೆ. ಪ್ರಸ್ತುತ ಈ ಬುಡಕಟ್ಟು ಸಮುದಾಯಗಳನ್ನು ಅಧ್ಯಯನಕ್ಕೆ ಕೈಗೊಳ್ಳಲಾಗಿದೆ. ಶಿವಮೊಗ್ಗ ಜಿಲ್ಲೆ ಏಳು ತಾಲೂಕುಗಳನ್ನು ಒಳಗೊಂಡಿದೆ. ಅದರಲ್ಲಿ ಶಿವಮೊಗ್ಗ, ಭದ್ರಾವತಿ, ಹೊಸನಗರ, ಸಾಗರ, ಶಿಕಾರಿಪುರ, ಸೊರಬ ಮತ್ತು ತೀರ್ಥಹಳ್ಳಿ. ದ್ರಾವಿಡ ಜನಾಂಗಕ್ಕೆ ಸಂಬಂಧಿಸಿದಂತೆ ಭಾರತದಲ್ಲಿ ವಿಶೇಷವಾಗಿ ದಕ್ಷಿಣ ಭಾರತದಲ್ಲಿ ಲೆಕ್ಕಕ್ಕೆ ಸಿಗಲಾರದಷ್ಟು ಸಂಖ್ಯೆಯ ಬುಡಕಟ್ಟುಗಳನ್ನು ಇಂದಿಗೂ ಕಾಣಬಹುದು. ಅವು ಹೊಂದಿರುವ ವಿಶಿಷ್ಟ ಸಾಮಾಜಿಕ, ಸಾಂಸ್ಕೃತಿಯ ನೆಲೆಯಲ್ಲಿ ಗುರುತಿಸಿ ಅವುಗಳಲ್ಲಿ ಅಡಗಿರುವ ಸಾಂಸ್ಕೃತಿಕ ವೈಶಿಷ್ಟ್ಯಗಳು, ಅವುಗಳ ಅಸ್ತಿತ್ವ ಮತ್ತು ಸಂಕ್ರಮಣ ವ್ಯವಸ್ಥೆ, ಪರಸ್ಪರ ಅವಲಂಬಿಶ್ರೇಣಿಗಳು ಇತ್ಯಾದಿಗಳಲ್ಲಿ ಕಾಣುವ ಸಾಂಸ್ಕೃತಿಕ ಅಂಶಗಳನ್ನು ಗುರುತಿಸುವುದು ಬಹುಮುಖ್ಯವಾಗಿದೆ. ಭಾರತವು ಜನಾಂಗಗಳು ಕರುಗುವ

ಒಂದು ಮಡಿಕೆಯಾಗಿದೆ. ಒಂದು ರೀತಿಯಲ್ಲಿ ತಿರುಗೆಲೆಯು ಹೌದು ಏಕೆಂದರೆ ಭಾರತದಲ್ಲಿ ಒಟ್ಟು ೩೦೦೦ಕ್ಕೂ ಅಧಿಕ ಬುಡಕಟ್ಟು ಮತ್ತು ಜಾತಿಗಳು ಇವೆ ಎಂದು ಗುರುತಿಸಲಾಗಿದೆ. ಇವುಗಳ ಜೀವನ ವಿಧಾನ, ವೃತ್ತಿ, ಕಸುಬು ಮುಂತಾದವುಗಳಲ್ಲಿ ಇಂದಿಗೂ ದಟ್ಟವಾದ ಬುಡಕಟ್ಟು ಲಕ್ಷಣಗಳನ್ನು ಕಾಣಬಹುದಾಗಿದೆ. ಗ್ರಾಮೀಣ ಜೀವನ ಒಕ್ಕಲು ಸಮುದಾಯ ಕುಲ ಕಸುಬು, ವೃತ್ತಿ ಮುಂತಾದ ವಿವಿಧ ಪಂಗಡಗಳಲ್ಲಿ ಕಂಡು ಬರುವ ಕ್ರಿಯೆ ಮಾದರಿಗಳು ಅವು ಬುಡಕಟ್ಟು ಸಮುದಾಯಗಳೊಂದಿಗೆ ಹೊಂದಿರುವ ಗಾಢ ಸಂಬಂಧ ಅವುಗಳ ಮೂಲ ರೂಪುಗೊಳ್ಳುವ ವೃಂದದ ವಿಶಿಷ್ಟ ನಡಾವಳಿಗಳು, ಕ್ರೀಡೆಗಳು, ಮನೋರಂಜನೆ ಮತ್ತು ಶಕ್ತಿ ಸಾಧನೆಯ ಸಂಕೇತವಾಗಿ ಉಳಿದು ಬಂದ ಕಸರತ್ತು, ಗರಡಿ ಸಾಧನೆಗಳು ಹೀಗೆ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಕೌಟುಂಬಿಕ ಮತ್ತು ಸಾಮಾಜಿಕ ಮಟ್ಟದ ಸಾಮೂಹಿಕ ಕ್ರಿಯೆ ಮತ್ತು ವ್ಯಕ್ತಿ ರೂಪದ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಜನಾಂಗೀಯ ದೃಷ್ಟಿಕೋನಗಳಿಂದ ಗುರುತಿಸಬೇಕಾಗುತ್ತದೆ. ಕ್ರಿಯೆಗಳು ಏಕಕಾಲಕ್ಕೆ ಸಂಭವಿಸುತ್ತವೆ. ಕ್ರೀಯೆಗಳನ್ನು ಆಧರಿಸಿ ಪಂಗಡ, ಬುಡಕಟ್ಟು, ಆರ್ಥಿಕ ಶ್ರೇಣಿ, ಸಾಮಾಜಿಕ ವ್ಯವಸ್ಥೆಗಳು ರೂಪುಗೊಳ್ಳುವುದರಿಂದ ಅವುಗಳಲ್ಲಿ ಹುದುಗಿರುವ ಬುಡಕಟ್ಟು ಅಂಶಗಳನ್ನು ಗುರುತಿಸಿ ವರ್ಗೀಕರಿಸಿ ವಿಶ್ಲೇಷಿಸುವಲ್ಲಿ ಪರಸ್ಪರ ಅವಲಂಬಿ ಜನಾಂಗೀಯ ಕ್ರಿಯೆಗಳನ್ನು ಮೂಲಭೂತವಾದ ಆಧಾರಗಳೆಂದು ಗ್ರಹಿಸಬೇಕಾಗುತ್ತದೆ. ಹಾಗಾಗಿ ಮಾನವಶಾಸ್ತ್ರ, ಕುಲಶಾಸ್ತ್ರ, ಸಮಾಜಶಾಸ್ತ್ರ, ಸಾಂಸ್ಕೃತಿಕ ಮಾನವಶಾಸ್ತ್ರ ಇತ್ಯಾದಿ ಮಾನವೀಕಗಳಿಗೆ ಬುಡಕಟ್ಟು ಮತ್ತು ಜಾನಪದ ಒಂದು ಗಣಿಯೆನಿಸುತ್ತದೆ.

ಮಾನವ ಹುಟ್ಟಿನೊಂದಿಗೆ ಜನಾಂಗದ ಚರಿತ್ರೆ ಆರಂಭವಾಗಿದೆ. ಆದಿಮಾನವ ತನ್ನ ಅಲೆಮಾರಿ ಜೀವನವನ್ನು ಬಿಟ್ಟು ಒಂದು ಪ್ರದೇಶದಲ್ಲಿಯೇ ನೆಲೆ ನಿಂತು ನಾಗರೀಕ ಹಂತವನ್ನು ತಲುಪಿದಾಗ ಅವನಲ್ಲಿ ದೈಹಿಕ ಬದಲಾವಣೆಯ ಜೊತೆಗೆ ಆಂತರಿಕ ಬದಲಾವಣೆಗಳು ಕೂಡ ಕಂಡು ಬರುತ್ತವೆ. ಇಂತಹ ವಿಕಾಸಗಳನ್ನು ಆದಿ ಸಂಸ್ಕೃತಿ, ಗ್ರಾಮೀಣ ಸಂಸ್ಕೃತಿ ಮತ್ತು ನಗರ ಸಂಸ್ಕೃತಿಗಳೆಂದು ಮೂರು ಸಂಸ್ಕೃತಿಗಳನ್ನು ಗುರುತಿಸಲಾಗಿದೆ. ಕೆಲವು ಬುಡಕಟ್ಟು ನವೀನ ಶೋಧನೆಗಾಗಿ ಆಧುನಿಕತೆಯ ಕಡೆಗೆ ಚಲಿಸಿದರೆ ಇನ್ನೂ ಕೆಲವು ಆಧುನಿಕತೆಗೆ ಬೆನ್ನು ಮಾಡಿದ್ದುಂಟು. ಹೀಗಾಗಿ ಒಂದು ಬುಡಕಟ್ಟು ಮತ್ತು ಸಮುದಾಯ ನಾಗರೀಕತೆಯ ತುತ್ತತುದಿಯಲ್ಲಿ ನಿಂತಿದ್ದರೆ ಇನ್ನೊಂದು ಬುಡಕಟ್ಟು ನಾಗರೀಕತೆಯ ಶೈಶಾವಸ್ಥೆಯಲ್ಲಿರುವ ಸಾಧ್ಯತೆಯಿದೆ. ಅದರಲ್ಲಿಂದಲೇ ಭಾರತದಲ್ಲಿ ಇಂದಿಗೂ ಗ್ರಾಮ ಮತ್ತು ನಗರಗಳಿಂದ ದೂರವಿರುವ ಆಧುನಿಕತೆಯ ಸೋಂಕು ಇಲ್ಲದ ಬುಡಕಟ್ಟುಗಳು ಅಸ್ತಿತ್ವದಲ್ಲಿವೆ (ವೀಣಾ ಎಂ.ಪಿ. ೧೯೯೧) ಈ ಜನಪದ ಅಥವಾ ಬುಡಕಟ್ಟು ಗಣಿಯಲ್ಲಿನ ಹಲವು ಸಮುದಾಯಗಳಲ್ಲಿ ಬೇಡ ಸಮುದಾಯ ಮತ್ತು ಹಸಲರು ಸಮುದಾಯ ಕೂಡ ಪ್ರಮುಖವಾಗಿದೆ.

### ೧.೨. ಅಧ್ಯಯನದ ಉದ್ದೇಶ

ಹಿಂದು ಸಮಾಜವು ಹಲವು ಜಾತಿಗಳ ಶ್ರೇಣಿಕೃತ ವ್ಯವಸ್ಥೆಯನ್ನು ಹೊಂದಿದೆ. ವೇದಗಳ ಕಾಲದಲ್ಲಿ ಕೇವಲ ವರ್ಣ ವ್ಯವಸ್ಥೆಯಿದ್ದು ಆ ವರ್ಣಗಳು ಕಠೋರ ಜಾತಿಗಳಾಗಿ ಸ್ಮೃತಿಗಳ ಕಾಲ

ಮತ್ತು ನಂತರದಲ್ಲಿ ರೂಪುಗೊಂಡಿರಬೇಕೆಂಬುದನ್ನು ಇತಿಹಾಸ ಹೇಳುತ್ತದೆ. ಜಾತಿ ಎಂಬ ಪದ ವೃತ್ತಿ ಸೂಚಕವಾಗಿಯೂ, ಧರ್ಮ ಸೂಚಕವಾಗಿಯೂ ಬಳಕೆಯಾಗಿದೆ. ಪ್ರತಿಯೊಂದು ಜಾತಿಯೂ ತನ್ನನ್ನು ತಾನು ಇತರ ಗುಂಪಿನಿಂದ ಬೇರ್ಪಡಿಸಿಕೊಂಡು ತನ್ನದೇ ಆದ ಇತಿಹಾಸ ಜೀವನ ವಿಧಾನ ನಂಬಿಕೆ ಆಚರಣೆಗಳನ್ನು ಹೊಂದಿದೆ. ಇಂತಹ ಜಾತಿಗಳಲಿ ಬೇಡ ಮತ್ತು ಹಸಲರು ಬುಡಕಟ್ಟು ತನ್ನದೇ ಆದ ಸಾಂಸ್ಕೃತಿಕ ಚೌಕಟ್ಟನ್ನು ಹೊಂದಿದೆ. ಶಿವಮೊಗ್ಗ ಜಿಲ್ಲೆಯಾದ್ಯಂತ ನಗರ ಮತ್ತು ಗ್ರಾಮೀಣ ಸಂಸ್ಕೃತಿಯಲ್ಲಿ ವಾಸ ಮಾಡುತ್ತಿರುವ ತಮ್ಮದೇ ರೂಢಿ, ಸಂಪ್ರದಾಯ, ಆಚಾರ ವಿಚಾರ, ಉಡುಗೆ–ತೊಡುಗೆ, ಊಟೋಪಚಾರ, ಜನನ, ಬಾಲ್ಯವಸ್ಥೆ, ಪ್ರೌಢವಸ್ಥೆ, ಕನ್ಯೆ, ಋತುಮತಿಶಾಸ್ತ್ರ, ಮದುವೆ ಮತ್ತು ಮರಣ ಇತ್ಯಾದಿ ವಿಚಾರ ಹಸಲರು ಮತ್ತು ಬೇಡ ಬುಡಕಟ್ಟುಗಳು ಮೈಗೂಡಿಸಿಕೊಂಡಿರುವ ಕುರಿತು ಇಲ್ಲಿ ಅಧ್ಯಯನ ಮಾಡಲಾಗಿದೆ. ಬೇಡ ಎಂಬ ಹೆಸರಿನಿಂದ ಗುರುತಿಸುವ ಬುಡಕಟ್ಟನ್ನು ಕರ್ನಾಟಕದಾದ್ಯಂತ ಇಂದು ಕಾಣಬಹುದಾಗಿದೆ. ಅದೇ ರೀತಿ ಹಸಲರು ಬುಡಕಟ್ಟನ್ನು ಶಿವಮೊಗ್ಗ, ಚಿಕ್ಕಮಗಳೂರು, ಭಟ್ಕಳ, ಕುಂದಾಪುರ, ಇನ್ನಿತರ ಪ್ರದೇಶಗಳಲ್ಲಿ ಕಾಣಬಹುದಾಗಿದೆ. ಈ ಎರಡು ಸಮುದಾಯಗಳು ಕೆಲವು ಕಡೆ ವಿರಳವಾಗಿವೆ ಮತ್ತೇ ಕೆಲವು ಕಡೆ ದಟ್ಟವಾಗಿಯೂ ಈ ಜನಾಂಗಗಳು ವ್ಯಾಪಿಸಿವೆ. ಬೇಡ ಸಮುದಾಯ ಯಥೇಚ್ಚವಾಗಿ ಬಳ್ಳಾರಿ, ಚಿತ್ರದುರ್ಗ, ರಾಯಚೂರು, ದಾವಣಗೆರೆ, ಕೊಪ್ಪಳ, ಕೋಲಾರ, ತುಮಕೂರು ಮತ್ತು ಶಿವಮೊಗ್ಗ ಜಿಲ್ಲೆಗಳ ಭಾಗಗಳಲ್ಲಿಯೂ ವಿಫಲವಾಗಿವೆ. ಈ ಬೇಡ ಸಮುದಾಯ ಅತೀ ಹೆಚ್ಚಿನ ಸಂಖ್ಯೆಯಲ್ಲಿರುವುದು ಬಳ್ಳಾರಿ, ರಾಯಚೂರು, ಚಿತ್ರದುರ್ಗ ಮತ್ತು ಕೊಪ್ಪಳದಲ್ಲಿ ಅದೇ ರೀತಿ ಹಸಲರು ಸಮುದಾಯ ಮಲೆನಾಡಿನಾದ್ಯಂತ ಅತೀ ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬರುತ್ತದೆ. ಈ ಎರಡು ಸಮುದಾಯವು ತಮ್ಮ ಜೀವನದ ಮೂಲ ವೃತ್ತಿ ಕೃಷಿಯನ್ನು ಅವಲಂಬಿಸಿವೆ. ಕೃಷಿಯನ್ನು ಅವಲಂಬಿಸಿದ ಬೆರೆಳಣಿಕೆಯ ಭೂಮಾಲೀಕರು ಈ ಎರಡು ಸಮುದಾಯಗಳಲ್ಲಿ ಕಂಡು ಬರುತ್ತಾರೆ. ಹಾಗೆಯೇ ಆರ್ಥಿಕವಾಗಿ ದುರ್ಬಲವಾದವರು ಇದ್ದಾರೆ. ಒಂದು ನಿರ್ಧಿಷ್ಟ ಭೂ ಪ್ರದೇಶವನ್ನು ಮತ್ತು ಭಾಷೆಯನ್ನು ಆಡುವ ಒಂದೇ ಸಮಾಜ ಸಂಸ್ಕೃತಿಯನ್ನು ಹೊಂದಿರುವ ಅಥವಾ ಒಂದೇ ವೃತ್ತಿಯಲ್ಲಿ ತೊಡಗಿಕೊಂಡಿರುವ ಗುಂಪಿಗೆ ಬುಡಕಟ್ಟು ಎಂದು ಕರೆಯುತ್ತಾರೆ. ಬುಡಕಟ್ಟುಗಳಲ್ಲಿ ರಕ್ತ ಸಂಬಂಧ ಬಹು ಮುಖ್ಯವಾದ ಅಂಶವಾಗಿದೆ. ಬೇಡ ಮತ್ತು ಹಸಲರು ಬುಡಕಟ್ಟುಗಳು ಇಂದು ಮಾರ್ಪಾಡುಗಳನ್ನು ಹೊಂದಿವೆ. ಈ ಪರಿವರ್ತನೆಯ ಕಾಲದಲ್ಲಿ ಈ ಸಮುದಾಯಗಳು ತಮ್ಮ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ವೈಶಿಷ್ಟ್ಯಗಳನ್ನು ಉಳಿಸಿಕೊಳ್ಳಲು ಯಾವ ರೀತಿಯಲ್ಲಿ ಪ್ರಯತ್ನಿಸುತ್ತಿವೆ ಎನ್ನುವದನ್ನು ವಿಶ್ಲೇಷಿಸುವುದು ಅವಶ್ಯವಾಗಿದೆ. ಇಂದಿಗೂ ಕೆಲವು ಪ್ರದೇಶಗಳಲ್ಲಿ ವಾಸಿಸುವ ಬೇಡ ಮತ್ತು ಹಸಲರು ಬುಡಕಟ್ಟು ಸಂಪೂರ್ಣ ಬುಡಕಟ್ಟು ಲಕ್ಷಣಗಳನ್ನು ಹೊಂದಿವೆ. ಈ ಹಿನ್ನೆಲೆಯಲ್ಲಿ ಸಮಗ್ರವಾಗಿ ಈ ಎರಡು ಬುಡಕಟ್ಟುಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಪ್ರಸ್ತುತ ಸಂದರ್ಭದಲ್ಲಿ ಈ ಅಧ್ಯಯನವು ಬಹುಮುಖ್ಯವಾಗಿದೆ. ಇಂದಿನ ಜಾಗತೀಕ ಸಂದರ್ಭದಲ್ಲಿ ಹಸಲರು ಮತು ಬೇಡ ಬುಡಕಟ್ಟು

ಪ್ರತ್ಯೇಕವಾಗಿ ಉಳಿಯಲು ಸಾಧ್ಯವಿಲ್ಲದೆ ಹೊಸ ಬದಲಾವಣೆಗಳನ್ನು ಒಪ್ಪಿಕೊಳ್ಳುವ ಅನಿವಾರ್ಯತೆ ಉಂಟಾಗಿದೆ. ಈ ಬದಲಾವಣೆಯ ಅನಿವಾರ್ಯ ಯಾವುದೇ ಬೆಳೆಯುತ್ತಿರುವ ಸಮಾಜದಲ್ಲಿ ಈ ಅನಿವಾರ್ಯತೆ ಉದ್ಭವಿಸುತ್ತಲೇ ಇರುತ್ತದೆ. ಈ ಹಿನ್ನೆಲೆಯಲ್ಲಿ ಅನೇಕ ಬುಡಕಟ್ಟುಗಳು ಮಾರ್ಪಾಡುಗಳನ್ನು ಒಪ್ಪಿಕೊಂಡು ತಮ್ಮ ಆಚಾರ ವಿಚಾರಗಳಲ್ಲಿ ತಮ್ಮದೇ ಆದ ವೈಶಿಷ್ಟ್ಯಗಳನ್ನು ಸಮಾಜ ಸಂಸ್ಕೃತಿಯ ವೈಶಿಷ್ಟ್ಯಗಳನ್ನು ಉಳಿಸಿಕೊಂಡು ಬಂದಿದೆ. ತಮ್ಮ ಹಿಂದಿನ ಕೊಂಡಿಗಳನ್ನು ಉಳಿಸಿಕೊಂಡಿರುವುದನ್ನು ಕಾಣಬಹುದಾಗಿದೆ. ಈ ಎರಡು ಸಮುದಾಯಗಳಲ್ಲಿ ಉಡುಗೆ ತೊಡುಗೆಗಳಲ್ಲಿ ವ್ಯತ್ಯಾಸವಿದೆ. ಅಲ್ಪಸ್ವಲ್ಪ ಓದಿದವರು ಇವರಿಗಿಂತ ಭಿನ್ನವಾಗಿದ್ದಾರೆ. ಸಾಮಾಜಿಕ ವಲಯದಲ್ಲಿಯೂ ಕೂಡ ಈ ಸಮುದಾಯಗಳು ಇತರರಿಂದ ಜನಾಂಗೀಕವಾಗಿ ಭಿನ್ನವಾಗಿದ್ದಾರೆ. ಬಹುಸಂಖ್ಯಾತ ಬುಡಕಟ್ಟು ಆಚರಣೆಗಳಿಂದ ಇವರು ಸಾಕಷ್ಟು ಪ್ರಭಾವಗಳನ್ನು ಹೊಂದಿದ್ದಾರೆ ಎಂಬುದನ್ನು ಗಮನಿಸಬಹುದಾಗಿದೆ. ಇವರು ಪೂಜಿಸುವ ದೇವರು ಕೂಡ ವಿಶಿಷ್ಟವಾಗಿವೆ. ಇವರ ಭಾಷೆ ಕೂಡ ಗ್ರಾಮೀಣ ಮಟ್ಟದಲ್ಲಯೂ ವಿಭಿನ್ನವಾಗಿದೆ. ಆದಿ ಮಾನವ ತನ್ನ ಸಂಸ್ಕೃತಿ ವಿಕಾಸಗೊಂಡಾಗ ಕೆಲವು ಸಾಮಾಜಿಕ, ಕೌಟುಂಬಿಕ ವ್ಯವಸ್ಥೆಗಳನ್ನು ರೂಢಿಸಿಕೊಂಡ ಈ ವ್ಯವಸ್ಥೆಯ ಒಳಗೆ ಅನೇಕ ಆಚರಣೆಗಳ ಮೂಲಕ ತನ್ನ ಅಸ್ತಿತ್ವವನ್ನು ಸಮಾಜದಲ್ಲಿ ಗುರುತಿಸಿಕೊಂಡ. ಮನುಷ್ಯ ಹುಟ್ಟಿನಿಂದ ಸಾಯುವತನಕ ಅನೇಕ ಸಂಸ್ಕಾರಗಳ ಮೂಲಕ ತನ್ನ ಬದುಕಿನ ವ್ಯವಸ್ಥೆಗೆ ಒಂದು ಚೌಕಟ್ಟನ್ನು ಧಾರ್ಮಿಕ, ಸಾಮಾಜಿಕ ಮಹತ್ವವನ್ನು ಕಲ್ಪಿಸಿಕೊಂಡ ಈ ಸಂಸ್ಕಾರಗಳಲ್ಲಿ ಶೋಡಷ ಸಂಸ್ಕಾರಗಳು ಮುಖ್ಯವಾದವುಗಳು ಅವುಗಳಲ್ಲಿ ಶಿವಮೊಗ್ಗ ಜಿಲ್ಲೆಯಾದ್ಯಾಂತ ಹರಡಿರುವ ಬೇಡ ಮತ್ತು ಹಸಲರು ಬುಡಕಟ್ಟುಗಳ ಜನ ಜೀವನ ಆಚಾರ ವಿಚಾರ ಸಾಂಸ್ಕೃತಿಕ ಜೀವನ, ಮದುವೆ, ಜನನ, ಮರಣ, ಪ್ರೌಢವಾಸ್ಥೆ, ಆರ್ಥಿಕ ಜೀವನ, ಸಾಮಾಜಿಕ ಜೀವನ ಇತ್ಯಾದಿ ವಿಶಿಷ್ಟ ಸಂಸ್ಕಾರಗಳು ಇವೆಲ್ಲಾ ಮಾನವನ ಸಂಸ್ಕೃತಿಯ ದ್ಯೋತಕವು ಹೌದು. ವ್ಯಕ್ತಿಯ ಬದುಕಿನಲ್ಲಿ ಸಾಂಸ್ಕೃತಿಕ ಜೀವನ ಆತನ ಇಡೀ ಬದುಕಿನ ಮೇಲೆ ಆಗಾಧವಾದ ಪರಿಣಾಮವನ್ನು ಬೀರುತ್ತದೆ. ಈ ದೃಷ್ಟಿಯಿಂದ ಶಿವಮೊಗ್ಗ ಜಿಲ್ಲೆಯ ಹಸಲರು ಮತ್ತು ಬೇಡ ಬುಡಕಟ್ಟುಗಳ ಸಾಂಸ್ಕೃತಿಕ ವ್ಯಕ್ತಿತ್ವ ಬಹಳ ಮಹತ್ವವಾದದ್ದು. ಒಬ್ಬ ವ್ಯಕ್ತಿಯ ವ್ಯಕ್ತಿತ್ವದ ಮಹತ್ವವು ಕೂಡ ಜನನ, ಪ್ರೌಢವಾಸ್ಥೆ, ಮದುವೆ, ಮರಣ ಇತ್ಯಾದಿ ಸಂಸ್ಕಾರಗಳನ್ನೆ ಅವಲಂಬಿಸಿರುತ್ತವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಪ್ರಬಂಧದಲ್ಲಿ ಹಸಲರು ಮತ್ತು ಬೇಡ ಬುಡಕಟ್ಟು ಸಾಂಸ್ಕೃತಿಕ ಜೀವನ ಆಚರಣೆಯಲ್ಲಿರುವ ಸಂಪ್ರದಾಯಗಳನ್ನು ಕುರಿತು ವಿವೇಚಿಸಲಾಗಿದೆ. ಅಲ್ಲದೇ ಶಿವಮೊಗ್ಗ ಜಿಲ್ಲೆಯ ಸಂಸ್ಕೃತಿಗೆ ಹಸಲರು ಮತ್ತು ಬೇಡ ಬುಡಕಟ್ಟುಗಳ ಕೊಡುಗೆಯನ್ನು ಗುರುತಿಸುವ ಪ್ರಯತ್ನವನ್ನು ಸಹ ಮಾಡಲಾಗಿದೆ. ಶಿವಮೊಗ್ಗ ಜಿಲ್ಲೆಯ ಹಿನ್ನೆಲೆಯಿಂದ ಆರಂಭಿಸಿ ಮದುವೆ-ಸಂಪ್ರದಾಯ, ಸಮಾಜಿಕ ಜೀವನ, ಆರ್ಥಿಕ ಜೀವನ, ರಾಜಕೀಯ ಜೀವನ, ಉಡುಗೆ ತೊಡುಗೆ, ಕುಟುಂಬ ಪದ್ಧತಿ ಮತ್ತು ನ್ಯಾಯ ಪದ್ಧತಿ, ಬೇಟೆ, ಆಹಾರ ಪದ್ಧತಿ, ಗೃಹ ಪ್ರವೇಶ, ಶಕ್ತಿ ದೈವಗಳು, ಮಹಿಳೆಯರ ಸ್ಥಾನ ಮಾನ, ಪ್ರೌಢ ಸಂಸ್ಕಾರ, ಜನಪದ ಸಾಹಿತ್ಯ, ಆಧುನಿಕ ನಾಗರೀಕತೆ ಮತ್ತು

ವಿವಿಧ ಆಚರಣೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರಬಂಧದಲ್ಲಿ ಅಧ್ಯಯನ ಮಾಡಲಾಗಿದೆ. ಅಧ್ಯಯನದಲ್ಲಿ ಕಂಡುಕೊಂಡ ವಿಶಿಷ್ಟ ಅಂಶಗಳನ್ನು ಮತ್ತು ಅದರ ಕೊಡುಗೆಗಳನ್ನು ಸಹ ಗುರುತಿಸಲಾಗಿದೆ. ಅಧ್ಯಯನಕ್ಕೆ ಪೂರಕವಾದ ಮಾಹಿತಿಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಲಾಗಿದೆ. ಈ ಸಂಶೋಧನಾ ಪ್ರಬಂಧವನ್ನು ನಿರ್ದಿಷ್ಟವಾಗಿ ಹಸಲರು ಮತ್ತು ಬೇಡ ಬುಡಕಟ್ಟುಗಳ ಅದ್ಯಯನಕ್ಕೆ ಸೀಮಿತಗೊಳಿಸಲಾಗಿದೆ. ಪ್ರಬಂಧಕ್ಕೆ ಪೂರಕವಾಗಿ ಈಗಾಗಲೇ ಪ್ರಕಟವಾಗಿರುವ ಜನಾಂಗೀಕ ಅಧ್ಯಯನ ಕೃತಿಗಳಿಂದ ಮತ್ತು ವಿದ್ವಾಂಸರಿಂದ ಮಾಹಿತಿಗಳನ್ನು ಪಡೆಯಲಾಗಿದೆ. ಕ್ಷೇತ್ರಕಾರ್ಯದ ಮೂಲಕ ವಕ್ತೃಗಳಿಂದ, ಮೌಖಿಕ ಸಾಹಿತ್ಯವನ್ನು ಪಡೆಯಲಾಗಿದೆ. ಹೆಚ್ಚಾಗಿ ಕ್ಷೇತ್ರಕಾರ್ಯದ ಮಾಹಿತಿಯನ್ನು ಬಳಸಿಕೊಳ್ಳಲಾಗಿದೆ. ಕ್ಷೇತ್ರ ಕಾರ್ಯದಲ್ಲಿ ಮಾಹಿತಿ ಸಂಗ್ರಹಣೆಯ ಜೊತೆಗೆ ಅಧ್ಯಯನದ ಅವಶ್ಯಕತೆಗೆ ಪೂರಕವಾದ ಹಾಡು ಕಥೆಗಳನ್ನು ಸಂಗ್ರಹಿಸಲಾಗಿದೆ. ಕ್ಷೇತ್ರಕಾರ್ಯದಲ್ಲಿ ಮಾಹಿತಿ ಸಂಗ್ರಹ, ದಾಖಲೀಕರಣ ಮುಂತಾದ ವಿಧಾನಗಳನ್ನು ಅನುಸರಿಸಿ ಸಂಗ್ರಹಿಸಿದ ಮಾಹಿತಿಯನ್ನು ಒಟ್ಟುಗೂಡಿಸಿ ಈ ಸಂಶೋಧನ ಪ್ರಬಂಧವನ್ನು ಕಟ್ಟುವ ಪ್ರಯತ್ನವನ್ನು ಮಾಡಲಾಗಿದೆ. ಬೇಡ ಮತ್ತು ಹಸಲ ಬುಡಕಟ್ಟು ಸಮುದಾಯಗಳ ಹಿನ್ನೆಲೆ, ವಾರ್ಷಿಕ ಊರೊಟ್ಟಿನ ಆಚರಣೆಗಳು ಮತ್ತು ಜೀವನಾವರ್ತನದ ಆಚರಣೆಗಳು, ಸಾಮಾಜಿಕ ಶೋಷಣೆ, ಬಡತನ, ಕೃಷಿ ಜೀವನ, ಕುಲದೈವದ ಆಚರಣೆ ಈ ಸಮುದಾಯಗಳಲ್ಲಾದ ಬದಲಾವಣೆ, ಆಚಾರ ವಿಚಾರ, ಉಡುಗೆ ತೊಡುಗೆ, ಭಾಷೆ, ಊಟೋಪಚಾರ, ಜನನ, ಬಾಲ್ಯಾ ಪ್ರೌಢವಸ್ತೆ, ಸಂಪ್ರದಾಯ, ನಂಬಿಕೆ, ವಿಧಿ ನಿಷೇಧಗಳು ಮತ್ತು ಮದುವೆ ಇನ್ನಿತರ ವಿಷಯಗಳ ಅಧ್ಯಯನ ಮಾಡಲಾಗಿದೆ. ಪ್ರಸ್ತುತ ಪ್ರಬಂಧದಲ್ಲಿ ಬೇಡ ಮತ್ತು ಹಸಲರು ಬುಡಕಟ್ಟು ಸಮುದಾಯಗಳ ಕುರಿತು ಸಾಂಸ್ಕೃತಿಕ ವಿಶ್ಲೇಷಣೆಯನ್ನು ಮಾಡಲಾಗಿದೆ. ಪ್ರಸ್ತುತ ಅಧ್ಯಯನ ಸಂಕ್ರಮಣ ಸ್ಥಿತಿಯಲ್ಲಿರುವ, ಸಾಂಸ್ಕೃತಿಕಗೊಳ್ಳುತ್ತಿರುವ ಅರೆ ಬುಡಕಟ್ಟುಗಳಾದ ಹಸಲರು ಮತ್ತು ಬೇಡ ಬುಡಕಟ್ಟುಗಳ ಸಾಂಸ್ಕೃತಿಕ ಮತ್ತು ಸಾಮಾಜಿಕ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಲಾಗಿದೆ.

### ೧.೩. ಅಧ್ಯಯನದ ವ್ಯಾಪ್ತಿ ಮತ್ತು ಸ್ವರೂಪ

ಬುಡಕಟ್ಟು ಜನಾಂಗವು ತನ್ನದೇ ಆದ ಅನನ್ಯತೆಯನ್ನು ಹೊಂದಿರುತ್ತದೆ. ಇತರೆ ಜಾತಿ ಜನರಿಗಿಂತ ಮತ್ತು ಗ್ರಾಮ ಹಾಗೂ ನಗರ ಸಂಸ್ಕೃತಿಯಿಂದ ಬೇರೆಯೇ ಇರುತ್ತದೆ. ಸಾಮಾನ್ಯವಾಗಿ ನಾವು ಬುಡಕಟ್ಟುಗಳು ವಾಸಿಸುವ ಪ್ರದೇಶವನ್ನು ಹಟ್ಟಿ, ಹಾಡಿ, ತಾಂಡ ಮತ್ತು ದೊಡ್ಡಿ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಸಾಮಾನ್ಯವಾಗಿ ಬುಡಕಟ್ಟು ಜನರು ತಮ್ಮದೇ ಆದ ನಾಟಿ ವೈದ್ಯ ಪದ್ದತಿಯನ್ನು ಕಾಣಬಹುದಾಗಿದೆ. ಬುಡಕಟ್ಟುಗಳಲ್ಲಿ ನಾವು ಒಗ್ಗಟ್ಟನ್ನು ಮತ್ತು ಗುಂಪು ಜೀವನವನ್ನು ಕಾಣುತ್ತೇವೆ. ಬೇಡ ಮತ್ತು ಹಸಲರು ಒಗ್ಗಟ್ಟು ಜೀವನ ಕ್ರಮವನ್ನು ಗುರುತಿಸಬಹುದಾಗಿದೆ. ಬೇಡ ಮತ್ತು ಹಸಲರಲ್ಲಿ ಆಡುಭಾಷೆಯನ್ನು ಬಳಸುವುದನ್ನ ಕೂಡ ನೋಡುತ್ತೇವೆ. ಇತರೆ ಭಾಷೆ ಇತರೆ ಸಾಮಾನ್ಯ ಭಾಷೆಗಳಿಗಿಂತ ಭಿನ್ನವಾಗಿರುತ್ತದೆ. ಅಲ್ಲದೇ ಶೈಕ್ಷಣಿಕವಾಗಿಯೂ ಕೂಡ ತುಂಬಾ

ಹಿಂದುಳಿದಿದ್ದಾರೆ. ಕೆಲವೊಂದು ಬುಡಕಟ್ಟುಗಳಿಗೆ ಅವರದೇ ಆದ ನಿರ್ದಿಷ್ಟ ಭಾಷೆಯಿರುವುದಿಲ್ಲ. ಉದಾ: ಕರ್ನಾಟಕ ಮತ್ತು ಆಂದ್ರಪ್ರದೇಶದ ಕಾಡು ಗೊಲ್ಲರು ಮತ್ತು ಬೇಡರು ಕನ್ನಡ ಮತ್ತು ತೆಲುಗು ಭಾಷೆಯನ್ನು ಮಾತಾನಾಡುತ್ತಾರೆ. ಇವರಿಗೆ ಇವರದೇ ಆದ ನಿರ್ದಿಷ್ಟ ಭಾಷೆಯಿಲ್ಲ. ಇವರು ಕನ್ನಡ ಮತ್ತು ತೆಲುಗು ಮಾತನಾಡುವಾಗ ಸ್ಪಷ್ಟವಾಗಿ ಮಾತನಾಡುವುದಿಲ್ಲ. ಕೆಲವು ಪದಗಳ ಅರ್ಥ ಇತರರಿಗೆ ತಿಳಿಯುವುದಿಲ್ಲ. ಪ್ರಸ್ತುತ ಪ್ರಬಂಧವು ಸಂಶೋಧನ ಅಧ್ಯಯನವಾಗಿದ್ದು ಶಿವಮೊಗ್ಗ ಜಿಲ್ಲೆಯಲ್ಲಿರುವ ಶಿವಮೊಗ್ಗ, ಸಾಗರ, ಸೊರಬ, ತೀರ್ಥಹಳ್ಳಿ, ಭದ್ರಾವತಿ, ಶಿಕಾರಿಪುರ ಮತ್ತು ಹೊಸನಗರ ತಾಲೂಕಿಗೆ ಮಾತ್ರ ಈ ಪ್ರಬಂಧದ ವ್ಯಾಪ್ತಿ ಒಳಗೊಂಡಿರುತ್ತದೆ. ಅಧ್ಯಯನದ ಅವಶ್ಯಕತೆಗಾಗಿ ಒಂದು ಚೌಕಟ್ಟಿನಲ್ಲಿ ಪ್ರಬಂಧವನ್ನು ರಚಿಸಬೇಕಿರುವ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆಗೆ ಮಾತ್ರ ಹೆಚ್ಚಿನ ಆದ್ಯತೆಯನ್ನು ನೀಡಲಾಗಿದೆ. ಪ್ರಮುಖವಾಗಿ ಶಿವಮೊಗ್ಗ ಜಿಲ್ಲೆಯ ಬೇಡ ಸಮುದಾಯದವರು ೧೫೦ ಜನ ಮತ್ತು ಹಸಲರು ಬುಡಕಟ್ಟು ಸಮುದಾಯ ೧೦೦ ಜನರನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ.

ಶಿವಮೊಗ್ಗ ಜಿಲ್ಲೆಯಲ್ಲಿ ಬುಡಕಟ್ಟು ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುವ ಬೇಡ ಬುಡಕಟ್ಟು ಹೆಚ್ಚಾಗಿ ಕಂಡು ಬರುತ್ತಾರೆ. ಹಸಲರು ತೀರ್ಥಹಳ್ಳಿ, ಸೊರಬ, ಹೊಸನಗರ, ಮತ್ತು ಸಾಗರದಲ್ಲಿ ಹೆಚ್ಚಾಗಿ ಕಂಡುಬರುವುದನ್ನು ಅಧ್ಯಯನದ ಸಂದರ್ಭದಲ್ಲಿ ಕಾಣಲಾಗಿದೆ. ಹಾಗೆಯೇ ಹೆಚ್ಚಿನದಾಗಿ ಈ ಬುಡಕಟ್ಟು ಸಮುದಾಯಗಳನ್ನು ಮಲೆನಾಡು ಬೆಟ್ಟ, ಕಾನನದ ಕಡಲಿನಲ್ಲಿ ಕಾಣಬಹುದಾಗಿದೆ. ಬೇಟೆ ಸಂಸ್ಕೃತಿ, ಕಾಡು ಸಂಸ್ಕೃತಿ ಮತ್ತು ವಿಶಿಷ್ಟ ಆಚರಣೆಗಳ ಮೂಲಕ ಶಿವಮೊಗ್ಗ ಜಿಲ್ಲೆಯಲ್ಲಿ ಬೇಡ ಬುಡಕಟ್ಟು ಮತ್ತು ಹಸಲರು ಬುಡಕಟ್ಟು ಸಮುದಾಯ ತಮ್ಮದೇ ಆದ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿದ್ದಾರೆ. ಈ ಪ್ರಬಂಧದ ಅಧ್ಯಯನದ ಸ್ವರೂಪವು ಐದು ಅಧ್ಯಯನಗಳನ್ನು ಹೊಂದಿದೆ. ಒಂದನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪವನ್ನು ಕುರಿತು ಅಧ್ಯಯನ ಕೈಗೊಳ್ಳಲಾಗಿದೆ. ಎರಡನೆಯ ಅಧ್ಯಯನದಲ್ಲಿ ಶಿವಮೊಗ್ಗ ಜಿಲ್ಲೆ ಒಂದು ಕ್ಷೇತ್ರ ಪರಿಚಯ ಕುರಿತು ಸವಿಸ್ತಾರವಾದ ಮಾಹಿತಿಗಳೊಂದಿಗೆ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಮೂರನೆಯ ಅಧ್ಯಯನದಲ್ಲಿ ಆದಿವಾಸಿ ಆಚರಣೆಗಳ ವಿಶ್ಲೇಷಣೆ ಬೇಡ ಬುಡಕಟ್ಟಿಗೆ ಸಂಬಂಧಿಸಿದಂತೆ ಮೌಲ್ಯಯುತವಾದ, ಸಾಂಸ್ಕೃತಿಕ ಅನನ್ಯತೆಯ ಮೂಲಕ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ನಾಲ್ಕನೆಯ ಅಧ್ಯಯನದಲ್ಲಿ ಆದಿವಾಸಿ ಆಚರಣೆಗಳ ವಿಶ್ಲೇಷಣೆ ಹಸಲರು ಬುಡಕಟ್ಟಿನ ಬಗ್ಗೆ ಅಧ್ಯಯನ ಕೈಗೊಂಡು ಈ ಅಧ್ಯಯನಕ್ಕೆ ನ್ಯಾಯವನ್ನು ಒದಗಿಸಲಾಗಿದೆ. ಐದನೆಯ ಅಧ್ಯಯನದಲ್ಲಿ ಬೇಡ ಬುಡಕಟ್ಟು ಮತ್ತು ಹಸಲರು: ಆದಿವಾಸಿ ಆಚರಣೆಗಳ ತೌಲನಿಕ ವಿವೇಚನೆ ಅಧ್ಯಾಯ ಆರು ಸಮಾರೋಪಕ್ಕೆ ಸಂಬಂಧಿಸಿದಂತೆ ಎಲ್ಲಾ ವಸ್ತು ವಿಷಯವನ್ನು ಸಮರ್ಪಕವಾದ ರೀತಿಯಲ್ಲಿ ಸಮಾರೋಪದಲ್ಲಿ ಗುರುತಿಸಲಾಗಿದೆ. ಒಟ್ಟಾರೆಯಾಗಿ, ಒಂದು ಪ್ರೌಢ ಪ್ರಬಂಧವು ತನ್ನದೇ ಆದ

ಉತ್ತಮ ರೀತಿಯ ಚೌಕಟ್ಟಿನಲ್ಲಿ ಮೂಡಿ ಬರಲು ನನ್ನ ಶ್ರಮ ಸಾರ್ಥಕವೆಂಬ ಭಾವನೆಯಲ್ಲಿ ಆತ್ಮಸ್ಥೈರ್ಯವನ್ನು ಮೂಡಿಸಿದೆ.

**೧.೪. ಅಧ್ಯಯನದ ವಿಧಾನಗಳು**

ಶಿವಮೊಗ್ಗ ಜಿಲ್ಲೆಯ ವಿವಿಧ ತಾಲೂಕಿನಲ್ಲಿ ವಾಸಿಸುವ ಬೇಡ ಮತ್ತು ಹಸಲರು ಬುಡಕಟ್ಟು ಸಮುದಾಯಗಳನ್ನು ಒಳಗೊಂಡಂತೆ ಕುಟುಂಬಗಳಿದ್ದು, ಅವುಗಳಲ್ಲಿ ಸರಳ ಯಾದೃಚ್ಛಿಕ ಮಾದರಿ ಆಧಾರದ ಮೇಲೆ ಕುಟುಂಬಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

**ಪ್ರಶ್ನಾವಳಿ ವಿಧಾನ**

ಅಧ್ಯಯನ ಕೈಗೊಳ್ಳುವ ಪೂರ್ವದಲ್ಲಿ ಆಯ್ಕೆ ಮಾಡಿಕೊಂಡಿರುವ ಸಮುದಾಯಗಳ ಬಗ್ಗೆ ಮತ್ತು ಸ್ಥಳದ ಕುರಿತು ಪೂರ್ವಪರ ತಿಳಿದುಕೊಂಡು ಆ ಸಮುದಾಯಗಳಿಗೆ ಸಂಬಂಧಿಸಿದಂತೆ ಹಾಗೂ ನೆಲೆಸಿರುವ ಸ್ಥಳದ ಬಗ್ಗೆ ಮಾಹಿತಿಯನ್ನು ಪಡೆದುಕೊಳ್ಳಲು ಅವರಿಗೆ ಸಂಬಂಧಿಸಿದ ಪ್ರಶ್ನಾವಳಿಯನ್ನು ಪೂರ್ವದಲ್ಲಿ ರಚಿಸಿಕೊಂಡು ನಂತರ ಸಂದರ್ಶನವನ್ನು ಮಾಡಲಾಗಿದೆ. ಅಧ್ಯಯನಕ್ಕೆ ಒಳಪಟ್ಟ ಸಮುದಾಯದವರನ್ನು ನೇರವಾಗಿ ವಕ್ತೃಗಳಿಂದ ಸಂಪೂರ್ಣ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ. ಅಲ್ಲದೇ, ಪ್ರಶ್ನಾವಳಿ ವಿಧಾನದ ಮುಖಾಂತರ ಜೊತೆಗೆ ಮೌಖಿಕವಾಗಿ ಬುಡಕಟ್ಟುಗಳ ಮಾಹಿತಿಯನ್ನು ಅಚ್ಚುಕಟ್ಟಾದ ಜವಾಬ್ದಾರಿಯಿಂದ ಸಂಗ್ರಹಿಸಲಾಗಿದೆ. ಹಾಗೆಯೇ ಮುಂದುವರಿದು, ಶಿವಮೊಗ್ಗ ಜಿಲ್ಲೆಯಾದ್ಯಾಂತ ನೆಲೆಸಿರುವ ಪ್ರಮುಖ ಆದಿವಾಸಿ ಬುಡಕಟ್ಟುಗಳಾದ ಬೇಡ ಮತ್ತು ಹಸಲರು ಸಮುದಾಯಗಳ ಆಚರಣೆ, ಕ್ರಿಯಾ ವಿಧಾನ ಹಾಗೂ ಅವರ ಪ್ರಸ್ತುತ ಸ್ಥಿತಿ-ಗತಿಯನ್ನು ತಿಳಿಯಲು ಸೂಕ್ತವಾದ ಪ್ರಶ್ನೆಗಳನ್ನು ರಚಿಸಿಕೊಂಡು ಅಧ್ಯಯನ ಮಾಡಲಾಗಿದೆ.

**ಸಂದರ್ಶನ ವಿಧಾನ**

ಪ್ರಸ್ತುತ ಅಧ್ಯಯನದಲ್ಲಿ ಶಿವಮೊಗ್ಗ ಜಿಲ್ಲೆಯ ಸಾಗರ, ಸೊರಬ, ಭದ್ರಾವತಿ ತೀರ್ಥಹಳ್ಳಿ, ಶಿವಮೊಗ್ಗ ಮತ್ತು ಶಿಕಾರಿಪುರ ತಾಲ್ಲೂಕುಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡು ಈ ತಾಲ್ಲೂಕುಗಳಲ್ಲಿ ಕ್ಷೇತ್ರ ಕಾರ್ಯವನ್ನು ಮಾಡಲಾಗಿದೆ. ಶಿವಮೊಗ್ಗ, ಭದ್ರಾವತಿ, ಸೊರಬ ಈ ತಾಲ್ಲೂಕುಗಳಲ್ಲಿ ಹೆಚ್ಚಾಗಿ ಬೇಡ ಬುಡಕಟ್ಟು ಸಮುದಾಯದವರು ಕಂಡು ಬಂದರೆ ಸಾಗರ ಮತ್ತು ತೀರ್ಥಹಳ್ಳಿ ಹೊಸನಗರ ಸೊರಬ ತಾಲ್ಲೂಕಿನಲ್ಲಿ ಹಸಲರು ಹೆಚ್ಚಿನದ್ದಾಗಿ ಕಂಡು ಬರುತ್ತಾರೆ. ಆದ್ದರಿಂದ ಈ ಎರಡು ಪ್ರಮುಖ ಆದಿವಾಸಿ ಸಮುದಾಯಗಳಿಗೆ ಸಂಬಂಧಿಸಿದಂತೆ. ಸಾಂದರ್ಭಿಕ ಸಂದರ್ಶನ ಮಾಡಲಾಗಿದೆ. ಹಾಗೂ ವಯೋಮಿತಿಗೆ ಅನುಸಾರ ಸಂದರ್ಶನ ಮಾಡಲಾಗಿದೆ. ಬುಡಕಟ್ಟು ಸಮುದಾಯದವರ ಹಿರಿಯ ಮುಖಂಡರಿಂದ ಅನುಭವ ಹೊಂದಿದ ವ್ಯಕ್ತಿಗಳೊಂದಿಗೆ ಸಂದರ್ಶನ ನಡೆಸಿ ಮಾಹಿತಿಯನ್ನು ಪಡೆಯಲಾಗಿದೆ ಈ ಮಾಹಿತಿಯನ್ನು ಪ್ರಬಂಧ ರಚನೆಯಲ್ಲಿ ಬಳಸಿಕೊಳ್ಳಲಾಗಿದೆ.

**ಐತಿಹಾಸಿಕ ವಿಧಾನ**

ಈ ಅಧ್ಯಯನದಲ್ಲಿ ಐತಿಹಾಸಿಕ ವಿಧಾನವನ್ನು ಬಳಸಿಕೊಳ್ಳಲಾಗಿದೆ. ಪ್ರಸ್ತುತವಾದ ಅಧ್ಯಯನಕ್ಕೆ ಐತಿಹಾಸಿಕ ಪುರಾಣ, ಸಮುದಾಯದ ಸೃಷ್ಠಿ ಪುರಾಣ, ಉಗಮ, ಬುಡಕಟ್ಟು, ವೀರರು, ಅವರು ಸಮುದಾಯಗಳಿಗೆ ನೀಡಿದ ಕೊಡುಗೆ ಮುಂತಾದ ಐತಿಹಾಸಿಕ ಅಂಶಗಳು ಪ್ರಮುಖವಾದ ಪಾತ್ರವನ್ನು ನಿರ್ವಹಿಸುತ್ತವೆ. ಒಂದು ಆದಿವಾಸಿ ಸಮುದಾಯದ ಇತಿಹಾಸವನ್ನು ಅರಿತು ಅಧ್ಯಯನದಲ್ಲಿ ಅಳವಡಿಸಿಕೊಂಡಾಗ ಮಾತ್ರ ವಾಸ್ತವಿಕವಾದ ಅಧ್ಯಯನಕ್ಕೆ ಮಹತ್ವ ಬರುತ್ತದೆ.

**ಅವಲೋಕನ ವಿಧಾನ**

ಈ ಅಧ್ಯಯನದಲ್ಲಿ ಅವಲೋಕನ ವಿಧಾನವನ್ನು ಬಳಸಿಕೊಂಡು ಬುಡಕಟ್ಟು ಸಮುದಾಯಗಳ ಜನರ ಜೀವನ ಮಟ್ಟ, ಎದುರಿಸುತ್ತಿರುವ ಸಮಸ್ಯೆಗಳು, ಒಟ್ಟು ಮಾಹಿತಿಯನ್ನು ಪೂರ್ವಕವಾಗಿ ಅವರು ನೆಲೆ ನಿಂತಿರುವ ಸ್ಥಳಗಳನ್ನು ಅವಲೋಕನ ಮಾಡುವುದರ ಮುಖಾಂತರ ಈ ಸಮುದಾಯಗಳ ನೆಲೆಯಲ್ಲಿ ಸಮುದಾಯಗಳ ನಡುವೆ ಹೋಲಿಕೆ ಮತ್ತು ವ್ಯತ್ಯಾಸ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಅಂದರೆ, ಆವಲೋಕನ ವಿಧಾನ ಎಂದು ಸೂಕ್ಷ್ಮವಾಗಿ ಮಾಹಿತಿಯನ್ನು ಸಂಗ್ರಹಿಸುವ ವಿಧಾನವಾಗಿದ್ದು, ಮುಂದುವರಿದು, ಹತ್ತಿರದಿಂದ ಬುಡಕಟ್ಟು ಸಮುದಾಯಗಳ ಜೀವನ ಕ್ರಮ ಮತ್ತು ಆಚರಣೆ ವಿಧಾನಗಳನ್ನು ಅರಿಯಲಾಗಿದೆ. ಹಾಗೂ ಬೇಡ ಮತ್ತು ಹಸಲರು ಈ ಬುಡಕಟ್ಟುಗಳ ಸಮಾಜಿಕ ಜೀವನ ಪದ್ಧತಿ ಸಮುದಾಯದೊಳಗಿನ ಹೆಣ್ಣು ಮಕ್ಕಳ ಸ್ಥಾನಮಾನ, ಪುರುಷರ ಸ್ಥಾನಮಾನ, ನ್ಯಾಯ ಪಂಚಾಯಿತಿ ವೃತ್ತಿ, ಕಲೆ, ಮುಂತಾದ ಜೀವನ ಕ್ರಮಗಳಲ್ಲಿ ಆಗುತ್ತಿರುವ ಬದಲಾವಣೆಯನ್ನು ಸೂಕ್ಷ್ಮವಾಗಿ ಅವಲಂಬಿಸಲಾಗಿದೆ.

**ತೌಲನಿಕ ಅಧ್ಯಯನ**

ತೌಲನಿಕ ವಿಧಾನವು ಬಹುಕಾಲದಿಂದಲೂ ಸಮಾಜ ವಿಜ್ಞಾನಗಳಲ್ಲಿ ಪ್ರಚಲಿತವಾಗಿದೆ. ಸಮಾಜಶಾಸ್ತ್ರದ ಅಧ್ಯಯನದಲ್ಲಿ ಪ್ರಯೋಗಕ್ಕೆ ಹೆಚ್ಚು ಅವಕಾಶವಿಲ್ಲದೇ ಅವಲೋಕನದಿಂದಲೇ ಅನೇಕ ಮಾಹಿತಿಯನ್ನು ಸಂಗ್ರಹಿಸಲು ಸಾಧ್ಯವಾಗಿದೆ. ಸಮಾಜದ ಪ್ರಕ್ರಿಯೆಗಳು ಹಲವು ಬಾರಿ ಹತ್ತಾರು ವರ್ಷಗಳ ಅಂತರಕ್ಕೆ ಪಸರಿಸುತ್ತವೆ. ನಾವು ಹತ್ತಾರು ವರ್ಷಗಳವರೆಗೆ ಕಾದು ಕುಳಿತು, ಸಾಮಾಜಿಕ ಘಟನೆಗಳನ್ನು ಅವಲೋಕಿಸಲು ಸಾಧ್ಯವಿಲ್ಲ. ಆದುದರಿಂದ ವಿವಿಧ ಸಂದರ್ಭಗಳನ್ನೊಳಗೊಂಡ ಸಮಾಜಗಳನ್ನು ಹೋಲಿಸಿ ಆ ಸಂದರ್ಭಗಳ ವ್ಯತ್ಯಾಸಕ್ಕೆ ಕಾರಣಗಳನ್ನು ನಿರ್ಣಯಿಸಲಾಗಿದೆ. ಹಾಗೆಯೇ, ಶಿವಮೊಗ್ಗ ಜಿಲ್ಲೆಯಲ್ಲಿರುವ ಬೇಡ, ಹಸಲರು ಬುಡಕಟ್ಟು ಸಮುದಾಯದ ಸಮಾಜಿಕ ಜೀವನ ಕ್ರಮವನ್ನು ತೌಲನಿಕ ಅಧ್ಯಯನ ಮಾಡಲಾಗಿದೆ. ಹಾಗೂ ಈ ಎರಡು ಸಮುದಾಯದ ಆಚರಣೆ ವಿಧಾನವನ್ನು ತೌಲನಿಕ ವಿವೇಚನೆಗೆ ಒಳಪಡಿಸಲಾಗಿದೆ ಹಾಗೂ ಗ್ರಾಮ ಮತ್ತು ನಗರ ವಾಸಿಗಳ ಆಚರಣೆ ವಿಧಾನವನ್ನು ಜೀವನ ಕ್ರಮ, ಕಲೆ, ಸಾಹಿತ್ಯ, ಅಂಶಗಳನ್ನು ತೌಲನಿಕ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ವಿಷಯ ಅಧ್ಯಯನದ ವಿಧಾನ**

ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಸಂಶೋಧನಾ ಸಮಯದಲ್ಲಿ ಶಿವಮೊಗ್ಗ ಜಿಲ್ಲೆಯಾದ್ಯಂತ ಸಂಪೂರ್ಣವಾಗಿ ಕ್ಷೇತ್ರಕಾರ್ಯ ಮಾಡಲಾಗಿದೆ. ಹಾಡಿಗಳಲ್ಲಿ ವಾಸಿಸುವ ಸಮುದಾಯಗಳಾದ ಬೇಡ ಮತ್ತು ಹಸಲರು ಸಮುದಾಯದವರಿಂದ ಸಂಪೂರ್ಣ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ. ಹೆಚ್ಚಿನ ಮಾಹಿತಿಯನ್ನು ಮಾರ್ಗದರ್ಶಕರು, ವಿದ್ವಾಂಸರಿಂದ ಸಲಹೆಯನ್ನು ಪಡೆದುಕೊಂಡು ಅಧ್ಯಯನದ ಸಾಧಕ ಬಾಧಕಗಳ ಕುರಿತು ಮಾರ್ಗದರ್ಶಕರು, ಮುಖ್ಯಸ್ಥರ ಜೊತೆಯಲ್ಲಿ ಈ ವಿಷಯಕ್ಕೆ ಸಂಬಂಧಪಟ್ಟಂತೆ ಚರ್ಚಿಸಿ ಅಧ್ಯಯನ ಪೂರ್ಣಗೊಳಿಸಲಾಗಿದೆ.

**ಸಹಭಾಗಿತ್ವ ವಿಧಾನ**

ಸಹಭಾಗಿತ್ವ ವಿಧಾನದಿಂದ ಬುಡಕಟ್ಟು ನಿವಾಸಿಗಳಾದ ಬೇಡ ಮತ್ತು ಹಸಲರು ಸಮುದಾಯದವರ ವಾಸ್ತವ ಸ್ಥಿತಿ ಗತಿಯನ್ನು ಅರಿತುಕೊಳ್ಳಲು ಸಾಧ್ಯವಾಯಿತು. ಹಾಡಿಗಳಲ್ಲಿ ಇರುವ ಜನರ ಜೊತೆಯಲ್ಲಿ ಬೆರೆತುಕೊಳ್ಳುವುದರ ಮೂಲಕ ಸಂಪೂರ್ಣ ಮಾಹಿತಿಯನ್ನು ಪಡೆದುಕೊಳ್ಳಲು ಈ ವಿಧಾನ ಅನುವು ಮಾಡಿಕೊಟ್ಟಿದೆ. ಜೊತೆಗೆ ಅವರ ಕಷ್ಟ–ನಷ್ಟಗಳನ್ನು ತಿಳಿದುಕೊಳ್ಳುವುದರ ಮೂಲಕ ಅವರು ಎದುರಿಸುತ್ತಿರುವ ಗಂಭೀರ ಸಮಸ್ಯೆಗಳ ಬಗ್ಗೆ ಸ್ವತಃ ಆ ಸಮುದಾಯಗಳಿಂದ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ.

ಶಿವಮೊಗ್ಗ ಜಿಲ್ಲೆಯಾದ್ಯಂತ ಕ್ಷೇತ್ರಕಾರ್ಯವನ್ನು ಕೈಗೊಂಡು ಹೆಚ್ಚಿನ ಮಾಹಿತಿಯನ್ನು ಪಡೆದುಕೊಳ್ಳಲಾಯಿತು. ತಾಲೂಕಿನಲ್ಲಿ ವಾಸಿಸಿರುವ ಬುಡಕಟ್ಟುಗಳನ್ನು ಭೇಟಿ ಮಾಡಿ ಅವರಿಂದ ದೊರೆತ ಮಾಹಿತಿ, ಅಂಕಿ ಅಂಶಗಳನ್ನು ಒಟ್ಟುಗೂಡಿಸಿ ವಿಶ್ಲೇಷಣೆ ಮಾಡಿ ಫಲಿತಾಂಶವನ್ನು ಪ್ರಾಮಾಣಿಕವಾಗಿ ವಿವರಿಸಲು ಈ ವಿಧಾನವು ತುಂಬಾ ಅನುಕೂಲವಾಗಿದೆ.

ಶಿವಮೊಗ್ಗ ಜಿಲ್ಲೆಯ ಬುಡಕಟ್ಟುಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಮುಖ್ಯವಾಗಿ ಪ್ರಾಥಮಿಕ ಮೂಲಗಳಾದ ಕ್ಷೇತ್ರಕಾರ್ಯ, ದಿನ ಪತ್ರಿಕೆ ಮತ್ತು ಲೇಖನಗಳು ಅಲ್ಲದೇ ವಿವಿಧ ಅಧ್ಯಯನ ಪ್ರಬಂಧಗಳ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಅಧ್ಯಯನಕ್ಕೆ ಸಂಖ್ಯಾಶಾಸ್ತ್ರೀಯ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ಬೇಡ ಮತ್ತು ಹಸಲರು ಬುಡಕಟ್ಟು ಸಮುದಾಯಗಳ ಸಮಾಜಿಕ ಜೀವನ ಕ್ರಮಗಳಿಗೆ ಸಂಬಂಧಿಸಿದಂತೆ ಅಂಕಿ ಸಂಖ್ಯೆಗಳ ಮೂಲಕ ಮಾಹಿತಿಯನ್ನು ಸಂಗ್ರಹಿಸಿಲಾಗಿದೆ.

**ಸಮಷ್ಟೀಕರಣ**

ಸಮಾಜದಲ್ಲಿರುವ ನಾಗರೀಕ ಸಮಾಜಗಳಿಂದ ದೂರವಾಗಿ ತಮ್ಮನ್ನು ಪ್ರತ್ಯೇಕವಾದ ಜೀವನ ಕ್ರಮವನ್ನು ರೂಢಿಸಿಕೊಂಡು ಬದುಕುತ್ತ ತಮ್ಮ ಅನನ್ಯ ವಿಶಿಷ್ಟವಾದ ಸಾಂಸ್ಕೃತಿಕ ಮೌಲ್ಯಗಳನ್ನು ಇಂದಿನವರೆಗೂ ಜೀವಂತವಾಗಿ ಉಳಿಸಿಕೊಂಡು ಬಂದಿರುವ ಒಂದು ಗುಂಪಿನ ಅಥಾವ ಸಮುದಾಯದ ಜನರನ್ನು “ಆದಿವಾಸಿ” ಎಂದು ಸಾಮಾನ್ಯವಾಗಿ ಗುರುತಿಸಲಾಗಿದೆ ಇಂತಹ ಲಕ್ಷಣ ಹೊಂದಿರುವ

ಆದಿವಾಸಿ ಸಮುದಾಯದವರನ್ನು ಕರ್ನಾಟಕ ರಾಜ್ಯದಲ್ಲಿ ಅನೇಕ ಮಾನವಶಾಸ್ತ್ರಜ್ಞರು ಸಮಾಜಶಾಸ್ತ್ರಜ್ಞರು ಸಂಶೋಧಕರು, ಜಾನಪದ ವಿದ್ವಾಂಸರು ಅಧ್ಯಯನ ಕೈಗೊಂಡಿದ್ದಾರೆ ಕರ್ನಾಟಕದಲ್ಲಿ ಒಟ್ಟು ೫೦ ಆದಿವಾಸಿ ಸಮುದಾಯವನ್ನು ನೋಡಬಹುದು.

೧. ಅಡಿಯನ್ ೨. ಬಾರ್ಬಾ ೩. ಬಾವಚ, ಬಾಮ್ಚ ೪. ಭಿಲ್ ೫. ಚೆಂಚು, ಚೆಂಡವಾರ್ ೬. ಬೋಧರಾ ೭. ಡುಬ್ಲ, ತಲವಿಯ, ವಾಳ್ವಿ ೮. ಗೊಂಡ್, ರಾಜ್‌ಗೊಂಡ್ ೯. ಗಮಿಟ್, ಮೌಳ್ವಿ, ವಾಳ್ವಿ ೧೦. ಗೌಡಲು ೧೧. ಹಕ್ಕಿ ಪಿಕ್ಕಿ ೧೨. ಹಸಲರು ೧೩. ಇರುಳರ್ ೧೪. ಇರುಳಿಗ ೧೫. ಜೇನು ಕುರುಬ ೧೬. ಕಾಡು ಕುರುಬ ೧೭. ಕಮ್ಮಾರ ೧೮. ಕಣಿಯಿನೆ, ಕಣ್ಣಾನ್ ೧೯. ಕಥೋಡಿ, ಕಟ್‌ಕಾರಿ ೨೦. ಕಾಟ್ಟು ನಾಯಕನ್ ೨೧. ಕೊಕ್ನ, ಕೊಕ್ನಿ, ಕುಕ್ನ ೨೨. ಕೊಲಿ ಥೋರ್, ಟೋಕರೆ ಕೋಳಿ ೨೩. ಕೊಂಡ ಕಾಪುಸ್ ೨೪. ಕೊರಗ ೨೫. ಕೋಟ ೨೬. ಕೋಯ, ಭೀನೆ ಕೋಯ ೨೭. ಕುಡಿಯ, ಮಲೆಕುಡಿ ೨೮. ಕುರುಬ ೨೯. ಕುರುಮನ್ಸ್ ೩೦. ಮಹಾ ಮಲಸರ್ ೩೧. ಮಲೈಕುಡಿ ೩೨. ಮೆಲಸರ್ ೩೩. ಮಲಯೆ ಕಂಡಿ ೩೪. ಮೆಲೇರು ೩೫. ಮರಾಠ ೩೬. ಮರಾಠಿ ೩೭. ಮೇಧ, ಮೇದಾರ ೩೮. ನಾಯಕ್, ಬೇಡ, ವಾಲ್ಮೀಕಿ ೩೯. ಪಳ್ಳಿಯನ್ ೪೦. ಪಣಿಯನ್ ೪೧. ಪಾರ್ಧಿ ಅಡ್ಡಿಜಿಂಚೇರ್ ೪೨. ಪಟೇಲಿಯ ೪೩. ರಾಠವ ೪೪. ಶೋಲಿಗ ೪೫. ಸೋಲಿಗರು ೪೬. ತೋಡ ೪೭. ವರ್ಲಿ ೪೮. ವಿಟೋಲಿಯ ೪೯. ಯರವ ೫೦. ಸಿದ್ಧಿ. ಈ ಮೇಲಿನ ಸಮುದಾಯಗಳನ್ನು ಕರ್ನಾಟಕದಲ್ಲಿ ಕಾಣಬಹುದು. ಈ ಬುಡಕಟ್ಟು ಸಮುದಾಯಗಳಲ್ಲಿ ಶಿವಮೊಗ್ಗ ಜಿಲ್ಲೆಯಲ್ಲಿ ಕಂಡುಬರುವ ಬೇಡ ಮತ್ತು ಹಸಲರು ಬುಡಕಟ್ಟು ಸಮುದಾಯಗಳನ್ನು ಸಂಶೋಧನೆ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

**೧.೫. ಇದುವರೆಗೆ ನಡೆದಿರುವ ಅಧ್ಯಯನಗಳು**

ಅಧ್ಯಯನದ ಒಂದು ಸಮುದಾಯವಾದ ಬೇಡ ಸಮುದಾಯ ಕುರಿತು ಅಧ್ಯಯನ ಮತ್ತು ಸಂಶೋಧನೆಗಳು ಹೀಗಾಗಲೇ ನಡೆದಿವೆ. ಕರ್ನಾಟಕ ಬುಡಕಟ್ಟು ಸಂಪುಟ–೧ರಲ್ಲಿ ಡಾ. ಕೃಷ್ಣಮೂರ್ತಿ ಹನ್ನೂರು ಅವರು ಬೇಡ ಬುಡಕಟ್ಟು ಸಮುದಾಯ ಹಿನ್ನೆಲೆ ಅವರ ನೆಲೆ, ವಸತಿ ವ್ಯವಸ್ಥೆ ಜೀವನಾವರ್ತನ ಆಚರಣೆ, ಕಟ್ಟೆಮನೆ ಪದ್ಧತಿ, ಕಲೆ ಸಾಹಿತ್ಯದ ಕುರಿತು ಅಧ್ಯಯನ ನಡೆಸಿದ್ದಾರೆ ಆರ್. ರಾಜಣ್ಣ ಅವರ ನಾಯಕ ಜನಾಂಗದ ಇತಿಹಾಸ ಡಾ. ವಿರೂಪಾಕ್ಷಿ ಪೂಜಾರಹಳ್ಳಿ ಅವರ ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಡಾ. ಮಂಜನಾಥ ಬೇವಿನಕಟ್ಟಿ ಅವರ 'ಅದಿವಾಸಿ' ವಾಲ್ಮೀಕಿ ಸಮುದಾಯ, ವ್ಯಾಧ ಚರಿತ್ರೆ, ಡಾ. ಕೆ.ಎಂ. ಮೈತ್ರಿ ಅವರ ಬುಡಕಟ್ಟು ಸಂಪುಟ ೨ರಲ್ಲಿ ಬುಡಕಟ್ಟು ನೆಲೆಯಲ್ಲಿ ಬೇಡರು ಹಾಗೂ ಬೇಡ ಸಮುದಾಯದ ಮುಂದಿನ ಸವಾಲು ಎಂಬ ಲೇಖನ ಡಾ. ಕೆ.ಎಂ. ಮೇತ್ರಿ ಅವರ ಬುಡಕಟ್ಟು ಕುಲ ಕಸುಬುಗಳು, ಡಾ. ಪ್ರಭಾಕರ್ ಅವರ ಮ್ಯಾಸ ಬೇಡ ಕಥನಗಳು ಹಾಗೂ ಅದಿವಾಸಿ ವ್ಯಾಖ್ಯಾನ ಹಾಗೂ ವಿವಿಧ ವಿಶ್ವವಿದ್ಯಾಲಯಗಳಲ್ಲಿ ಎಂ. ಫಿಲ್, ಪಿಎಚ್.ಡಿ, ಮಹಾಪ್ರಬಂಧ ಹಾಗೂ ಮುಂತಾದ ಕೃತಿಗಳು ಬೇಡ ಸಮುದಾಯದ

ಬಗ್ಗೆ ಹೆಚ್ಚಿನ ಅಧ್ಯಯನ ನಡೆಸಲು ಪ್ರೇರಣೆ ನೀಡುತ್ತವೆ. ಹಸಲರು ಈ ಸಮುದಾಯ ಕುರಿತು ಹುಚ್ಚಪ್ಪ ಮಾಸ್ತರ್ ಅವರು ಹಸಲರು ಎಂಬ ಕೃತಿ ರಚಿಸಿದ್ದಾರೆ. ಹಂಪಿಯ ಕನ್ನಡ ವಿಶ್ವ ವಿದ್ಯಾಲಯ ಪ್ರಕಟಿಸಿರುವ ಕರ್ನಾಟಕದ ಜನಪದ ಕಲೆಗಳ ಕೋಶ(೧೯೯೬) ಹಸಲರು ದಬ್ಬಿ ಹಾಡುವ ಸಂಪ್ರದಾಯ ಮತ್ತು ಹಾಡುಗಳು ಕುರಿತು ಅಧ್ಯಯನ ಮಾಡಿದ್ದಾರೆ. ಹಿ.ಚಿ. ಬೋರಲಿಂಗಯ್ಯ ಅವರ ಗಿರಿಜನ ನಾಡಿಗೆ ಪಯಣ ಗ್ರಂಥದಲ್ಲಿ ಹಸಲರ ಕುಡಗುಂಜಿ ದ್ವೀಪದ ಕುರಿತು ವಿವರಣೆ ನೀಡಿದ್ದಾರೆ. ಡಾ. ಚಂದ್ರಶೇಖರ್ ಕಂಬಾರ ಅವರ ಸಂಪಾದಕತ್ವದಲ್ಲಿ ಹೊರತಂದ "ಕನ್ನಡ ಜನಪದ ವಿಶ್ವಕೋಶ" ಎರಡನೇ ಅಧ್ಯಯದಲ್ಲಿ ಹಸಲರ ಬಗ್ಗೆ ಸಾಕಷ್ಟು ಮಾಹಿತಿ ನೀಡಿದ್ದಾರೆ. ಜಿ.ಎಸ್. ಭಟ್‌ರು ಬರೆದಿರುವ 'ಹಸಲರು' ಎಂಬ ಪುಸ್ತಕ ಹಾಗೂ ಉಪಸಂಸ್ಕೃತಿ ಮಾಲೆಯಲ್ಲಿ ಬರೆದಿರುವ ಹಸಲರ ಸಂಸ್ಕೃತಿ ಗ್ರಂಥವು ಸಮುದಾಯದ ಕುರಿತು ಸಾಕಷ್ಟು ಮಾಹಿತಿ ನೀಡುತ್ತದೆ ಹಾಗೆಯೇ ಈ ಸಮುದಾಯದ ಕುರಿತು ಲೇಖನಗಳು ವಾರ ಪತ್ರಿಕೆಯಲ್ಲಿ, ಮಾಸಪತ್ರಿಕೆಯಲ್ಲಿನ ಮಾಹಿತಿಗಳು ಹಸಲರು ಸಮುದಾಯದ ಕುರಿತು ಅಧ್ಯಯನ ನಡೆಸಲು ಪ್ರೇರಣೆ ನೀಡುತ್ತವೆ.

ಇ. ಥರ್ಸ್ಟನ್ ಮತ್ತು ರಂಗಾಚಾರಿಯವರು ರಚಿಸಿದ 'ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸೌತ್ ಇಂಡಿಯಾ' ಎಂಬ ಗ್ರಂಥದಲ್ಲಿ ಹಸಲರ ಬಗ್ಗೆ ಮಾಹಿತಿಯಿದೆ. ೧೯೬೧ರ ಜನಗಣತಿಯನ್ನು ಆಧರಿಸಿ ಸರ್ಕಾರ ಪ್ರಕಟಿಸಿದ 'ಎಥ್ನಾಲಾಜಿಕಲ್ ನೋಟ್ಸ್ ಆಫ್ ಷೆಡ್ಯೂಲ್ಡ್ ಟ್ರೈಬ್ಸ್' ಎಂಬ ಗ್ರಂಥದಲ್ಲಿ ಹಸಲರ ಬಗ್ಗೆ ಸುಮಾರು ಇಪ್ಪತ್ತು ಪುಟಗಳಷ್ಟು ವಿವರಗಳಿವೆ. ಇದು ಜನಗಣತಿ ಸಂದರ್ಭದಲ್ಲಿ ಕ್ಷೇತ್ರ ಕಾರ್ಯ ನಡೆಸಿದ ಬಳಿಕ ರೂಪುಗೊಂಡ ವರದಿ. ಹಸಲರ ಮೂಲ, ಜನಸಂಖ್ಯೆ, ಅವರ ಶಾರೀರಿಕ ಗುಣಗಳು, ಕುಟುಂಬ, ವೇಷಭೂಷಣ, ಆಭರಣ, ಆಹಾರ, ಪಾನೀಯ, ಗೃಹೋಪಕರಣಗಳು, ಭಾಷೆ, ಆರೋಗ್ಯ, ಪರಿಸರ, ಅರ್ಥಿಕ ಜೀವನ, ಧಾರ್ಮಿಕ ಆಚರಣೆ, ಸಾಮಾಜಿಕ ಸುಧಾರಣೆಗಳ ಬಗ್ಗೆ ಸಮಗ್ರ ಮಾಹಿತಿ ಇದೆ. ಪಿ. ಕಮಲಾಕ್ಷ ಅವರು ಬರೆದಿರುವ ದಕ್ಷಿಣ ಕನ್ನಡ ಜಿಲ್ಲೆಯ 'ಹರಿಜನ ಗಿರಿಜನರ ಸಾಮಾಜಿಕ ಇತಿಹಾಸ' ಎಂಬ ಪುಸ್ತಕದಲ್ಲಿ(೧೯೬೮) ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ಸುತ್ತಮುತ್ತಲಿನ ಹಸಲರ ಬಗ್ಗೆ ಮಾಹಿತಿಯಿದೆ. ಕಾಡಿನ ಉತ್ಪನ್ನಗಳನ್ನು ಸಂಗ್ರಹಿಸುವುದು, ಮರ ಕಡಿಯುವುದು ಇವರ ಉದ್ಯೋಗ ಎನ್ನಲಾಗಿದೆ. ಹಸಲರ ವಿವಾಹ ಪದ್ಧತಿ, ಅವರು ಆರಾಧಿಸುವ ದೈವಗಳು, ಉಡುಗೆ-ತೊಡುಗೆಗಳ ಪರಿಚಯವಿದೆ. ಮಾವಿನಕುಳಿ ಶ್ರೀನಿವಾಸ ಅವರು ೧೯೭೮ ಡಿಸೆಂಬರ್ ೧೦ರಂದು ಪ್ರಜಾವಾಣಿಯಲ್ಲಿ ಬರೆದ 'ಮಲೆನಾಡಿನ ಹಲಸರು' ಎಂಬ ಲೇಖನದಲ್ಲಿ ಹಸಲರ ಪೌರಾಣಿಕ ಹಿನ್ನೆಲೆ, ಧಾರ್ಮಿಕ ಆಚರಣೆಗಳು, ಜನಪದ ವೈದ್ಯ, ಶಿಕಾರಿಯನ್ನು ಕುರಿತಂತೆ ಮಾಹಿತಿಗಳು ಇವೆ. ಮತ್ತು ಹಸಲರ ಭಾಷೆ ಕನ್ನಡ. ದಕ್ಷಿಣ ಕನ್ನಡ, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಹಸಲರು ತುಳು ಮಾತನಾಡುತ್ತಾರೆ. ಕನ್ನಡ ವಿಶ್ವವಿದ್ಯಾಲಯ ಬುಡಕಟ್ಟು ಅಧ್ಯಯನ ವಿಭಾಗದ ಪ್ರಧ್ಯಾಪಕರಾದ ಪ್ರೊ. ಹಿ.ಚಿ. ಬೋರಲಿಂಗಯ್ಯನವರು ಸಹ್ಯಾದ್ರಿ ಶ್ರೇಣಿಗಳಲ್ಲಿ ಗಿರಿಜನರ ನೆಲೆಗಳಲ್ಲೆಲ್ಲಾ ಸಂಚರಿಸಿ 'ಗಿರಿಜನ

ನಾಡಿಗೆ ಪಯಣ' ಎಂಬ ಪ್ರವಾಸ ಕಥನವನ್ನು ಬರೆದಿದ್ದಾರೆ. ಈ ಪುಸ್ತಕದಲ್ಲಿ ಕುಡಗುಂಜಿ ದ್ವೀಪದಲ್ಲಿ ಬದುಕುತ್ತಿರುವ ಹಸಲರ ಕಡುಬಡತನದ ಜೀವನವನ್ನು ಚಿತ್ರಿಸಿದ್ದಾರೆ. ಹಸಲರನ್ನು ಕುರಿತು ಖ್ಯಾತ ಸಾಹಿತಿಗಳಾದ ನಾ.ಡಿಸೋಜರವರು 'ಮಂಜಿನ ಕಾನು' ಮತ್ತು 'ಶಿವನ ಡಂಗುರ'ಎಂಬ ಎರಡು ಕಾದಂಬರಿಗಳನ್ನು, 'ಅವರು ತುಳಿದ ಹೋ, ಓಡಿಹೋದವನನ್ನು ಹುಡುಕಲು ಹೊರಟವರು' ಮುಂತಾದ ಕಥೆಗಳನ್ನು ಬರೆದಿದ್ದಾರೆ. ನಾ. ಡಿಸೋಜರವರು ಕಥೆ, ಕಾದಂಬರಿಗಳಲ್ಲಿ ಒಡೆಯರ ದೌರ್ಜನ್ಯ, ಹುಟ್ಟಾಳು ಪದ್ಧತಿಗಳ ಬಗ್ಗೆ ಬೆಳಕು ಚೆಲ್ಲಿದ್ದಾರೆ. ಜಿ.ಎನ್. ಮೋಹನ್ ರಾವ್ 'ಹಸಲರ ಬದುಕಿನ ಕೈದೀಪ' ಎಂಬ ಪುಟ್ಟ ಲೇಖನವನ್ನು ಪ್ರಜಾವಾಣಿಯಲ್ಲಿ ಬರೆದಿದ್ದಾರೆ. ಹಸಲರ ಜೀತ, ಅಡಿಕೆ ತೋಟದಲ್ಲಿ ಮರ ಹತ್ತುವ ಕೌಶಲ, ಮರದಿಂದ ಮರಕ್ಕೆ ಜಿಗಿಯುವ ಸಾಹಸವನ್ನು ಪ್ರಸ್ತಾಪ ಮಾಡಿದ್ದಾರೆ. ಕುಂದಾಪುರ ಭಂಡಾರ್‌ಕರ್ ಕಾಲೇಜಿನ ವಾರ್ಷಿಕಾಂತ ದರ್ಶನದಲ್ಲಿ ಮಡಾಮಕ್ಕಿ ಶಶಿಧರ ಶೆಟ್ಟಿ ಅವರು 'ಮಲೆಯ ಮಕ್ಕಳು ಹಸಲರು'ಎಂಬ ಲೇಖನವನ್ನು ಬರೆದಿದ್ದಾರೆ. ಈ ಲೇಖನದಲ್ಲಿ ಕುಂದಾಪುರ, ಕೊಲ್ಲೂರು, ಮಡಾಮಕ್ಕಿ ಪ್ರದೇಶಗಳಲ್ಲಿ ವಾಸಿಸುವ ಹಸಲರ ಧಾರ್ಮಿಕ ಆಚರಣೆ, ಹವ್ಯಾಸ, ನೈರ್ಮಲ್ಯವನ್ನು ಕುರಿತು ತಿಳಿಸಿದ್ದಾರೆ. ಪ್ರೊ. ಹಿ.ಚಿ. ಬೋರಲಿಂಗಯ್ಯನವರು ೧೯೯೯, ಜುಲೈ ೯ರ ಪ್ರಜಾವಾಣಿ ಸಾಪ್ತಾಹಿಕ ಪುರವಣಿಯಲ್ಲಿ ಬರೆದ 'ಕುಡುಗುಂಜಿ ಪರಿಸರ–ಮನೋಹರ: ಬದುಕು–ವಿಕ್ಷಿಪ್ತ' ಎಂಬ ಸುದೀರ್ಘ ಲೇಖನದಲ್ಲಿ ಕುಡುಗುಂಜಿ ಹಸಲರ ಹೃದಯ ವಿದ್ರಾವಕ ಸ್ಥಿತಿಯನ್ನು ತುಂಬಾ ಮನೋಜ್ಞವಾಗಿ ವಿವರಿಸಿದ್ದಾರೆ. ದೀಪಕ್ ಸಾಗರ್ ಅವರು ೧೯೯೬ ಸೆಪ್ಟೆಂಬರ್ ೨೨ರ ಸುಧಾ ವಾರಪತ್ರಿಕೆಯಲ್ಲಿ 'ಹಸನು ಬದುಕಿನ ಹೊಂಗನಸಿನಲ್ಲಿ ಹಸಲರು' ಮತ್ತು ಸೆಪ್ಟೆಂಬರ್ ೨೮ರ ಡೆಕ್ಕನ್ ಹೆರಾಲ್ಡ್ ಪತ್ರಿಕೆಯಲ್ಲಿ 'HASALAS OF MALNAD' ಎಂಬ ಎರಡು ಲೇಖನಗಳನ್ನು ಬರೆದಿದ್ದಾರೆ. ಈ ಲೇಖನಗಳಲ್ಲಿ ಹಸಲರ ಜೀವನ, ಪಂಗಡ, ಉದ್ಯೋಗ ಇತ್ಯಾದಿ ವಿಷಯಗಳ ಕುರಿತು ಮಾಹಿತಿ ನೀಡಿದ್ದಾರೆ. ಬುಡಕಟ್ಟು ಜನಾಂಗಗಳ ಬಗ್ಗೆ ಸಂಶೋಧನಾ ಅಧ್ಯಯನ ಮಾಡುವುದು ಸವಾಲಿನ ಕೆಲಸವಾಗಿದೆ. ಯಾವುದೇ ರೀತಿಯ ಸಂಶೋಧನೆಯು ಅಂತಿಮವಲ್ಲ. ಪ್ರತಿಯೊಬ್ಬ ಸಂಶೋಧಕನೂ ಕೂಡ ತನ್ನದೇ ಆದ ಮಿತಿಯಲ್ಲಿ ಅಧ್ಯಯನ ಮಾಡುತ್ತಾನೆ ಪ್ರತಿಯೊಂದು ಸಂಶೋಧನೆ ಅಧ್ಯಯನವು ಹೆಚ್ಚಿನ ಸಂಶೋಧನಾ ಅಧ್ಯಯನಕ್ಕೆ ಪ್ರೇರಣೆ ನೀಡುತ್ತದೆ. ಒಂದು ನಿರ್ದಿಷ್ಟ ಕಾಲದ ಸಂದರ್ಭದಲ್ಲಿ ಮಾಡಿದ ಸಂಶೋಧನಾ ಅಧ್ಯಯನವನ್ನು ಮತ್ತೊಬ್ಬ ಸಂಶೋಧಕನು ಬೇರೆ ಕಾಲದ ಸಂದರ್ಭದಲ್ಲಿ ಸಂಶೋಧನಾ ಅಧ್ಯಯನ ಕೈಗೊಂಡಾಗ ವಿಭಿನ್ನ ರೀತಿಯ ಒಳನೋಟಗಳನ್ನು ಕಾಣಬಹುದು. ಹಾಗೆಯೇ ಸಂಶೋಧನಾ ಅಧ್ಯಯನವು ಸದಾ ನಿರಂತರವಾಗಿರುತ್ತದೆ.

ಶ್ರೀ ನಂದಕುಮಾರ್ ಅವರು ಹೊರ ತಂದ ಸಚಿತ್ರ ಸಂಗೀತ ಸರಸ್ವತಿ ಕೃತಿಯು ಶಿವಮೊಗ್ಗ ಜಿಲ್ಲೆಯ ಬಗ್ಗೆ ಮಾಹಿತಿಯನ್ನು ನೀಡುತ್ತದೆ. ಶ್ರೀ ಕುಮಟಾ ಅವರು ಹೊರತಂದ ಶಿಮೊಗೆ ಕೃತಿಯು ಶಿವಮೊಗ್ಗ ಜಿಲ್ಲೆಯ ಪ್ರಾಚೀನ ಕಾಲದ ಮಾಹಿತಿಯನ್ನು ಶಿವಮೊಗ್ಗ ಬಗೆಗಿರುವ ಸ್ಥಳನಾಮವನ್ನು

ನೀಡುತ್ತದೆ. ಶಿವಮೊಗ್ಗಕ್ಕೆ ಮೊದಲು ಶಿಮೊಗೆ ಎಂದು ಕರೆಯುತ್ತಿರುವುದನ್ನು ಈ ಕೃತಿ ತಿಳಿಸುತ್ತದೆ. ಶ್ರೀ ರಾಮಣ್ಣ ಅವರು ಹೊರ ತಂದ ಶಿವಮೊಗ್ಗ ಜಿಲ್ಲಾ ಗೊಂಧಲಿಗರ ಕಥೆಗಳು-ಕೃತಿಯು ಶಿವಮೊಗ್ಗ ಜಿಲ್ಲೆಯ ಪರಿಸರ ಮತ್ತು ಗೊಂಧಲಿಗರ ಮಾಹಿತಿಯನ್ನು ನೀಡುತ್ತದೆ. ಶ್ರೀ ರಾಮಭಟ್ಟ ಅವರು ಹೊರತಂದ ಕೃತಿ ಶಿವಮೊಗ್ಗ ಜಿಲ್ಲಾ ಇತಿಹಾಸ ಮತ್ತು ಸಂಸ್ಕೃತಿ ಕೃತಿಯು ಶಿವಮೊಗ್ಗವನ್ನು ಆಳಿದ ದೊರೆಗಳ ಬಗ್ಗೆ ಮಾಹಿತಿಯನ್ನು ಹೊಂದಿದೆ. ಇಡೀ ಜಿಲ್ಲೆಯ ಇತಿಹಾಸವನ್ನು ಈ ಕೃತಿಯ ಮೂಲಕ ಹೊರೆಗಲ್ಲಿಗೆ ಹಚ್ಚಬಹುದಾಗಿದೆ. ಶ್ರೀ ಪುನರೂರು ಬರೆದಿರುವ ಕೃತಿ ಶಿವಮೊಗ್ಗ ಜಿಲ್ಲಾ ಕಥಾ ಸಂಕಲನ, ಶ್ರೀ ಹನುಮಂತಪ್ಪ ಅವರು ಹೊರ ತಂದ ಕೃತಿ ಶಿವಮೊಗ್ಗ ಜಿಲ್ಲಾ ಜನಪದ ಸಾಹಿತ್ಯ ಮತ್ತು ಇತರ ಆಯ್ಕೆಗಳು ಶ್ರೀ ಹರಿಯಣ್ಣ ಅವರ ಶಿವಮೊಗ್ಗ ಜಿಲ್ಲಾ ಜನಪದ ಕಥೆಗಳು ಶಿವಮೊಗ್ಗ ಜಿಲ್ಲೆಯ ಬಗ್ಗೆ ಬೆಳಕನ್ನು ನೀಡುತ್ತವೆ. ಶ್ರೀ ರಾಮಭಟ್ಟರ ಶಿವಮೊಗ್ಗ ಜಿಲ್ಲೆ ಸಂಗೀತ ಪರಂಪರೆ, ಶ್ರೀ ದಿನಕರ ಅವರ ಶಿವಮೊಗ್ಗ ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರ ನೆನಪುಗಳು ಶ್ರೀ ರಾಮಭಟ್ಟ ಅವರು ಹೊರ ತಂದ ಕೃತಿ ಶಿವಮೊಗ್ಗ ನಗರದ ಇತಿಹಾಸಕಾರರು ಕೃತಿಗಳು ಉಪಯುಕ್ತ ಮಾಹಿತಿಗಳನ್ನು ಒದಗಿಸಿವೆ. ಶ್ರೀ ನಾಗರಹಳ್ಳಿ ಮೋಹನ, ಅವರು ಹೊರ ತಂದ ಶ್ರೀ ಸಿದ್ಧದಾವನಿ, ಶ್ರೀ ಶಾಸ್ತ್ರಿ ಅವರ ಕೃತಿ ಶ್ರೀ ಕೂಡಲಿ ಕ್ಷೇತ್ರ ದರ್ಶನ, ಸಾಯಿಸುತೆ ಅವರ ವಸುದೈವ ಕುಟುಂಬ ಮತ್ತು ಶ್ರೀಮತಿ ಚೌಡಮ್ಮ ತಾಯಿ ಅವರು ಹೊರ ತಂದ ಶ್ರೀ ಕ್ಷೇತ್ರ ಸಿಗಂಧೂರು ಕ್ಷೇತ್ರ ಮಹಾತ್ಮೆ ಕೃತಿಗಳು ಶಿವಮೊಗ್ಗದಲ್ಲಿ ನೆಲೆಸಿರುವ ದೈವಗಳ ಬಗ್ಗೆ ಮಾಹಿತಿಯನ್ನು ಹೊದಗಿಸಿವೆ. ಪ್ರೊ. ಹಂಪನಾ ಅವರ ಹೊಂಬುಜ ಮತ್ತು ಸಾಂತರರು ಕೃತಿ, ನಾಡೋಜ ಪ್ರೊ. ಹಂಪ ನಾಗರಾಜಯ್ಯ ಅವರ ಹೊಂಬುಜ ಕ್ಷೇತ್ರ ಅನುಸಂಧಾನ ಕೃತಿಗಳು ಜೈನಧರ್ಮದ ಶಿವಮೊಗ್ಗ ಜಿಲ್ಲೆಯ ಜೈನಮತ, ಜೈನಕಾಶಿ, ಮತ್ತು ಜೈನರ ಬಗೆಗಿನ ತೀರ್ಥಂಕರ ಬಗ್ಗೆ ಬಸದಿಗಳ ಬಗ್ಗೆ ಜೈನ ಧರ್ಮದ ಬಗ್ಗೆ ಜೈನ ಧರ್ಮ ಇತಿಹಾಸದ ಬಗ್ಗೆ ಮಾಹಿತಿಯನ್ನು ನೀಡಿವೆ. ಡಾ. ದೇವೇಂದ್ರ ಕೀರ್ತಿ ಭಟ್ಟಾರಕ ಮಹಾಸ್ವಾಮಿಗಳು ಬರೆದ ಕೃತಿ ನುಡಿ ಸಿಂಚನ ಮತ್ತು ಶ್ರೀ ವಿ. ಎಸ್. ಕುಮಾರ್ ಅವರು ಹೊರ ತಂದ ಕೃತಿ ಕನ್ನಡನಾಡು ಕೃತಿಯಲ್ಲಿ ಶಿವಮೊಗ್ಗ ಜಿಲ್ಲೆಯ ಕವಿಗಳ ಬಗ್ಗೆ ಮಹತ್ವದ ಮಾಹಿತಿಯನ್ನು ಒದಗಿಸಿದೆ.ಹೀಗೆ ಹಲವಾರು ಕೃತಿಗಳು ಶಿವಮೊಗ್ಗ ಜಿಲ್ಲೆಯ ಬಗ್ಗೆ ಅಪೂರ್ವವಾದ ಉತ್ಕೃಷ್ಟವಾದ ಮಾಹಿತಿನ್ನು ಒಗಿಸಿವೆ. ಎನ್ನುವುದರಲ್ಲಿ ಎರಡು ಮಾತಿಲ್ಲ.

**೧.೬. ಆದಿವಾಸಿ ಬುಡಕಟ್ಟು ಸಮುದಾಯದ ಅರ್ಥ ವಿವರಣೆ**

ಸಮಾಜ ವಿಜ್ಞಾನಗಳ ಅಧ್ಯಯನದಲ್ಲಿ ಅದರಲ್ಲಿಯೂ ಮುಖ್ಯವಾಗಿ ಮಾನವಶಾಸ್ತ್ರದಲ್ಲಿ ಆದಿವಾಸಿ ಸಮುದಾಯ ಎಂಬ ಕಲ್ಪನೆಯನ್ನು ಅಕ್ಷರ ಪೂರ್ವ ಸಂಸ್ಕೃತಿಗಳನ್ನು ಸೂಚಿಸಲು ಬಳಸಲಾಗುತ್ತದೆ. ಆದಿವಾಸಿಗಳು ಸಾಮಾನ್ಯವಾಗಿ ಅನಕ್ಷರಸ್ಥರಾಗಿದ್ದು ಗುಡ್ಡಗಾಡುಗಳಲ್ಲಿ ಹಾಗೂ ಕಾಡು ಮೇಡುಗಳಲ್ಲಿ ವಾಸ ಮಾಡುವವರು ಆಗಿದ್ದಾರೆ ಜಗತ್ತಿನ ಬಹುತೇಕ ರಾಷ್ಟ್ರಗಳಲ್ಲಿ ಮೂಲನಿವಾಸಿಗಳು ಎಂದು ಕರೆಯಲ್ಪಡುವ ಈ ಆದಿವಾಸಿಗಳು ಕಾಣಸಿಗುತ್ತಾರೆ ನಾಗರೀಕ ಜೀವನದಿಂದ

ಬಹು ದೂರವಿರುವ ಇವರು ಗುಡ್ಡ-ಗಾಡುಗಳಲ್ಲಿ ಗಿರಿ, ಶಿಖರಗಳ ಮೇಲೆ ಕಣಿವೆ, ಕಾನನಗಳಲ್ಲಿ ಕರಾವಳಿ ಪ್ರದೇಶಗಳಲ್ಲಿ ಚಿಕ್ಕ ಪುಟ್ಟ ಸಮೂಹಗಳಲ್ಲಿ ವಾಸಿಸುವರು ಕೆಲವು ದೇಶಗಳಲ್ಲಿ ಇವರು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ ಭಾರತದಲ್ಲಿ ಇವರ ಸಂಖ್ಯೆ ಗಣನೀಯವಾಗಿದೆ.

**ಆದಿವಾಸಿ ಸಮುದಾಯದ ವ್ಯಾಖ್ಯೆ**

ಬೋಗಾರ್ಡನ್ ಅವರ ಪ್ರಕಾರ ರಕ್ತ ಸಂಬಂಧ, ಒಂದೇ ಧರ್ಮದ ನೆಲೆ ಇವುಗಳ ಅಧಾರದ ಮೇಲೆ ನಿಂತಿರುವ ಸಮೂಹವೇ ಆದಿವಾಸಿ ಸಮುದಾಯ. ಜಿ.ಎಲ್. ಗಿಲಿನ್ ಮತ್ತು ಜಿ.ಎ. ಗಿಲಿನ್ ಇವರ ಪ್ರಕಾರ ಒಂದು ಸ್ಥಳದಲ್ಲಿ ವಾಸಿಸುತ್ತಾ ಒಂದೇ ಭಾಷೆಯನ್ನು ಮಾತನಾಡುವ ಒಂದು ಸಂಸ್ಕೃತಿಯನ್ನು ಹೊಂದಿರುವ ಸ್ಥಳೀಯ ಸಮುದಾಯ ಸಮುದಾಯಕ್ಕೆ ಆದಿವಾಸಿ ಸಮುದಾಯ ಎಂದು ಹೇಳುತ್ತಾರೆ. ಭಾರತದ ಇಂಪೀರಿಯಲ್ ಗೆಜಿಟಿಯರ್ ಒಂದೇ ಹೆಸರನ್ನು ಹೊಂದಿರುವ ಒಂದೇ ಭಾಷೆಯನ್ನು ಮಾತನಾಡುವ ಒಂದೇ ಸ್ಥಳದಲ್ಲಿ ವಾಸ ಮಾಡುವ ಅಥಾವ ವಾಸಿಸಲು ವಿದ್ಯುಕ್ತವಾಗಿರುವ ಪೂರ್ವ ಒಳಪಂಗಡ ವಿವಾಹ ಪದ್ಧತಿಗೆ ಬದ್ದವಾಗಿರುವ ಸಮುದಾಯಎಂದು ತಿಳಿಸಿದ್ದಾರೆ.

**೧.೭. ಆದಿವಾಸಿ ಸಮುದಾಯದ ಗುಣಲಕ್ಷಣ**

**ಸಾಮಾನ್ಯ ಭೂ ಪ್ರದೇಶ**

ಪ್ರತಿಯೊಂದು ಆದಿವಾಸಿ ಜನಾಂಗವೂ ಒಂದು ನಿರ್ದಿಷ್ಟ ಸ್ಥಳದಲ್ಲಿ ವಾಸಿಸುತ್ತಿರುತ್ತದೆ. ಉದಾಹರಣೆ ನಾಗಾ, ರೆಂಗಮನಾಗಾ ಸಮೂಹಗಳು ನಾಗಲ್ಯಾಂಡಿನಲ್ಲಿಯಾ, ಗಾರೋ, ಖಾಸಿ, ಖಾಸ, ಮೊದಲಾದವು ಅಸ್ಸಾಂನಲ್ಲಿಯೂ ಗೊಂಡರು ಮದ್ಯ ಪ್ರದೇಶದಲ್ಲಿಯೂ, ತೊಡವರು ನೀಲಗಿರಿ ಬೆಟ್ಟಗಳಲ್ಲಿಯೂ ವಡ್ಡ ಜನರು ಸಿಟೋನಿನಲ್ಲಿಯು ನೆಲೆಸಿರುವುದನ್ನು ಕಾಣಬಹುದು.

**ವಿಶಿಷ್ಠ ನಾಮಾಂಕಿತ**

ಪ್ರತಿಯೊಂದು ಜಾತಿಗೂ ತನ್ನದೇ ಆದ ಸಾಮಾಜವಿರುವಂತೆ ಪ್ರತಿಯೊಂದು ಆದಿವಾಸಿ ಸಮುದಾಯವು ತನ್ನದೇ ಆದ ವಿಶಿಷ್ಟವಾದ ಹೆಸರನ್ನು ಹೊಂದಿರುವುದು ಉದಾಹರಣೆ: ಲಂಬು ಗೊಂಡ, ಕೊರಗ, ಮಲಸರ್, ನಾಯಕ, ತೊಡವ ಮುಂತಾದ(ಭಾರತದ ಆದಿವಾಸಿ ಸಮೂಹ) ರೆಡಿ ಇಂಡಿಯನ್ ಪಿಣ್ಮಗಳು ವಿಸ್ಮಿಮೋ,ದಾವೆ ಲಾಮಗೋ ಇತ್ಯಾದಿ ಇವೆ.

**ಸಾಮಾನ್ಯ ಭಾಷೆ**

ಆದಿವಾಸಿಗಳು ತಮ್ಮದೇ ಆದ ಆಡು ಭಾಷೆಯನ್ನು ಹೊಂದಿರುತ್ತಾರೆ ಆ ಭಾಷೆಯನ್ನು ಇತರರು ಅರ್ಥ ಮಡಿಕೊಳ್ಳುವುದು ಕಷ್ಟವಿದೆ. ಅಂದರೆ ಈ ಭಾಷೆಯು ವಿಶಿಷ್ಟವಾದುದಾಗಿದ್ದು ನಾಗರಿಕ ಸಮಾಜಗಳ ಭಾಷೆಗಳಿಂದ ಭಿನ್ನವಾಗಿದ್ದರೂ ಮಾತ್ರವದಲ್ಲದೆ ಉಳಿದ ಆದಿವಾಸಿ ಸಮೂಹಗಳ ಭಾಷೆಗಳಿಂದಲೂ ಪ್ರತ್ಯೇಕವಿರುವುದು ಇದು ಅವರ ಐಕ್ಯತೆಯನ್ನು ಹೆಚ್ಚಿಸಿದೆ. ಆದಿವಾಸಿ ಭಾಷೆಗೆ ಲಿಪಿಯಲ್ಲದೇ ಇರುವುದರಿಂದ ಅವರ ಶಿಕ್ಷಣದಲ್ಲಿ ತೊಡಕುಂಟಾಗಿದೆ.

**ಪೂರ್ವಜರಲ್ಲಿ ನಂಬಿಕೆ**

ಒಂದು ಆದಿವಾಸಿ ಸಮೂಹಕ್ಕೆ ಸೇರಿದವರೆಲ್ಲರು ತಾವು ಒಬ್ಬ ಸ್ತ್ರೀ ಅಥವಾ ಪುರುಷ ಪೂರ್ವಜರಿಂದ ಜನ್ಮ ತಾಳಿದ್ದೇವೆಂಬ ನಂಬಿಕೆಯನ್ನು ಹೊಂದಿರುವರು. ಈ ಪೂರ್ವಜ ಬಹಳ ಪುರಾತನ ವ್ಯಕ್ತಿಯಾಗಿರಬಹುದು ಇಲ್ಲವೇ ಇತ್ತೀಚಿನವನಾಗಿರಬಹುದು. ಕುಟುಂಬ, ಕುಲ, ವಂಶಪಾರಂಪರ್ಯದ ಆಧಾರದ ಮೇಲೆ ಅವರು ತಮ್ಮ ಪೂರ್ವಿಕರನ್ನು ಪೂಜಿಸುವ ಕ್ರಮವೂ ಅವರಲ್ಲಿ ಆಚರಣೆಯಲ್ಲಿದೆ.

**ರಕ್ತ ಬಂಧದ ಭಾಂಧವ್ಯ**

ಆದಿವಾಸಿ ಸಮುದಾಯದಲ್ಲಿ "ಬಂಧುತ್ವ" ಸಂಬಂಧ ಅಥವಾ ರಕ್ತ ಸಂಬಂಧಗಳಿಗೆ ಹೆಚ್ಚಿನ ಪ್ರಾಮುಖ್ಯವಿದೆ ಕುಟುಂಬ, ವಂಶ ರಕ್ತಸಂಬಂಧ ಮುಂತಾದ ಚಿಕ್ಕ ಸಮೂಹಗಳು ರಕ್ತಸಂಬಂಧದ ಅಧಾರದ ಮೇಲೆ ರಚಿತವಾಗಿದೆ ಬಂಧ ಪ್ರೇಮದ ತಳಹದಿಯ ಮೇಲೆ ಸಹಕಾರ ಮತ್ತು ಸಂಬಂಧಗಳು ಬೆಳೆಯುತ್ತದೆ ತಾವೆಲ್ಲರೂ ಒಡನಾಡಿಗಳು ಎಂದು ಅವರು ನಂಬಿರುತ್ತಾರೆ. ಕುಲಗಳು ಬೇರೆ, ಬೇರೆ ಇದ್ದರೂ ಭ್ರಾತೃಪ್ರೇಮದ ಭಾವನೆ ಅವರಲ್ಲಿ ಜಾಗೃತವಿರುತ್ತದೆ.

**ಐಕ್ಯದ ಭಾವನೆ**

ಆದಿವಾಸಿಗಳಿದ್ದು ಸಂಘಟಿತ ಜೀವನ ಅವರಲ್ಲಿ ಐಕ್ಯದ ಭಾವನೆ ಎಂದಿಗೂ ಹಸಿರಾಗಿಯೇ ಇರುತ್ತದೆ ಅಪಾಯ ಸಂಕಟ ಸಮಸ್ಯೆಗಳು ಎದುರಾದಾಗ ಐಕ್ಯದ ಭಾವನೆ ಎದ್ದು ಕಾಣುವುದು ಸಮುದಾಯಿಕ ಭಾವನೆ ಅವರಲ್ಲಿ ತೀವ್ರವಾಗಿದ್ದು ಸಮುದಾಯಕ್ಕೋಸ್ಕರ ದೊಡ್ಡ ತ್ಯಾಗಕ್ಕೂ ಅವರು ಸಿದ್ದರಾಗಿರುತ್ತಾರೆ ಧಾರ್ಮಿಕ ನಂಬಿಕೆಗಳು. ಆದಿವಾಸಿ ಜನರು ಧಾರ್ಮಿಕ ನಿಷ್ಠೆಯುಳ್ಳವರೂ ಸಂಪ್ರದಾಯ ಶರಣರೂ ಆಗಿರುವುದು ಪ್ರಕೃತಿ ಪೂಜೆ, ಪಿತೃಪೂಜೆ ಮತ್ತು ಕುಲದೇವತಾ ಪೂಜೆಗಳನ್ನು ಅವರು ಅಚರಿಸುವ ನಂಬಿಕೆಯಿದೆ.

**ರಾಜಕೀಯ ವ್ಯವಸ್ಥೆ**

ಪ್ರತಿಯೊಂದು ಆದಿವಾಸಿ ಜನಾಂಗವು ತನ್ನದೇ ಆದ ಸಂಪ್ರಾದಾಯಿಕ ಆಡಳಿತ ಕ್ರಮವನ್ನು ಹೊಂದಿದೆ ಅಧುನಿಕ ಅರ್ಥದಲ್ಲಿ ಅಲ್ಲವಾದರೂ ಆದಿವಾಸಿಗಳು ತಮ್ಮದೇ ಆದ ಆಡಳಿತ ಸರ್ಕಾರವನ್ನು ಹೊಂದಿರುವರು ಪ್ರತಿಯೊಂದು ಆದಿವಾಸಿ ಸಮೂಹವೂ ತನ್ನದೇ ಆದ ನಾಯಕನನ್ನು ಹೊಂದಿರುವುದು ನಾಯಕನ ನೇಮಕ ಅನುವಂಶಿಕವಾಗಿ ಇಲ್ಲವೇ ಚುನಾವಣೆಯ ಮೂಲಕ ನಡೆಯುತ್ತದೆ.

**ರಕ್ಷಣೆಯ ಅಗತ್ಯ**

ಆದಿವಾಸಿಗಳು ಯಾವಾಗಲೂ ರಕ್ಷಣೆ ಮತ್ತು ಭದ್ರತೆಗೆ ಹೆಚ್ಚಿನ ಮಹತ್ವ ನೀಡುವುದು ಅವರ ಅನುಭವದಲ್ಲಿ ಅದರ ಅಗತ್ಯ ತೀವ್ರವಾಗಿದೆ ನಾಗರೀಕ ಜನತೆಯ ಸಂಪರ್ಕದ ಸಂದರ್ಭದಲ್ಲಿ ಇದು ಅತೀ ಅಗತ್ಯವಾಗಿರುತದೆನ್ನುವುದು ಅವರ ಅನಿಸಿಕೆಯಾಗಿದೆ.

**ಒಳಪಂಗಡ ವಿವಾಹ ಪದ್ಧತಿ**

ಬಹುತೇಕ ಆದಿವಾಸಿಗಳು ಒಳಪಂಗಡ ವಿವಾಹ ಪದ್ಧತಿಗೆ ಬದ್ಧವಾಗಿರುವವರು ತಮ್ಮ ಸಮೂಹದ ಪಾವಿತ್ರ್ಯತೆ ಐಕ್ಯಸಂಪತ್ತು ಪ್ರತ್ಯೇಕತೆ ಇವುಗಳನ್ನು ಉಳಿಸಿಕೊಳ್ಳಲು ಪ್ರಾಯಶ; ಅವರು ಈ ವಿವಾಹದ ನಿಯಮವನ್ನು ಅನುಸರಿಸಿರುವವರು. ಆದರೆ ಪ್ರತಿಯೊಂದು ಆದಿವಾಸಿ ಸಮೂಹವು ಹೂರ ಪಂಗಡ ವಿವಾಹ ಪದ್ಧತಿಯನ್ನು ಅನುಸರಿಸುವುದು ಸಮಾನ್ಯವಾಗಿದೆ. ಕಾರಣವೇನೆಂದರೆ ಪ್ರತಿಯೊಂದು ಕುಲದ ಸದಸ್ಯರು ಭ್ರಾತೃ ಸಂಬಂಧವನ್ನು ಹೊಂದುವರೆಂದು ನಂಬಿಕೆಯಿರುವುದು.

**ಕೊನೆ ಟಿಪ್ಪಣಿ**

೧. ವೀಣಾ ಎಂ.ಪಿ; ಮನೆ ಸಮಾಜ ಸಂಸ್ಕೃತಿ, ಮ್ಯಾಸ ನಾಯಕ ಹಾಗೂ ಊರನಾಯಕ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫. ಪು.ಸಂ.೧೦

ಅಧ್ಯಾಯ ಎರಡು

# ಶಿವಮೊಗ್ಗ ಜಿಲ್ಲೆ – ಒಂದು ಕ್ಷೇತ್ರ ಪರಿಚಯ

೨.೧. ಶಿವಮೊಗ್ಗ ಜಿಲ್ಲೆಯ ಪರಿಸರ

೨.೨. ಐತಿಹಾಸಿಕ ಹಿನ್ನಲೆ

೨.೩. ಭೌಗೋಳಿಕ ಸ್ವರೂಪ

ಅಧ್ಯಾಯ ೨

# ಶಿವಮೊಗ್ಗ ಜಿಲ್ಲೆ – ಒಂದು ಕ್ಷೇತ್ರ ಪರಿಚಯ

ಕರ್ನಾಟಕ ರಾಜ್ಯವು ೧೯೫೬ರಲ್ಲಿ ಭಾಷಾವಾರು ಆಧಾರದ ಮೇಲೆ ಪುನರ್‌ವಿಂಗಡಣೆಯಾದಾಗ ಉದಯವಾದ ರಾಜ್ಯ. ಕನ್ನಡ ಭಾಷೆಯನ್ನು ಮುಖ್ಯವಾಗಿ ಮಾತನಾಡುವ ಜನರು ವಾಸವಾಗಿದ್ದು, ಭಾರತದ ಪರ್ಯಾಯ ದ್ವೀಪದ ಪಶ್ಚಿಮ ಮಧ್ಯಭಾಗದಲ್ಲಿದೆ. ಇದು ಒಳಗೊಂಡಿರುವ ಪ್ರದೇಶಗಳೆಂದರೆ, ಅರಬ್ಬೀ ಸಮುದ್ರ, ಪಶ್ಚಿಮ ಘಟ್ಟಗಳಿಗೂ ಮಧ್ಯೆ ಸುಮಾರು ೪೦೦ ಕಿ.ಮೀ. ಉದ್ದದ ಸುಂದರವಾದ ಕರಾವಳಿ ಪ್ರದೇಶ, ನಿತ್ಯಹರಿದ್ವರ್ಣದ ಕಾಡು, ಎತ್ತರವಾದ ಪರ್ವತಶ್ರೇಣಿಗಳು ಇರುವ ಏರು ತಗ್ಗುಗಳಿಂದ ಕೂಡಿರುವ ವಿಶಾಲವಾದ ದಕ್ಷಿಣ ಬಯಲುಸೀಮೆ ಹಾಗೂ ಉತ್ತರದಲ್ಲಿ ವಿಸ್ತಾರವಾದ ಮತ್ತು ಹೆಚ್ಚಾಗಿ ವಿರಳ ವೃಕ್ಷಗಳ ಸಾರವತ್ತಾದ ಕಪ್ಪು ಹತ್ತಿಮಣ್ಣನ್ನು ಹೊಂದಿದ ಶಿಲಾಮಯ ಪ್ರಸ್ಥಭೂಮಿ. ಕರ್ನಾಟಕದ ಪೂರ್ವಭಾಗವು ಸಾಮಾನ್ಯ ಚಪ್ಪಟೆಯಾದ ಪೀಠಭೂಮಿಯಾಗಿದ್ದು, ವಿಚಿತ್ರವಾದ ಬೆಟ್ಟಗಳು, ಬೃಹದಾಕಾರದ ಶಿಲಾಖಂಡಗಳಿಂದಲೂ ಕೂಡಿದೆ. ಉತ್ತರ ದಕ್ಷಿಣದಲ್ಲಿ ಬೆಟ್ಟಗಳ ಸರಣಿಗಳು ಹಬ್ಬಿದ್ದು, ಇಡೀ ಪ್ರದೇಶವು ದೊಡ್ಡ ಹಾಗೂ ಸಣ್ಣ ಗಾತ್ರದ ಕಣಿವೆಗಳಾಗಿ ವಿಂಗಡಿಸಿವೆ. ವೈವಿಧ್ಯಮಯ ಭೌಗೋಳಿಕ ವಿನ್ಯಾಸಗಳು ಅದ್ವಿತೀಯ ನದಿಜಾಲಗಳು, ವರ್ಣಮಯ ವನ್ಯ ಮೃಗಗಳ ಪಾರಂಪರಿಕ ಸಂಪತ್ತು ಉಲ್ಲೇಖನೀಯ. ಇತಿಹಾಸ, ಸಾಂಸ್ಕೃತಿಕ ಪರಂಪರೆ, ಶ್ರೇಷ್ಠ ನೈಸರ್ಗಿಕ ಸಂಪತ್ತು ಇವುಗಳಿಂದ ಭಾರತದ ಶ್ರೀಮಂತ ಸಾಂಸ್ಕೃತಿಕ ಪರಂಪರೆಗೆ ಕರ್ನಾಟಕವು ಕಾಣಿಕೆ ನೀಡಿದೆ. ಸಾಹಿತ್ಯ, ಲಲಿತಕಲೆ, ಧರ್ಮ ಹಾಗೂ ಆಧ್ಯಾತ್ಮಿಕ ಕ್ಷೇತ್ರಗಳಲ್ಲಿಯೂ ಕರ್ನಾಟಕದ ಸಾಧನೆ ಪ್ರಮುಖವಾಗಿದೆ. ಪ್ರಾಚೀನ ಹಿಂದೂ ಗುಹಾಂತರ ದೇವಾಲಯಗಳನ್ನು ಹೊಂದಿರುವ ಕರ್ನಾಟಕವು ಅನೇಕ ಧಾರ್ಮಿಕ, ಸಾಂಸ್ಕೃತಿಕ ಪರಂಪರೆಯ ನಿರಂತರತೆಯನ್ನು ಉಳಿಸಿಕೊಂಡು ಬಂದಿದೆ. ಭೂಮಿ, ಅರಣ್ಯ, ಖನಿಜ, ಜಲಮೂಲ, ಮಾನವಶಕ್ತಿ ಮುಂತಾದ ಗಣನೀಯ ಪ್ರಮಾಣದ ಸಂಪನ್ಮೂಲವನ್ನು ಹೊಂದಿರುವ ಕರ್ನಾಟಕ ರಾಜ್ಯವು ೧,೯೨,೨೦೪ ಚ.ಕಿ.ಮೀ ವಿಸ್ತೀರ್ಣವನ್ನು ಹೊಂದಿದೆ. ಇದು ರಾಷ್ಟ್ರದ ಒಟ್ಟು ಭೌಗೋಳಿಕ ವಿಸ್ತೀರ್ಣದ ಶೇಕಡ ೫.೩೫ರಷ್ಟು. ೨೦೧೧ರ ಜನಗಣತಿಯ ಪ್ರಕಾರ ೧,೭೫,೨,೭೫೩ ಜನಸಂಖ್ಯೆಯನ್ನು ಹೊಂದಿದ್ದು, ಇದರಲ್ಲಿ ೮೭೭,೪೧೫ ಪುರುಷರು ಮತ್ತು ೮೭೫,೩೩೮ ಮಹಿಳೆಯರು ಇದ್ದಾರೆ.

ಕರ್ನಾಟಕವು ಭಾರತದ ಜನಸಂಖ್ಯೆಯಲ್ಲಿ ೯ನೇ ಸ್ಥಾನದಲ್ಲಿದೆ. ಕರ್ನಾಟಕದಲ್ಲಿನ ಸಾಕ್ಷರತೆಯ ಪ್ರಮಾಣ ಶೇಕಡ ೭೫.೩೬. ಇದರಲ್ಲಿ ಶೇಕಡ ೮೨.೪೭ರಷ್ಟು ಪುರುಷರು ಮತ್ತು ಶೇಕಡ ೬೬.೦೧ರಷ್ಟು ಮಹಿಳೆಯರು ಇದ್ದಾರೆ ಹಾಗೂ ಲಿಂಗಾನುಪಾತವು ೧೦೦೦ ಪುರುಷರಿಗೆ ೯೯೮ ಮಹಿಳೆಯರಿದ್ದಾರೆ. ಕರ್ನಾಟಕದಲ್ಲಿ ಧರ್ಮವಾರು ಹಂಚಿಕೆಯನ್ನು ಈ ರೀತಿ ಕಾಣಬಹುದಾಗಿದೆ. ಹಿಂದೂಗಳು ಶೇಕಡ ೮೩.೯೯, ಮುಸ್ಲಿಮರು ಶೇಕಡ ೧೨.೩೦, ಕ್ರೈಸ್ತರು ಶೇಕಡ ೦೧.೯೦, ಜೈನರು ಶೇಕಡ ೦.೭೮, ಬೌದ್ಧರು ಶೇಕಡ ೦.೭೩ ಹಾಗೂ ಸಿಖ್ಖರು ಶೇಕಡ ೦.೩೦ರಷ್ಟಿದ್ದಾರೆ. ಕರ್ನಾಟಕವು ಭಾರತದ ಪರ್ಯಾಯ ದ್ವೀಪದ ಪಶ್ಚಿಮ ಭಾಗದಲ್ಲಿದ್ದು. ೧೧೦. ೩೧೧ ಮತ್ತು ೧೮೦. ೪೫೧, ಉತ್ತರ ಅಕ್ಷಾಂಶಗಳಿಗೂ ೭೪೦.೧೨೧ ಮತ್ತು ೭೮೦.೪೦೧ ಪೂರ್ವ ರೇಖಾಂಶಗಳಿಗೂ ಮಧ್ಯದಲ್ಲಿದೆ. ದಕ್ಷಿಣೋತ್ತರವಾಗಿ ಅದು ೭೦೦ ಕಿ.ಮೀ. ಉದ್ದವಾಗಿದ್ದು, ಪೂರ್ವದಿಂದ ಪಶ್ಚಿಮಕ್ಕೆ ೪೦೦ ಕಿ.ಮೀ. ಅಗಲವಾಗಿದೆ. ಕರ್ನಾಟಕವು ಉತ್ತರಕ್ಕೆ ಮಹಾರಾಷ್ಟ್ರ, ವಾಯವ್ಯಕ್ಕೆ ಗೋವಾ, ಪೂರ್ವಕ್ಕೆ ಆಂಧ್ರ ಪ್ರದೇಶ, ದಕ್ಷಿಣ ಮತ್ತು ಆಗ್ನೇಯಕ್ಕೆ ತಮಿಳುನಾಡು, ನೈಋತ್ಯಕ್ಕೆ ಕೇರಳ ಮತ್ತು ಪಶ್ಚಿಮಕ್ಕೆ ಅರಬ್ಬೀ ಸಮುದ್ರವನ್ನು ಎಲ್ಲೆಯನ್ನಾಗಿ ಹೊಂದಿದೆ. ಕರ್ನಾಟಕವನ್ನು ಹಲವಾರು ರಾಜಮನೆತನಗಳು ಆಳ್ವಿಕೆ ಮಾಡಿದ್ದು, ಪ್ರಮುಖರೆಂದರೆ ಬಾದಾಮಿ ಚಾಲುಕ್ಯರು, ಕಲ್ಯಾಣಿ ಚಾಲುಕ್ಯರು, ಗಂಗರು, ಸೇವುಣರು, ಹೊಯ್ಸಳರು, ವಿಜಯನಗರದ ಅರಸರು, ಬಿಜಾಪುರದ ಸುಲ್ತಾನರು, ಮೈಸೂರಿನ ಅರಸರು ಮುಖ್ಯವಾಗಿದ್ದಾರೆ. ೧೯೫೬ರ ರಾಜ್ಯ ಪುನರ್ವಿಂಗಡಣಾ ಕಾಯಿದೆಯ ಪ್ರಕಾರ ರಾಜ್ಯದ ಪ್ರಾಕೃತಿಕ ಮೇರೆಗಳಲ್ಲಿ ಮತ್ತು ವಿಸ್ತೀರ್ಣದಲ್ಲಿ ಬದಲಾವಣೆ ಮಾಡಲಾಯಿತು. ಆದರೂ ೧ನೇ ನವೆಂಬರ್, ೧೯೫೬ರ ಕಾನೂನಿನಂತೆ ರಚಿತವಾದ ಕರ್ನಾಟಕ ರಾಜ್ಯ ಇಂದಿಗೂ ಹಲವು ಗಡಿ ಸಮಸ್ಯೆಗಳನ್ನು ಎದುರಿಸುತ್ತಿದೆ. ಫಲವತ್ತಾದ ಮುಖ್ಯ ಹಾಗೂ ಜಲವಿದ್ಯುತ್ ಶಕ್ತಿ ಸಂಪನ್ಮೂಲಗಳನ್ನು ಹೊಂದಿರುವ ಕರ್ನಾಟಕದ ಭೌಗೋಳಿಕ ಪರಿಸರವು ಕರ್ನಾಟಕವನ್ನು ಸಮೃದ್ಧವನ್ನಾಗಿ ಮಾಡಿದೆ. ಒಟ್ಟಾರೆಯಾಗಿ ಕರ್ನಾಟಕವು ಐತಿಹಾಸಿಕ ಹಾಗೂ ಭೌಗೋಳಿಕ ಹಿನ್ನೆಲೆಯ ದೃಷ್ಟಿಯಿಂದ ಬಹಳ ವೈವಿಧ್ಯತೆಯನ್ನು ಪಡೆದುಕೊಂಡಿದೆ. ಕರ್ನಾಟಕ ರಾಜ್ಯದ ೩೦ ಜಿಲ್ಲೆಗಳಲ್ಲಿ ಶಿವಮೊಗ್ಗವು ಒಂದಾಗಿದೆ. ಶಿವಮೊಗ್ಗ ಜಿಲ್ಲೆಯ ಸಾಗರದಿಂದ ಸೊರಬಕ್ಕೆ ಹೋಗುವ ಹಾದಿಯಲ್ಲಿ ಸುಮಾರು ೧೦ ಕಿ.ಮೀ. ದೂರದಲ್ಲಿ ನಾಡಕಲಸಿ ಎಂಬ ಗ್ರಾಮ ಬರುತ್ತದೆ. ಈ ಗ್ರಾಮದಲ್ಲಿ ಮನೆ ಮಾಡಿರುವ ನೀಲಕಂಠೇಶ್ವರ ಮತ್ತು ಮಲ್ಲಿಕಾರ್ಜುನ ದೇಗುಲಗಳು ಹೊಯ್ಸಳ ಶಿಲ್ಪಕಲಾ ಸೊಬಗಿಗೆ ತನ್ನದೇ ಆದ ವಿಶೇಷ ಮೆರಗು ನೀಡಿವೆ. ಎರಡೂ ದೇಗುಲಗಳ ಕೆತ್ತನೆಗಳು ಅತ್ಯಂತ ನವಿರವಾದ ಮತ್ತು ಸೂಕ್ಷ್ಮತೆಯಿಮದ ಕೂಡಿದ್ದು ಗರ್ಭಗುಡಿ, ಸುಕನಾಸಿ, ನವರಂಗ ಹಾಗೂ ಎರಡು ದೇಗುಲಗಳ ಬಸವ ಮಂಟಪಗಳು ತನ್ನದೇ ಆದ ವೈಶಿಷ್ಟ್ಯಗಳಿಂದ ಕೂಡಿವೆ. ಸುಮಾರು ೩೫೦ ವರ್ಷಗಳ ಹಿಂದೆ ಹೊಯ್ಸಳರ ಎರಡನೆಯ ಬಲ್ಲಾಳನ ಮಾಂಡಲಿಕನಾಗಿದ್ದ ಕೆಳದಿಯ ಬಾಳೆಯಣ್ಣ ಅತವಾ ಬಾಳೆಯಮ್ಮ ಪೆರ್ಗಡೆಯು ಕಟ್ಟಿಸಿದ ದೇಗುಲವೆಂದು ಆಗ ಈ

ಪ್ರದೇಶವು ಕುಂದನಾಡು, ಕೊಡನಾಡು ಎಂದು ಕರೆಯಲ್ಪಟ್ಟಿತ್ತು. ಎಂಬ ಅಂಶಗಳನ್ನು ಮನಗಾಣಬಹುದು. ಮಲ್ಲಿಕಾರ್ಜುನ ಸ್ವಾಮಿಯ ನವರಂದಳಲ್ಲಿ ಕಂಬಳಗಳಲ್ಲಿ ಒಂದನ್ನು ಜಿರಲೆ ಕಂಬವೆಂತಲೂ ಕರಯುತ್ತಾರೆ. ಚಿಕ್ಕಮಕ್ಕಳಿಗೆ ಕಿವಿ ಸಂಧಿಗಳಲ್ಲಾಗುವ ಹುಣ್ಣು, ಹಲವು ವಿಧದ ಚರ್ಮರೋಗಗಳಿಗೆ ಈ ಕಂಬಕ್ಕೆ ಕೆಮ್ಮಣ್ಣನ್ನು ಹಸಿ ಮಾಡಿ ಕ್ರಮಬದ್ಧವಾಗಿ ಲೇಪಿಸಿದರೆ ಎಂಥ ಹುಣ್ಣಾದರೂ ವಾಸಿಯಾಗುತ್ತದೆಂಬ ನಂಬಿಕೆ ಈಗಲೂ ಇದ್ದು, ವರ್ಷಂಪ್ರತಿ ನೂರಾರು ಜನ ಇದ್ದಕ್ಕೆಂದೆ ಇಲ್ಲಿಗೆ ಬಂದು ಹೋಗುತ್ತಾರೆ. ಮಲ್ಲಿಕಾರ್ಜುನ ಸ್ವಾಮಿ ದೇಗುಲದಲ್ಲಿಯ ಸಪ್ತಮಾತೃಕೆಯ ಶೌದ್ರತೆಯ ಪ್ರತೀಕದಂತಿರುವ ದುರ್ಗಾ ಪರಮೇಶ್ವರಿ ವಿಗ್ರಹಗಳ ನೋಡುಗರ ಗಮನ ಸೆಳೆಯುತ್ತವೆ. ಮಲೆನಾಡಿನ ತವರೂರಾದ ಶಿವಮೊಗ್ಗ ಜಿಲ್ಲೆಯು ಜಲಧಾರೆ, ನಿಸರ್ಗಧಾಮ, ಪಕ್ಷಿಧಾಮಗಳನ್ನಲ್ಲದೇ ಕೆಲವು ಶಿಲ್ಪಕಲಾ ಸೊಬಗಿನಿಂದ ಕೂಡಿದ ದೇಗುಲಗಳನ್ನು ತನ್ನ ಮಡಿಲಲ್ಲಿ ಇರಿಸಿಕೊಂಡಿದೆ. ಮಲೆನಾಡು ಹೆಸರೇ ಸೂಚಿಸುವಂತೆ ಸಹ್ಯಾದ್ರಿ, ಕೊಡಚಾದ್ರಿ, ಕುದುರೆಮುಖ, ಕುಮಾರ ಪರ್ವತ ಮೊದಲಾದ ಸುಂದರ ಬೆಟ್ಟ ಪ್ರದೇಶಗಳ ಬೀಡು ಕಾವೇರಿ, ಶರಾವತಿ, ನೇತ್ರಾವತಿ, ಹೇಮಾವತಿ, ಕಾಳಿ ಮೊದಲಾದ ಜೀವ ನದಿಗಳ ನಾಡು. ಮಲೆನಾಡಿನ ತವರೂರೆಂದೇ ಖ್ಯಾತಿವೆತ್ತ ಶಿವಮೊಗ್ಗ ಜಿಲ್ಲೆಯು ಚಲುವೆಂಬ ಅಂಗಳದಲ್ಲಿ ನಿಸರ್ಗದೇವಿಯು ಮನೆ ಮಾಡರುವ ಕರ್ನಾಟಕದ ಅತಿ ಸುಂದರ ತಾಣ. ಶಿವಮೊಗ್ಗ ಸುಂದರ ದೇಗುಲ ಸಿಗಂಧೂರಿನ ಶ್ರೀ ಚೌಡೇಶ್ವರಿ ದೇಗುಲ ಸಾಗರದಿಂದ ಕೊಲ್ಲೂರಿಗೆ ಹೋಗುವ ಹಾದಿಯಲ್ಲಿ ೩೭ ಕಿ.ಮೀ. ದೂರದಲ್ಲಿದೆ. ಸಿಂಗಧೂರು ಎಂಬ ಕಣ್ಣಿಗೆ ಹಬ್ಬ ನೀಡುವ ಸುಮಧುರಾನುಭವದ ಸುಂದರ ತಾಣ. ಹೊಳೆಬಾಗಿಲು ಸಿಂಗಧೂರು ಪರಿಸರ ತುಂಬಾ ಸುಂದರವಾದ್ದು, ಸುಮಾರು ೩ ಕಿ.ಮೀ. ಲಾಂಚ್‌ನಲ್ಲಿನ ೨೦ ನಿಮಿಷಗಳ ಪಯಣ. ಲಾಂಚ್‌ನ ಪಯಣದ ನಂತರದ ಎದುರು ದಡದ ಕೊಡಚಾದ್ರಿಯ ದಟ್ಟ ಅರಣ್ಯದಲ್ಲಿ ೬ ಕಿ.ಮೀ. ಪಯಣಿಸಿದಲ್ಲಿ ಸಿಂಗಧೂರು ಎಂಬಲ್ಲಿ ಸಿಂಗಧೂರೇಶ್ವರಿ, ಚೌಡೇಶ್ವರಿ ಎಂದೆಲ್ಲಾ ಕರೆಯಲ್ಪಡುವ ದೇವಿಯ ದೇಗುಲ ಸಿಗುತ್ತದೆ. ಅನೇಕ ಋಷಿ ಮುನಿಗಳ ತಪಸ್ಸಿನ ಫಲದಿಂದ ಉದ್ಭವಿಸಿದ ಮೂರ್ತಿಯೆಂದು ಹೇಳಲಾಗಿದೆ. ಈ ಮುಂಚೆ ಉಗ್ರ ಸ್ವರೂಪಿಯಾಗಿದ್ದ ದೇವಿಯನ್ನು ವರದಾಪುರದ ಶ್ರೀಧರ ಸ್ವಾಮಿಗಳು ಇಲ್ಲಿಗೆ ಬಂದು ದೇವಿಯನ್ನು ಶಾಂತಗೊಳಿಸಿದರಂತೆ ಅಂದಿನಿಂದ ಸೌಮ್ಯ ಸ್ವರೂಪಿಯಾದ ಹಸನ್ಮುಖಳಾದ ದೇವಿಯನ್ನು ಇಲ್ಲಿ ಕಾಣಬಹುದು. ಶಿವಮೊಗ್ಗ ಜಿಲ್ಲೆಯು ಮಲೆನಾಡಿನ ತವರೂರು. ಪ್ರವಾಸಿಗರನ್ನು ಕೈಬೀಸಿ ಕರೆಯುವ ನಿಟ್ಟಿನಲ್ಲಿ ಇಕ್ಕೇರಿಯ ಅಘೋರಿಶ್ವರ ದೇಗುಲವೂ ಒಂದು. ಇಕ್ಕೇರಿಯು ಸಾಗರದಿಂದ ಕೇವಲ ೬ ಕಿ. ಮೀ. ದೂರದಲ್ಲಿದೆ. ಮಲೆನಾಡಿನ ಅತೀ ದೊಡ್ಡ ದೇಗುಲವೆಂದು ಪ್ರಖ್ಯಾತವಾಗಿದೆ. ಇಕ್ಕೇರಿಯ ಅಘೋರೇಶ್ವರ ದೇವಾಲಯ. ಇದು ಸುಮಾರು ೫೦೦ ವರ್ಷಗಳ ಇತಿಹಾಸವನ್ನು ಹೊಂದಿದ್ದು, ಕೆಳದಿಯ ಅರಸರ ಕಾಲದಲ್ಲಿ ಶಿವಪ್ಪನಾಯಕನಿಂದ ನಿರ್ಮಿತವಾದಂತಹ ಭವ್ಯ ದೇಗುಲವಿದಾಗಿದೆ. ಇಕ್ಕೇರಿಯು ಕೆಳದಿಯ ಅರಸರ ಎರಡನೆಯ ರಾಜಧಾನಿಯೂ ಹೌದು. ಶಿವಮೊಗ್ಗ ಜಿಲ್ಲೆಯ ಸಾಗರದಿಂದ ಕೇವಲ ೭ ಕಿ. ಮೀ. ದೂರದಲ್ಲಿ ಕೆಳದಿ ಸಂಸ್ಥಾನವಿದೆ.

ಕೆಳದಿಯಲ್ಲಿ ಒಂದು ಸುಂದರ ದೇಗುಲವಿದೆ. ಇದು ೪ ಶತಮಾನಗಳ ಇತಿಹಾಸವನ್ನು ಹೊಂದಿದೆ. ವಿಜಯನಗರದ ಅರಸರ ಸಾಮಂತನಾಗಿದ್ದ ಚೌಡಪ್ಪಗೌಡನೆಂಬ ಶ್ರೀಮಂತ ರೈತನಿಗೆ ಸಿಕ್ಕ ನಿಧಿಯಿಂದ ಕೆಳದಿಯಲ್ಲಿ ಒಂದು ಅರಮನೆ, ಕೋಟೆಯನ್ನು ಕಟ್ಟಿಸಿದ. ನಂತರ ಕೆಳದಿಯನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡನಂತೆ. ಹೀಗಿರುವಾಗ ಇಲ್ಲಿಯ ಸೀಗೇವಳ್ಳಿಯಲ್ಲಿ ರಾಮೇಶ್ವರ ಲಿಂಗದ ಮೇಲೆ ಹುತ್ತ ಬೆಳದಿತ್ತಂತೆ. ಗುಪ್ತನಿಧಿ ದೊರೆಯುವ ಮುನ್ನ ರೈತನಾಗಿದ್ದ ಚೌಡಪ್ಪ ನಾಯಕನಿಗೆ ಸೇರಿದ ಹಸುವೊಂದು ನಿತ್ಯ ಆ ಹುತ್ತದ ಮೇಲೆ ನಿಂತು ತಾನೇ ಹಾಲು ಕರೆದುಬರುತ್ತಿತ್ತಂತೆ. ಇದನ್ನು ಕಂಡು ಚಕಿತನಾದ ಚೌಡಪ್ಪ ಹುತ್ತ ಹಗೆದು ನೋಡಿದಾಗ ಅಲ್ಲೊಂದು "ರಾಮೇಶ್ವರಲಿಂಗ" ಗೋಚರಿಸಿತಂತೆ. ತನಗೆ ದೊರೆತ ರಾಮೇಶ್ವರ ಲಿಂಗವನ್ನು ಪ್ರತಿಷ್ಠಾಪಿಸದನಂತೆ ಇವನ ಅಖಂಡ ಭಕ್ತಿಯ ಫಲವಾಗಿ ಮುಂದೆ ಕೆಳದಿ ಸಂಸ್ಥಾನದ ರಾಜನಾದ. ಹೀಗೆ ಹಲವು ರಾಜ ಮನೆತನಗಳು ಆಳ್ವಿಕೆ ಮಾಡಿದ್ದರು ಹೊಯ್ಸಳರ ಪ್ರಾಬಲ್ಯ ಹೆಚ್ಚಾಗಿದ್ದುದನ್ನು ಕಾಣಬಹುದು. ಕ್ರಿ.ಶ. ಹದಿನಾರನೇ ಶತಮಾನದ ಪ್ರಾರಂಭದಲ್ಲಿ ಕೆಳದಿಯ ನಾಯಕರು ಪ್ರಬಲವಾಗಿದ್ದು, ಬಹುಕಾಲದವರೆಗೆ ರಾಜ್ಯವನ್ನು ಮುನ್ನಡೆಸಿದರು. ಇವರಲ್ಲಿ ಕೆಳದಿಯ ಶಿವಪ್ಪನಾಯಕನ ಆಡಳಿತ ಉತ್ತಮವಾಗಿರುವುದು ಕಂಡುಬರುತ್ತದೆ. ಕೆಳದಿಯ ನಾಯಕರನ್ನು ಹೈದರಾಲಿಯು ಕ್ರಿ.ಶ.೧೭೬೮ರಲ್ಲಿ ಸೋಲಿಸಿ ಬಿದನೂರನ್ನು ವಶಪಡಿಸಿಕೊಂಡಿದ್ದರಿಂದ ಈ ಜಿಲ್ಲೆಯು ಮೈಸೂರು ರಾಜ್ಯ ಅಧಿಪತ್ಯಕ್ಕೊಳಗಾಯಿತು. ಕ್ರಿ.ಶ.೧೮೪೯ರ ಮೈಸೂರಿನ ಒಡೆಯರ ಕಾಲದಲ್ಲಿ ಫೌಜದಾರಿ ನಗರದ ಭಾಗವಾಗಿ ಈಗಿನ ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಗಳಿದ್ದವು. ನಂತರ ೧೯೫೧ರಲ್ಲಿ ಶಿವಮೊಗ್ಗ ಜಿಲ್ಲೆಯು ಅಸ್ತಿತ್ವಕ್ಕೆ ಬಂದಿತು.

**೨.೧. ಶಿವಮೊಗ್ಗ ಜಿಲ್ಲೆಯ ಪರಿಸರ**

ವಿಶಾಲವಾದ ಬಯಲಿನ ಸಾಮಾನ್ಯ ಅರಣ್ಯ ಪರಿಸರ, ಸಮೃದ್ಧವಾದ ಜಲರಾಶಿಯಿಂದ ಹರಿಯುವ ತುಂಗೆ ಮತ್ತು ಬೇಟೆಗೆ ಸಾಕಷ್ಟು ಸಂಖ್ಯೆಯಲ್ಲಿ ಸಿಗುತ್ತಿದ್ದ ಪ್ರಾಣಿಗಳಿಂದ ಪ್ರಾಚೀನ ಮಾನವರು ನೆಲೆಯೂರಲು ಸೌಕರ್ಯಗಳಿದ್ದವು. ಕ್ರೂರಮೃಗಗಳು ಹಾಗೂ ಇನ್ನಿತರ ಭಯವಿಲ್ಲದೆ ಬದುಕುತ್ತಿದ್ದ ತುಂಗೆಯ ಮಡಿಲಲ್ಲಿ ಸಾಧ್ಯತೆಯೊಂದು ರೂಪುಗೊಳ್ಳುತ್ತಿತ್ತು. ಇದೇ ಮುಂದಿನ ಹತ್ತು ಹಲವಾರು ನೆಲೆಗಳಾಗಿ ನಾಗರಿಕ ಬದುಕಿನ ಸಂಕೇತವಾಯಿತು. ಶಿವಮೊಗ್ಗ ಎಂಬ ಹೆಸರನ್ನು ಗಮನಿಸಿದರೆ ಪೌರಾಣಿಕ ಮತ್ತು ಐತಿಹಾಸಿಕವಾಗಿರುವ ಅನೇಕ ಅಂಶಗಳನ್ನು ಒಳಗೊಂಡಿರುವುದು ಸ್ಪಷ್ಟವಾಗುತ್ತದೆ. ಅದಕ್ಕೆ ಪ್ರಚಲಿತವಿರುವ ಕಥೆಯನ್ನು ಆಧರಿಸಿ ವಿದ್ವಾಂಸರು ಗುರುತಿಸಿರುವುದು ಉಲ್ಲೇಖಾರ್ಹವಾಗಿದೆ. ಈ ಊರಿನ ತುಂಗಾ ನದಿಯ ದಂಡೆಯಮೇಲೆ ದೂರ್ವಾಸ ಋಷಿಗಳ ಆಶ್ರಮವಿತ್ತಂತೆ. ಇವರು ಮಹಾಶೀಘ್ರ ಕೋಪಿಯಾಗಿದ್ದು, ಈ ಗುಣ ಪುರಾಣ ಪ್ರಸಿದ್ಧವಾಗಿದೆ. ಅದಕ್ಕೋಸ್ಕರ ತಮ್ಮ ಕೋಪವನ್ನು ಆದಷ್ಟು ಹತೋಟಿಯಲ್ಲಿ ಇಟ್ಟುಕೊಳ್ಳಲು ಪ್ರತಿನಿತ್ಯವೂ ಈ ಪ್ರದೇಶದಲ್ಲಿ ಬೆಳೆಯುತ್ತಿದ್ದ ಒಳ್ಳೆಯ ಎಳೆಗಾರಿಕೆ ಹುಲ್ಲಿನಿಂದ ತೆಗೆದ ರಸವನ್ನು ತಮ್ಮ ಕಮಂಡದಲ್ಲಿ ಸಂಗ್ರಹಿಸಿಟ್ಟು ತಮ್ಮ ಅನುಷ್ಠಾನ ಮುಗಿಸಿ ನಂತರ ಅದನ್ನು ಸೇವಿಸುತ್ತಿದ್ದರಂತೆ. ಒಂದು ದಿನ ಗರಿಕೆ

ರಸವನ್ನು ಸಂಗ್ರಹಿಸಿಟ್ಟು ಅನುದಿನದಂತೆ ನಿತ್ಯಾನುಷ್ಠಾನಕ್ಕೆ ಹೋದ ಸಮಯದಲ್ಲಿ ಆ ಸ್ಥಳದಲ್ಲಿ ದನ ಕಾಯುತ್ತಿದ್ದ ಹುಡುಗರಿಗೆ ಕಮಂಡಲವು ಕಾಣಿಸಿಕೊಂಡಿತು. ಕುತೂಹಲದಿಂದ ಅದರಲ್ಲಿದ್ದ ರಸವನ್ನು ಕುಡಿದರು. ಅಲ್ಲದೆ ಅದರ ಸವಿಯಾದ ರುಚಿಗೆ ಬಾಯಿ ಚಪ್ಪರಿಸಿದರು. ಆ ಪಾತ್ರೆಗೆ ಅವರ ಭಾಷೆಯಲ್ಲಿ 'ಮೊಗ್ಗೆ' ಎಂದು ಕರೆಯುವ ವಾಡಿಕೆಯಿತ್ತು. ಈ ರಸ ಅಷ್ಟು ಸಿಹಿಯಾಗಿರುವುದಕ್ಕೆ ಆ ಮೊಗ್ಗೆಯಲ್ಲಿ ಏನೋ ದಿವ್ಯಶಕ್ತಿ ಇರಬೇಕೆಂದು ಆ ಮುಗ್ಧರು ಬಗೆದರು. ಅದು ಅವರಿಂದ 'ಸಿಮೊಗೆ' ಯಾಯಿತು. ಜಿಲ್ಲೆಯ ಪಶ್ಚಿಮ ಭಾಗದ ಪಶ್ಚಿಮ ಘಟ್ಟಗಳಲ್ಲಿ ಅಧಿಕ ಮಳೆಯಾಗುತ್ತಿರುವುದರಿಂದ ಸಹ್ಯಾದ್ರಿ, ಉತ್ತುಂಗ ಪರ್ವತ ಶ್ರೇಣಿಗಳಿಂದ ಕೂಡಿರುವುದರಿಂದ ಸಹ್ಯಾದ್ರಿ ಪರ್ವತ ಶ್ರೇಣಿಗಳೆಂದು ಕರೆಯಲಾಗುತ್ತದೆ. ಪೌರಾಣಿಕವಾಗಿ ದುರ್ವಾಸ ಕ್ಷೇತ್ರವೆಂದು ಹೆಸರು ಪಡೆದಿದ್ದ ಶಿವಮೊಗ್ಗದ ಮೊದಲ ಹೆಸರು 'ಸಿಮೊಗೆ' ಎಂದು ಕ್ರಿ.ಶ. ೧೦೭೯ರ ತಟ್ಟಿಕೆರೆಯ ಶಾಸನದಲ್ಲಿ ಕಾಣಿಸಿಕೊಂಡಿದೆ. ಆ ಸಮಯದಲ್ಲೇ ಇದೊಂದು ಗ್ರಾಮವಾಗಿ ರೂಪುಗೊಂಡಿದೆ. ಹಲವು ಶತಮಾನಗಳ ವಿವಿಧ ಘಟ್ಟಗಳನ್ನು ಹಾಯ್ದು ಬಂದ ಸಿಮೊಗೆ ಮುಂದೆ ಶಿವಮೊಗ್ಗೆ ಮತ್ತು ಸಿಹಿಮೊಗೆಯಾಗಿ ಇಂದಿನ ಶಿವಮೊಗ್ಗ ಎನ್ನಲಾಗಿದೆ.

**ಕರ್ನಾಟಕ – ಶಿವಮೊಗ್ಗ ಜಿಲ್ಲೆ**



ಒಂದು ಪ್ರಾದೇಶಿಕ ಪರಿಚಯಕ್ಕೆ ಪೌರಾಣಿಕ ಹಿನ್ನೆಲೆಯೂ ಇರಬಹುದು. ಕೆಲವು ಋಷಿ ಮುನಿಗಳು, ಇವರ ಆಶ್ರಮಗಳು ಮತ್ತು ತೀರ್ಥಕ್ಷೇತ್ರಗಳು ಇದರ ವ್ಯಾಪ್ತಿಯಲ್ಲಿ ಬರುತ್ತವೆ. ಇದರಂತೆ ತುಂಗ-ಭದ್ರೆಯರ ತಟಾಕದಲ್ಲೂ ಋಷ್ಯಾಶ್ರಮಗಳ ಹೆಸರಿದೆ. ಸೋಗಾನೆಯ ಒಂದು ಶಾಸನದಲ್ಲಿ ಇಂದಿನ ಶಿವಮೊಗ್ಗೆಯನ್ನು 'ದೂರ್ವಾಸಾಶ್ರಮ ಮಂಡಲಂ ಭೀಮೇಸ್ವರ ಸನ್ನಿಧಿ' ಎಂದು ಹೇಳಿದೆ. ದುರ್ವಾಸರು ಇಲ್ಲಿ ಯಾವ ಕಾಲದಲ್ಲಿದ್ದರೆಂದು ತಿಳಿಯದಿದ್ದರೂ ಇದು ಪ್ರಾಚೀನತೆಯ ಸಂಕೇತ ಮಾತ್ರವಾಗಿದೆ. ತುಂಗಾ, ಭದ್ರಾ ನದಿಗಳು ಜಿಲ್ಲೆಯಲ್ಲಿ ಹರಿಯುವುದರಿಂದ ತುಂಗಾಪಾನ-ಗಂಗಾಸ್ನಾನ ಎಂಬ ನಾಣ್ಣುಡಿಯಂತೆ ಇವೆರಡು ನದಿಗಳ ನೀರು ಸಿಹಿಯಾಗಿದ್ದು, ಸರ್ವರೋಗ ನಿವಾರಕ ಎಂಬ ಕಲ್ಪನೆಯು ಜೀವಂತವಾಗಿದೆ. ಈ ಜಿಲ್ಲೆಗೆ ದೈವೀ ಸ್ವರೂಪವನ್ನು ನೀಡಿರುವುದು ವಿಶೇಷವಾಗಿ ಕಾಣಬಹುದು. ಗುಡ್ಡೇಕಲ್ ಗವಿಯಲ್ಲಿ ಎರಡು ಜೊತೆ ಶಿವ ನಂದಿಗಳನ್ನು, ಅವುಗಳಲ್ಲಿ ಒಂದನ್ನು ಕೆಳದಿಯ ಅರಸ ಶಿವಪ್ಪ ನಾಯಕನು ಪ್ರತಿಷ್ಠಾಪಿಸಿ ಪೂಜಿಸುತ್ತಿದ್ದನು. ಶಿವಪ್ಪ ನಾಯಕನಿಂದ ಈ ಜಿಲ್ಲೆಗೆ ಶಿವಮುಖನಗರಿ ಶ್ರೀಮೊಗೆ ಮತ್ತು ಶಿವಮೊಗ್ಗ ಎಂಬ ಹೆಸರಿನಿಂದ ಪ್ರಖ್ಯಾತಿಯನ್ನು ಪಡೆದುಕೊಂಡಿದೆ.

### ೨.೨. ಐತಿಹಾಸಿಕ ಹಿನ್ನೆಲೆ

ಸುಮಾರು ಕ್ರಿ.ಶ. ೩ನೇ ಶತಮಾನದಷ್ಟು ಹಿಂದಿನವರೆಗಿನ ಇತಿಹಾಸವು ಈ ಪ್ರದೇಶಕ್ಕಿದೆ. ಇದು ಬಹುಶಃ ಮೌರ್ಯ ಸಾಮ್ರಾಜ್ಯದ ಭಾಗವಾಗಿತ್ತೆಂದು ಚರಿತ್ರೆಯ ದಾಖಲೆ ತಿಳಿಸುತ್ತದೆ. ಕ್ರಿ.ಶ.೩ನೇ ಶತಮಾನದಲ್ಲಿ ಶಾತವಾಹನರ ಆಡಳಿತಕೊಳ್ಳಪಟ್ಟಿತ್ತು. ಸುಮಾರು ಕ್ರಿ.ಶ.೪ನೇ ಶತಮಾನದಲ್ಲಿ ಬನವಾಸಿಯ ಕದಂಬರು ಅರಸರಾಗಿದ್ದರು. ಕದಂಬರು ಪಶ್ಚಿಮ ಭಾಗದಲ್ಲಿ ಆಳುತ್ತಿದ್ದರೆ, ಪೂರ್ವ ಭಾಗವು ತಲಕಾಡಿನ ಗಂಗರಸರ ಆಡಳಿತಕ್ಕೊಳಪಟ್ಟಿತ್ತು. ಕ್ರಿ. ಶ. ೬ನೇ ಶತಮಾನದಲ್ಲಿ ಬಾದಾಮಿಯ ಚಾಲುಕ್ಯರು, ಕದಂಬ ಮತ್ತು ಗಂಗರಸರನ್ನು ಸೋಲಿಸಿ, ತಮ್ಮ ಸಾಮ್ರಾಜ್ಯದ ಮಾಂಡಲೀಕರನ್ನಾಗಿಸಿ, ಈ ರಾಜರು ಆಡಳಿತ ಮುಂದುವರೆಸಿದರು. ನಂತರ ಗಂಗರಸರು ಜಿಲ್ಲೆಯ ಬಹುಪ್ರದೇಶವನ್ನು ಕಳೆದುಕೊಂಡರು. ೭ನೇ ಶತಮಾನದಲ್ಲಿ ಸತ್ಯದೇವನೆಂಬ ಜೈನ ಪಾಳೆಗಾರನು ಹುಂಚಾದಲ್ಲಿ ರಾಜ್ಯ ಸ್ಥಾಪಿಸಿದನು. ೮ನೇ ಶತಮಾನದಲ್ಲಿ ಮಳಖೇಡದ ರಾಷ್ಟ್ರಕೂಟರು ಇಲ್ಲಿ ಮತ್ತು ಬೇರೆ ಪ್ರದೇಶದಲ್ಲಿ ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಕ್ರಿ.ಶ. ೧೧ನೇ ಶತಮಾನದಲ್ಲಿ ಹೊಯ್ಸಳರು ಪ್ರಬಲರಾಗಿ ಜಿಲ್ಲೆಯನ್ನಾಳಿದರು. ಹೊಯ್ಸಳರ ಮತ್ತು ಯಾದವರ ಮಧ್ಯೆ ಅನೇಕ ಯುದ್ಧಗಳಿಂದಾಗಿ ಉತ್ತರದ ಸ್ವಲ್ಪ ಭಾಗವು ಅಲ್ಪ ಸಮಯದವರೆಗೆ ಯಾದವರ ಅಧೀನದಲ್ಲಿತ್ತು. ೧೨ನೇ ಶತಮಾನದಲ್ಲಿ ಅಲ್ಪಕಾಲದವರೆಗೆ ಕಲಚೂರಿನ ರಾಜರ ಆಡಳಿತದಲ್ಲಿತ್ತು. ಕ್ರಿ.ಶ. ೧೪ನೇ ಶತಮಾನದಲ್ಲಿ ಹೊಯ್ಸಳರ ಆಳ್ವಿಕೆ ಕೊನೆಗೊಂಡ ನಂತರ ಜಿಲ್ಲೆಯು ವಿಜಯನಗರ ಸಾಮ್ರಾಜ್ಯದ ಭಾಗವಾಗಿತ್ತು. ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಆರಗ ಈ ಸಾಮ್ರಾಜ್ಯದ ರಾಜಧಾನಿಯಾಗಿತ್ತು. ಕ್ರಿ.ಶ. ೧೬ನೇ ಶತಮಾನದ ಪ್ರಾರಂಭದಲ್ಲಿ ಕೆಳದಿಯ ನಾಯಕರು ಪ್ರಾಬಲ್ಯವಾಗಿ ಬಹುಕಾಲದವರೆಗೆ ರಾಜ್ಯವಾಳಿದರು. ಇದರಲ್ಲಿ

ಕೆಳದಿಯ ಶಿವಪ್ಪನಾಯಕನು ಸಮರ್ಥ ಆಡಳಿತಗಾರನಾಗಿದ್ದನು. ಹೈದರಾಲಿಯು ಕೆಳದಿ ಅರಸರನ್ನು ಸೋಲಿಸಿ ಇವರ ರಾಜಧಾನಿಯಾಗಿದ್ದ ಬಿದನೂರನ್ನು ವಶಪಡಿಸಿಕೊಂಡನು. ಮೈಸೂರಿನ ಅರಸರ ಆಳ್ವಿಕೆಯ ಸಮಯಕ್ಕೆ ಅರಸರ ಪಾಜುದಾರ ಪಟ್ಟಿಗೆ ಸೇರಿರುವುದರಿಂದ ಶಿವಮೊಗ್ಗ ಜಿಲ್ಲೆಯು ಜನ ಪ್ರಿಯತೆಯನ್ನು ಪಡೆದುಕೊಂಡಿತ್ತು. ಜಿಲ್ಲೆಯು ನಿರಂತರವಾಗಿ ವಿವಿಧ ರಾಜರುಗಳಿಂದ ಆಳಲ್ಪಟ್ಟಿರುವುದರಿಂದ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿದೆ. ಅಲ್ಲದೆ, ಕ್ರಿ.ಶ. ೧೭೯೯ರಲ್ಲಿ ಮೈಸೂರು ಅರಸರಾದ ಒಡೆಯರ ಕಾಲದಲ್ಲಿ ನಗರ ಫೌಜುದಾರಿಯಲ್ಲಿ ಈಗಿನ ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆ ಸೇರಿದ್ದವು. ಜಿಲ್ಲೆಯ ಭೂಕ್ಷೇತ್ರ ಆಡಳಿತದಲ್ಲಿ ಅನೇಕ ಮಾರ್ಪಾಡುಗಳಾಗಿ ೧೯೫೧ರಲ್ಲಿ ಶಿವಮೊಗ್ಗ ಜಿಲ್ಲೆ ಅಸ್ತಿತ್ವಕ್ಕೆ ಬಂದಿತು. ೧೯೯೭ ರಲ್ಲಿ ಚನ್ನಗಿರಿ ಮತ್ತು ಹೊನ್ನಾಳಿ ತಾಲ್ಲುಕುಗಳು ದಾವಣಗೆರೆ ಜಿಲ್ಲೆಗೆ ಸೇರಿಸಿದ್ದರಿಂದ, ಶಿವಮೊಗ್ಗ ಜಿಲ್ಲೆಯ ವ್ಯಾಪ್ತಿಯು ಪುನಃ ಮಾರ್ಪಾಡಾಗಿ ಈಗಿನ ಶಿವಮೊಗ್ಗ ಜಿಲ್ಲೆಯು ೦೭ ತಾಲ್ಲೂಕುಗಳನ್ನು ಹೊಂದಿರುವುದಾಗಿದೆ.

### ೨.೩. ಭೌಗೋಳಿಕ ಸ್ವರೂಪ

ವಿಶಾಲ ಕರ್ನಾಟಕದ ೩೦ ಜಿಲ್ಲೆಗಳಲ್ಲಿ ಶಿವಮೊಗ್ಗ ಜಿಲ್ಲೆಯು ಒಂದಾಗಿದೆ. ಇದು ರಾಜ್ಯದ ದಕ್ಷಿಣಭಾಗದ ಮಧ್ಯದಲ್ಲಿದ್ದು, ಪಶ್ಚಿಮಕ್ಕೆ ಹಬ್ಬಿಕೊಂಡಿದೆ. ಈ ಜಿಲ್ಲೆಯನ್ನು ಏಳು ತಾಲ್ಲುಕುಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ, ಶಿವಮೊಗ್ಗ, ಭದ್ರಾವತಿ, ಸಾಗರ, ಹೊಸನಗರ, ಸೊರಬ, ಶಿಕಾರಿಪುರ ಮತ್ತು ತೀರ್ಥಹಳ್ಳಿ. ಈ ಜಿಲ್ಲೆ ಮಲೆನಾಡಿನ ಸೌಂದರ್ಯದ ಶ್ರೀಮಂತಿಕೆಯನ್ನು ಉಳಿಸಿಕೊಂಡಿದೆ. ನಿತ್ಯ ಹರಿದ್ವರ್ಣದ ಕಾಡುಗಳೆನಿಸಿದ ಪಶ್ಚಿಮ ಘಟ್ಟದ ಅರಣ್ಯಗಳು ಪ್ರಪಂಚದಲ್ಲಿಯೇ ಅಪರೂಪದ ಸಸ್ಯರಾಶಿಗಳನ್ನು ಹೊಂದಿದ್ದು, ಜೀವ ಜಗತ್ತಿನ ಎಲ್ಲಾ ವಿಸ್ಮಯಗಳನ್ನು ಪ್ರತಿಬಿಂಬಿಸುವ ತಾಣವಾಗಿದೆ ಎಂದು ವಿದ್ವಾಂಸರು ಪಶ್ಚಿಮಘಟ್ಟಗಳ ವೈವಿಧ್ಯತೆಯನ್ನು ತಿಳಿಸಿದ್ದಾರೆ. ಈ ಪಶ್ಚಿಮ ಘಟ್ಟಗಳಿಗೆ ಸಹ್ಯಾದ್ರಿ ಘಟ್ಟವೆಂತಲೂ ಕರೆಯುತ್ತಾರೆ. ಇದು ಸೊರಬ ತಾಲ್ಲೂಕಿನಿಂದ ತೀರ್ಥಹಳ್ಳಿ ಭಾಗದವರೆಗೆ ತೋರಣದಂತೆ ಹಬ್ಬಿಕೊಂಡಿದೆ. ಇದರ ಪ್ರಾಕೃತಿಕ ರಚನಾ ವಿನ್ಯಾಸವನ್ನು ವಿದ್ವಾಂಸರು ಗುರುತಿಸಿದ್ದಾರೆ. ಅವುಗಳ ಪಶ್ಚಿಮ ಭಾಗವು ಕಠಿಣವಾಗಿಯೂ ಮತ್ತು ಪೂರ್ವ ಭಾಗವು ಬಿಳಿಯಾಗಿರುತ್ತದೆ. ಇವುಗಳ ಉತ್ತರ ಭಾಗವು ಬಸಾಲ್ಟ್ ಶಿಲೆಗಳಿಂದಲೂ ಮತ್ತು ಪೂರ್ವ ಭಾಗವು ಗ್ರ್ಯಾನೈಟ್, ನೀಸ್, ಶಿಸ್ಟ್ ಶಿಲೆಗಳಿಂದ ರಚನೆಯಾಗಿದೆ.೩ ಇದು ಮಲೆನಾಡಿನ ಪ್ರಾಂತ್ಯದ ರಚನೆಯ ವೈಶಿಷ್ಟ್ಯವನ್ನು ತಿಳಿಸುವುದರಿಂದ ಉಲ್ಲೇಖನಾರ್ಹವಾಗಿದೆ. ಶಿವಮೊಗ್ಗ ಜಿಲ್ಲೆಯು ಸಾಂಸ್ಕೃತಿಕವಾಗಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿದ್ದರೂ ಈ ಪ್ರದೇಶದ ಭೌಗೋಳಿಕವಾದ ಅಂಶಗಳು ಸಾಂಸ್ಕೃತಿಕತೆಯನ್ನು ಜನಪ್ರಿಯಗೊಳಿಸುತ್ತಾ ಬಂದಿವೆ. ಯಾವುದೇ ಕ್ಷೇತ್ರದ ಭೌಗೋಳಿಕ ಪರಿಸರವು ನಿರ್ಧಿಷ್ಟ ಕ್ಷೇತ್ರದ ಮತ್ತು ಅದರ ಸುತ್ತಮುತ್ತಲಿನ ಕ್ಷೇತ್ರಗಳ ಮೇಲೆ ಪ್ರಭಾವನ್ನು ಬೀರುತ್ತವೆ.೪ ಮಾನವನ ಇತಿಹಾಸದ ಮೊದಲ ಯುಗಾಂತರಗಳಲ್ಲಿನ ಜನರ ಜೀವನ ಮತ್ತು ಕಾರ್ಯಕಲಾಪಗಳು

ಹಾಗೂ ಅವರ ಭಾವನೆಗಳು ಮತ್ತು ಸಾಹಿತ್ಯಗಳನ್ನು ಭೌಗೋಳಿಕ ಅಂಶಗಳ ಪ್ರಾಮುಖ್ಯತೆಯ ದೃಷ್ಟಿಯಿಂದ ದಾಖಲಿಸಲು ಯೋಗ್ಯವಾದುದು. ಶಿವಮೊಗ್ಗ ಜಿಲ್ಲಾ ಭೌಗೋಳಿಕ ಅಂಶಗಳು ಈ ಕ್ಷೇತ್ರದ ಇತಿಹಾಸವನ್ನು ರೂಪಿಸುವುದಕ್ಕೆ ನಿರ್ದೇಶನ ನೀಡುತ್ತಾ ಬಂದಿದೆ. ಶಿವಮೊಗ್ಗ ಜಿಲ್ಲೆಯ ಉತ್ತರ ಅಕ್ಷಾಂಶ ೧೩೦.೨೭೧ ರಿಂದ ೧೪೦.೩೦೧ ಮತ್ತು ಪೂರ್ವ ರೇಖಾಂಶ ೭೪೦ ರಿಂದ ೭೫೦.೫೨೧ ರವರೆಗೆ ವ್ಯಾಪಿಸಿಕೊಂಡಿದೆ. ಇದರ ಉದ್ದಳತೆ ಪೂರ್ವದಿಂದ ಪಶ್ಚಿಮಕ್ಕೆ ಅಂದಾಜು ೧೫೨.೯ ಕಿಮೀ ಮತ್ತು ಉತ್ತರದಿಂದ ದಕ್ಷಿಣಕ್ಕೆ ೧೨೮.೮ ಕಿ.ಮೀ ವಿಸ್ತಾರದೊಂದಿಗೆ ಜಿಲ್ಲೆಯ ಪೂರ್ವಕ್ಕೆ ದಾವಣಗೆರೆ ಜಿಲ್ಲೆ, ದಕ್ಷಿಣಕ್ಕೆ ಚಿಕ್ಕಮಗಳೂರು ಜಿಲ್ಲೆ, ಪಶ್ಚಿಮಕ್ಕೆ ಉಡುಪಿ ಜಿಲ್ಲೆ ಮತ್ತು ಉತ್ತರ ಕನ್ನಡ ಜಿಲ್ಲೆ ಹಾಗೂ ಉತ್ತರಕ್ಕೆ ಉತ್ತರ ಕನ್ನಡ ಮತ್ತು ಹಾವೇರಿ ಜಿಲ್ಲೆಗಳು ಈ ಜಿಲ್ಲೆಯ ಸೀಮೆಗಳಾಗಿವೆ. ಈ ಜಿಲ್ಲೆಯು ಸಮುದ್ರ ಮಟ್ಟದಿಂದ ಸುಮಾರು ೨೨೬ ಅಡಿ ಎತ್ತರದಲ್ಲಿದೆ. ಕೊಡಚಾದ್ರಿ ಬೆಟ್ಟವು ಅತ್ಯಂತ ಎತ್ತರವಾದ ಶಿಖರವಾಗಿದ್ದು, ಸಮುದ್ರ ಮಟ್ಟದಿಂದ ೪.೪೧ ಅಡಿ ಎತ್ತರದಲ್ಲಿದೆ. ಜಿಲ್ಲೆಯಲ್ಲಿ ಹುಲಿಕಲ್, ಆಗುಂಬೆಘಟ್ಟ ಪ್ರದೇಶಗಳಿವೆ. ಇಲ್ಲಿನ ಭೂಸ್ವರೂಪ, ಸ್ವಾಭಾವಿಕ ಪರಿಸರ, ಫಲವತ್ತಾದ ಮಣ್ಣು, ಹವಾಗುಣ, ಜಲ ರಾಶಿಗಳು, ನೈಸರ್ಗಿಕವಾದ ಖನಿಜಗಳು, ಮಳೆಯ ಪ್ರಮಾಣ ಮತ್ತು ವಿವಿಧ ಬಗೆಯ ಪ್ರಾಣಿಗಳನ್ನು ಒಳಗೊಂಡಿರುವ ಭೌಗೋಳಿಕ ಅಂಶಗಳು ಮಾನವನ ಜೀವನದ ಮೇಲೆ ಅಪಾರವಾದ ಪರಿಣಾಮವನ್ನು ಬೀರಿರುವುದು ಜಿಲ್ಲೆಯ ಭೌಗೋಳಿಕ ಅಂಶಗಳ ವೈಶಿಷ್ಟವಾಗಿದೆ. ಕನ್ನಡ ನಾಡಿನಲ್ಲೇ ವಿಶೇಷವಾದ ಭೌಗೋಳಿಕ ಅಂಶಗಳನ್ನು ಒಳಗೊಂಡಿರುವ, ಜಿಲ್ಲೆಯ ವಿಶೇಷತೆಯನ್ನು ವಿದ್ವಾಂಸರು ಗುರುತಿಸಿದ್ದಾರೆ. 'ಕನ್ನಡಿಗರ ಸುಪ್ರಸಿದ್ಧ ರಾಜಧಾನಿಯಾಗಿದ್ದ ವಿಜಯನಗರ ಸಾಮ್ರಾಜ್ಯ ನಿಂತಿರುವುದು ತುಂಗಭದ್ರೆಯ ಮೇಲೆ. ವೀರ ವಿದ್ಯಾರಣ್ಯರು ಈ ತುಂಗಾಭದ್ರಾ ತೀರ ಪ್ರದೇಶವನ್ನು ಆರಿಸಿ ಇಲ್ಲಿಯೇ ಕರ್ನಾಟಕ ರಾಜ್ಯವನ್ನು ಸ್ಥಾಪಿಸಿದರು. ಹೀಗೆ ಸಹ್ಯಾದ್ರಿ ಶ್ರೇಣಿಯ ತಪ್ಪಲಿನಲ್ಲಿರುವ ಈ ಜಿಲ್ಲೆಯು ಮಲೆನಾಡು, ಅರೆಮಲೆನಾಡು ಹಾಗೂ ಬಯಲು ಸೀಮೆ ಪ್ರದೇಶಗಳನ್ನು ಒಳಗೊಂಡಿದೆ. ಈ ಜಿಲ್ಲೆಯ ವಾಡಿಕೆ ಮಳೆಯು ೧೮೧೨ ಮಿಲಿ ಲೀಟರ್‌ಗಳಿಷ್ಟಿರುತ್ತದೆ. ರಾಜ್ಯದಲ್ಲಿ ಅತ್ಯಂತ ಹೆಚ್ಚು ಮಳೆಯಾಗುವ ಆಗುಂಬೆಯನ್ನು ದಕ್ಷಿಣ ಭಾರತದ ಚಿರಾಪುಂಜಿ ಎಂದು ಕರೆಯಲಾಗುತ್ತದೆ. ತೀರ್ಥಹಳ್ಳಿ, ಹೊಸನಗರ, ಸಾಗರ, ಸೊರಬ ತಾಲ್ಲೂಕುಗಳು ಮಲೆನಾಡು ಭಾಗಕ್ಕೆ ಸೇರಿವೆ. ಶಿವಮೊಗ್ಗ, ಶಿಕಾರಿಪುರ ಮತ್ತು ಭದ್ರಾವತಿ ತಾಲ್ಲೂಕುಗಳನ್ನು ಅರೆಮಲೆನಾಡು ಎಂದು ಕರೆಯುತ್ತಾರೆ. ಜಿಲ್ಲೆಯಲ್ಲಿ ಹರಿಯುವ ನದಿಗಳಲ್ಲಿ ತುಂಗಾ, ಭದ್ರಾ, ಶರಾವತಿ, ಕುಮುದ್ವತಿ, ಮತ್ತು ವರದಾ ನದಿಗಳು ಮುಖ್ಯ ನದಿಗಳಾಗಿವೆ. ಶರಾವತಿ ನದಿಯು ತೀರ್ಥಹಳ್ಳಿ ತಾಲ್ಲೂಕಿನ ಅಂಬುತೀರ್ಥ ಎಂಬಲ್ಲಿ ಉಗಮವಾಗಿ ತೀರ್ಥಹಳ್ಳಿ, ಸಾಗರ, ಹೊಸನಗರ, ತಾಲ್ಲೂಕುಗಳಲ್ಲಿ ಹರಿದು ಮುಂದೆ ಸಾಗರಕ್ಕೆ ೩೦ ಕಿ. ಮೀ ದೂರದಲ್ಲಿ ೯೬೦ ಅಡಿ ಎತ್ತರದಿಂದ ಕೆಳಕ್ಕೆ ಧುಮುಕಿ ಜಗತ್ಪ್ರಸಿದ್ಧ ಜೋಗ ಜಲಪಾತ ಸೃಷ್ಟಿಸಿದೆ. ಈ ಜಿಲ್ಲೆಯ ಪ್ರಮುಖ ಆಹಾರ

ಬೆಳೆಗಳಾದ ಭತ್ತ, ಮೆಕ್ಕೆಜೋಳ, ಜೋಳ, ರಾಗಿ, ತೊಗರಿ, ಹೆಸರು, ಹತ್ತಿ, ಶೇಂಗಾ, ಸೋಯಾಬೀನ್, ಸೂರ್ಯಕಾಂತಿ ಹಾಗೂ ತೋಟದ ಬೆಳೆಗಳಾದ ಬಾಳೆ, ಮಾವು, ಕಲ್ಲಂಗಡಿ, ಅನಾನಸ್, ಸಪೋಟ, ಗೋಡಂಬಿ, ಅಡಿಕೆ, ಪಪ್ಪಾಯಿ ಮುಂತಾದವುಗಳನ್ನು ಬೆಳೆಯಲಾಗುತ್ತದೆ. ಶಿವಮೊಗ್ಗ ಜಿಲ್ಲೆಯ ಒಟ್ಟು ಭೌಗೋಳಿಕ ವಿಸ್ತೀರ್ಣ ೮೪೬೫ ಚ.ಕಿ.ಮೀ ಇದ್ದು, ರಾಜ್ಯ ವಿಸ್ತೀರ್ಣದ ಪ್ರತಿಶತ ಶೇಕಡ ೪.೪೧ ರಷ್ಟಿದೆ. ಗ್ರಾಮ ಸಂಬಂಧದ ಕಾಗದ ಪತ್ರಗಳ ಮೇರೆಗೆ ಜಿಲ್ಲೆಯ ವಿಸ್ತೀರ್ಣವು ೮.೫ ಲಕ್ಷ ಹೆಕ್ಟೇರುಗಳಷ್ಟಾಗುತ್ತದೆ. ಜಿಲ್ಲೆಯ ತಾಲ್ಲೂಕುವಾರು ವಿಸ್ತೀರ್ಣ ಭದ್ರಾವತಿ ೬೯೦ ಚ.ಕಿ.ಮೀ. ಸಾಗರ ೧೯.೪೦ ಚ.ಕಿ.ಮೀ ಶಿಕಾರಿಪುರ ೯೦೯ ಚ.ಕಿ.ಮೀ, ಶಿವಮೊಗ್ಗ ೧೧೦೮ ಚ.ಕಿ.ಮೀ, ಸೊರಬ ೧೧೪೮ ಚ.ಕಿ.ಮೀ ಹಾಗೂ ತೀರ್ಥಹಳ್ಳಿ ೧೨೪೭ ಚ.ಕಿ.ಮೀ ಇರುತ್ತದೆ. ೨೦೧೧ರ ಜನಗಣತಿಯ ಪ್ರಕಾರ ಜಿಲ್ಲೆಯ ಒಟ್ಟು ಜನಸಂಖ್ಯೆ ೧೭,೫೨,೭೫೩. ಇದರಲ್ಲಿ ೮,೭೭,೪೧೫ ಪುರುಷರು ಹಾಗೂ ೮,೭೫,೩೩೮ ಮಹಿಳೆಯರಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ಒಟ್ಟು ೧೧,೨೯,೦೨೬ (ಶೇಕಡ ೬೪.೪೧) ಹಾಗೂ ನಗರ ಪ್ರದೇಶದಲ್ಲಿ ೬,೨೩,೭೨೭ (ಶೇಕಡ ೩೫.೫೯)ರಷ್ಟು ಜನರು ವಾಸವಾಗಿದ್ದಾರೆ. ಜಿಲ್ಲೆಯ ಜನ ಸಾಂದ್ರತೆಯು ಪ್ರತಿ ಚದುರ ಕಿ.ಮೀಗೆ ೨೦೭ರಷ್ಟಿದೆ. ಜಿಲ್ಲೆಯ ಸಾಕ್ಷರತಾ ಪ್ರಮಾಣ ಶೇಕಡ ೮೦.೪೫ರಷ್ಟಿದ್ದು, ಪುರುಷರು ಶೇಕಡ ೮೬.೦೭ರಷ್ಟು ಹಾಗೂ ಮಹಿಳೆಯರು ಶೇಕಡ ೭೪.೮೪ರಷ್ಟು ಇರುವುದನ್ನು ನೋಡಬಹುದಾಗಿದೆ.

**ಕೋಷ್ಟಕ ೨.೧**

**ಶಿವಮೊಗ್ಗ ಜಿಲ್ಲೆಯ ತಾಲ್ಲೂಕುವಾರು ಜನಸಂಖ್ಯೆ**

| ತಾಲ್ಲೂಕಿನ ಹೆಸರು | ವಾಸವಾಗಿರುವ ಕುಟುಂಬಗಳ ಸಂಖ್ಯೆ | ಜನಸಂಖ್ಯೆ | ಪುರುಷರು | ಮಹಿಳೆಯರು |
|---|---|---|---|---|
| ಭದ್ರಾವತಿ | ೭೧,೭೭೧ | ೩,೩೮,೯೮೯ | ೧,೭೧,೯೧೭ | ೧,೬೭,೦೭೨ |
| ಹೊಸನಗರ | ೨೩,೩೫೮ | ೧,೧೫,೦೦೦ | ೫೭,೩೯೨ | ೫೭,೬೦೮ |
| ಸಾಗರ | ೪೧,೯೧೫ | ೩,೦೦,೯೯೫ | ೧,೦೦,೯೭೭ | ೧,೦೦,೦೧೮ |
| ಶಿಕಾರಿಪುರ | ೪೧.೩೮೯ | ೨,೧೩,೫೯೦ | ೧,೦೮,೩೪೪ | ೧,೦೫,೨೪೬ |
| ಶಿವಮೊಗ್ಗ | ೯೩,೪೨೬ | ೪,೪೫,೧೯೨ | ೨,೨೬,೯೨೮ | ೨,೧೮,೨೬೪ |
| ಸೊರಬ | ೩೭,೩೬೩ | ೧,೮೫,೫೭೨ | ೯೪,೨೬೭ | ೯೧,೩೦೫ |
| ತೀರ್ಥಹಳ್ಳಿ | ೩೨,೦೦೨ | ೧,೪೩,೨೦೭ | ೭೦,೭೩೪ | ೭೨,೪೭೩ |

**ಆಧಾರ:** ೨೦೧೧ರ ಜನಗಣತಿ (http://en.wikipedia.org/wiki/Shimoga_district)

ಶಿವಮೊಗ್ಗ ಜಿಲ್ಲೆಯು ಮೂಲತಃ ಕನ್ನಡನಾಡಿನ ಸಾಂಸ್ಕೃತಿಕ ಕೇಂದ್ರವಾಗಿದೆ. ಜಿಲ್ಲೆಯು ವಿಶೇಷವಾಗಿ ಮಲೆನಾಡಿನ ರಾಜಧಾನಿಯೆಂದೇ ಕರೆಯಲಾಗುತ್ತದೆ. ಕಾರಣ ಮಲೆನಾಡಿನ ದಟ್ಟ

ಕಾಡಿನಲ್ಲಿ ಜಗತ್ಪ್ರಸಿದ್ಧವಾದ ಪ್ರಕೃತಿ ರಮ್ಯ ತಾಣಗಳನ್ನು, ಪ್ರೇಕ್ಷಣೀಯ ಸ್ಥಳಗಳನ್ನು, ಐತಿಹಾಸಿಕ, ಚಾರಿತ್ರಿಕ ಸ್ಮಾರಕಗಳನ್ನು ಒಳಗೊಂಡಿದೆ. ದೇಶದಲ್ಲೇ ಪ್ರಸಿದ್ಧವಾಗಿರುವ ಜೋಗಜಲಪಾತವನ್ನು ಒಳಗೊಂಡಿರುವುದರಿಂದ ಜಿಲ್ಲೆಗೆ ವಿಶೇಷವಾದ ಸ್ಥಾನವು ಸಿಕ್ಕಿದೆ. ೧೨ನೇ ಶತಮಾನದಲ್ಲಿ ನಡೆದಿರುವ ವಚನಕ್ರಾಂತಿಗೆ ಮೂಲ ಕಾರಣಕರ್ತರಾದ ಅಲ್ಲಮಪ್ರಭು ಮತ್ತು ಅಕ್ಕಮಹಾದೇವಿ ಇವರುಗಳು ಈ ಜಿಲ್ಲೆಯಲ್ಲಿ ಜನಿಸಿದ್ದರಿಂದ ಇದೊಂದು ಸಾಂಸ್ಕೃತಿಕ ಕೇಂದ್ರವೆಂದೇ ಪರಿಗಣಿಸಬೇಕಾಗಿದೆ. ರಾಜ್ಯದ ಮಧ್ಯಭಾಗದಲ್ಲಿ ಶಿವಮೊಗ್ಗ ಜಿಲ್ಲೆಯಿದೆ. ವಿವಿಧ ಕ್ಷೇತ್ರಗಳಲ್ಲಿ ಅಪಾರವಾದ ಸಾಧನೆಗಳನ್ನು ಮಾಡಿ ರಾಜ್ಯ, ರಾಷ್ಟ್ರ ಹಾಗೂ ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಕೀರ್ತಿ ಗಳಿಸಿದವರು ಜಿಲ್ಲೆಯಲ್ಲಿದ್ದಾರೆ. ಸಾಹಿತ್ಯ ಕ್ಷೇತ್ರಕ್ಕೆ ಮೀಸಲಾದ ಎರಡು ಜ್ಞಾನಪೀಠ ಪ್ರಶಸ್ತಿ, ರಾಷ್ಟ್ರಕವಿ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಮಾಗ್ಸೆಸೆ ಪ್ರಶಸ್ತಿ ಹಾಗೂ ಅಂತರ್‌ರಾಷ್ಟ್ರೀಯ ಕೃಷಿ ಸಂಸ್ಥೆಯ ಪ್ರಶಸ್ತಿಗಳನ್ನು ಪಡೆದಿರುವವರನ್ನು ಒಳಗೊಂಡಿದೆ. ಈ ಪ್ರಶಸ್ತಿಗಳನ್ನು ಪಡೆದಿರುವವರೆಲ್ಲರೂ ಕನ್ನಡ ನಾಡು-ನುಡಿ ಸಂಸ್ಕೃತಿಗೆ ದುಡಿದಿರುವುದು ಸ್ಪಷ್ಟವಾಗುತ್ತದೆ. ಈ ಜಿಲ್ಲೆಯಲ್ಲಿ ಹಿಂದೂ, ಮುಸ್ಲಿಂ, ಜೈನ, ಬೌದ್ಧ, ಕ್ರೈಸ್ತ, ಮುಂತಾದ ಧರ್ಮಕ್ಕೆ ಸೇರಿದ ಜನಸಮುದಾಯಗಳನ್ನು ಕಾಣಬಹುದಾಗಿದೆ. ಜಿಲ್ಲೆಯಲ್ಲಿ ಹಲವು ಪ್ರಮುಖ ಭಾಷೆಗಳನ್ನಾಡುವ ಜನರು ಇದ್ದಾರೆ. ಒಟ್ಟಿನಲ್ಲಿ ಈ ಜಿಲ್ಲೆಯು ಅನೇಕ ಭಿನ್ನತೆಗಳಲ್ಲಿ ವೈವಿಧ್ಯತೆಗಳನ್ನು ಹೊಂದಿದ್ದು, ಅಧ್ಯಯನಕ್ಕೆ ಯೋಗ್ಯವಾಗಿದೆ. ಶಿವಮೊಗ್ಗ ಜಿಲ್ಲೆಯ ಬೇಡ ಮತ್ತು ಹಸಲರು ಸಮುದಾಯ ಕುರಿತು ಅಧ್ಯಯನಗಳು ಇದೂವರೆಗೂ ನಡೆದಿಲ್ಲ. ಆದರೂ ಕೆಲವೇ ಬಿಡಿ ಲೇಖನಗಳು ಮತ್ತು ಪೂರಕ ಕೃತಿಗಳು ರಚನೆಯಾಗಿವೆ. ಇವುಗಳು ಸಮುದಾಯದ ಮೂಲ ಸಂಪ್ರದಾಯ, ಆಚರಣೆಗಳು, ಸಾಂಸ್ಕೃತಿಕ ಹಿನ್ನೆಲೆ, ಸಾಮಾಜಿಕ, ಧಾರ್ಮಿಕ ಹಾಗೂ ಆರ್ಥಿಕ ಸ್ಥಾನಮಾನಗಳ ಕುರಿತು ಯಾವುದೇ ರೀತಿಯ ಸ್ಪಷ್ಟ ವಿಶ್ಲೇಷಣೆಯನ್ನಾಗಲೀ, ವಿಮರ್ಶೆಯನ್ನಾಗಲೀ ನೀಡುವಲ್ಲಿ ವಿಫಲವಾಗಿವೆ. ಈವರೆಗಿನ ಅಧ್ಯಯನಗಳ ಮೂಲಾಧಾರಗಳಲ್ಲಿ ಕಾಣಿಸಿರುವ ವಿವರಗಳನ್ನು ಯಥವತ್ತಾಗಿ ನೀಡುವುದರಿಂದ ಮಿತಿಗಳು ಕಂಡುಬರುತ್ತವೆ. ಇವುಗಳನ್ನು ಯಾವುದೋ ಒಂದು ನಿರ್ಧಿಷ್ಟ ಚೌಕಟ್ಟಿನಲ್ಲಿ ಸಿದ್ಧಪಡಿಸಿರುವಂತೆ ಕಂಡುಬರುತ್ತವೆ. ಈ ಚೌಕಟ್ಟನ್ನು ಮೀರಿ ಸತ್ಯಾಸತ್ಯತೆಗಳ ಕೂಲಂಕುಷವಾದ ಅಧ್ಯಯನ ಮತ್ತು ಪ್ರಾಮಾಣಿಕ ದಾಖಲೀಕರಣದ ಪ್ರಯತ್ನವಾಗಬೇಕಾದ ಅಗತ್ಯತೆ ಇದೆ. ಆದ್ದರಿಂದ ವಸ್ತುನಿಷ್ಟ ಹಾಗೂ ಕ್ರಿಯಾಶೀಲ ದಾಖಲೀಕರಣದ ಕಿರುಪ್ರಯತ್ನವೇ ಈ ಮಹಾಪ್ರಬಂಧದ ಉದ್ದೇಶವಾಗಿದೆ. ಪ್ರಸ್ತುತವಾಗಿ ಬೇಡ ಮತ್ತು ಹಸಲರು ಸಮುದಾಯದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ಅವುಗಳ ಮಹತ್ವ ಹಾಗೂ ವಿವಿಧ ಆಯಾಮಗಳನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ಪರೀಕ್ಷಿಸುವ ಹಾಗೂ ವಿಶ್ಲೇಷಿಸುವ ಧ್ಯೇಯವನ್ನು ಈ ಸಂಶೋಧನೆ ಹೊಂದಿದೆ. ಬೇಡ ಮತ್ತು ಹಸಲರು ಬುಡಕಟ್ಟುಗಳ ಸಮಸ್ಯೆ-ಸವಾಲುಗಳನ್ನು ಕುರಿತು ಚಿಂತಿಸುವ ಅಗತ್ಯ ಇಂದಿನದಾಗಿದೆ. ಏನೆಲ್ಲ ಸಂಶೋಧನೆ, ಚಿಂತನೆ, ಅಧ್ಯಯನಗಳು ನಡೆದರೂ ಬೇಡ ಮತ್ತು

ಹಸಲರು ಸ್ಥಿತಿ ಸುಧಾರಣೆಯಾಗಿಲ್ಲ. ಅವರ ಸ್ಥಿತಿಗತಿಗಳನ್ನು ಕುರಿತು ಸಮಗ್ರವಾಗಿ ಅರ್ಥೈಸುವ, ವಿಶ್ಲೇಷಿಸುವ ನಿಟ್ಟಿನಲ್ಲಿ ಪ್ರಾಚೀನ ಮತ್ತು ಆಧುನಿಕ ಕಾಲಘಟ್ಟಗಳಲ್ಲಿ ಬೇಡ ಮತ್ತು ಹಸಲರು ವೈವಿಧ್ಯಮಯ ಚಿತ್ರಣವನ್ನು ಕುರಿತು ಇಂದಿನ ಸಮಸ್ಯೆಗಳು, ಸವಾಲುಗಳು, ಹಾಗೂ ಮುಂದಿರುವ ಸಮಸ್ಯೆಗಳು ಮತ್ತು ಸವಾಲುಗಳು, ಸಾಮಾಜಿಕ ಪರಿಸ್ಥಿತಿ, ಶೈಕ್ಷಣಿಕ ಸ್ಥಿತಿಗತಿ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅವರ ಸಮುದಾಯವನ್ನು ಕುರಿತು ಚಿಂತಿಸುವುದು ಇಲ್ಲಿನ ಮುಖ್ಯ ಆಶಯಗಳಲ್ಲೊಂದಾಗಿದೆ.

**ಕೊನೆಟಿಪ್ಪಣಿ**

೧. ಪುನರೂರು, ಶಿವಮೊಗ್ಗ ಜಿಲ್ಲಾ ಕಥಾ ಸಂಕಲನ ಪ್ರಕಾಶನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೨೦೦೪. ಪು.ಸಂ.೩೧

೨. ರಾಮಭಟ್ಟ ಶಿವಮೊಗ್ಗ, ಜಿಲ್ಲಾ ಇತಿಹಾಸ ಮತ್ತು ಸಂಸ್ಕೃತಿ, ಪ್ರಕಾಶನ, ರಾಷ್ಟ್ರೀಯ ಶಿಕ್ಷಣ ಸಂಸ್ಥೆ, ಶಿವಮೊಗ್ಗ, ೨೦೦೧. ಪು.ಸಂ.೩೩

೩. ಕರ್ನಾಟಕ ರಾಜ್ಯ ಗ್ಯಾಜೇಟಿಯರ್, ಭಾಗ-೧-೧೯೭೪. ಪು.ಸಂ.೩೬

೪. ಸಾಂಖಿಕ ಅಧಿಕಾರಿಗಳು, ಶಿವಮೊಗ್ಗ ಜಿಲ್ಲೆಯ ಅಂಕಿ ಅಂಶಗಳ ನೋಟ, ೨೦೧೧, ಪು.ಸಂ.೩೭

ಅಧ್ಯಾಯ ಮೂರು

# ಆದಿವಾಸಿ ಆಚರಣೆಗಳ ವಿಶ್ಲೇಷಣೆ: ಬೇಡ ಬುಡಕಟ್ಟು

೩.೧. ಬೇಡ ಬುಡಕಟ್ಟು ಹಿನ್ನೆಲೆ

೩.೨. ಬೇಡ ಸಮುದಾಯ

೩.೩. ಊರು ನಾಯಕರು ಮತ್ತು ಮ್ಯಾಸ ನಾಯಕರು

೩.೪. ಶಿವಮೊಗ್ಗ ಜಿಲ್ಲೆಯ ಬೇಡ ಬುಡಕಟ್ಟು

೩.೫. ಬೇಡ ಬುಡಕಟ್ಟಿನ ಕೃಷಿ ಬದುಕು

೩.೬. ಬೇಡರ ಸಾಮಾಜಿಕ ಜೀವನ

೩.೭. ಜೀವನಾವರ್ತಕ ಸಾಮಾಜಿಕ ಆಚರಣೆಗಳು

೧. ಆಚರಣೆಗಳು

೨. ಜನನ ಮತ್ತು ನಾಮಕರಣ

೩. ಪ್ರೌಢ ಸಂಸ್ಕಾರ

೪. ಮದುವೆ

೫. ಮರಣ ಮತ್ತು ನಂತರದ ಆಚರಣೆಗಳು

೬. ಹಬ್ಬ ಹರಿದಿನ ಮತ್ತು ಜಾತ್ರೆ ಉತ್ಸವಗಳು

೭. ಶ್ರೀ ಕೋಟೆ ಆಂಜನೇಯ ಸ್ವಾಮಿ ಜಾತ್ರೆ

೮. ಶ್ರೀ ರಂಗನಾಥಸ್ವಾಮಿ ಜಾತ್ರೆ

೯. ಕೋಳಿನಾಗರ ಆಚರಣೆ

೧೦. ಗುಡ್ಡೆಕಲ್ಲುಗಳು

೧೧. ಶಿವರಾತ್ರಿ ಹಬ್ಬ

೧೨. ಯುಗಾದಿ ಹಬ್ಬ

೧೩. ನಾಗರ ಪಂಚಮಿ ಹಬ್ಬ

೧೪. ದಸರಾ ಹಬ್ಬ

೧೫. ದೀಪಾವಳಿ ಹಬ್ಬ

೧೬. ಹೆಣ್ಣು ದೇವತೆ ಆಚರಣೆಗಳು

೧೭. ಕುಮಾರರಾಮನ ಹಬ್ಬ

೧೮. ನ್ಯಾಯದಾನ ಪದ್ಧತಿ

ಅಧ್ಯಾಯ ೩

# ಆದಿವಾಸಿ ಆಚರಣೆಗಳ ವಿಶ್ಲೇಷಣೆ: ಬೇಡ ಬುಡಕಟ್ಟು

## ೩.೧. ಬೇಡ ಬುಡಕಟ್ಟಿನ ಹಿನ್ನೆಲೆ

ಕ್ಲಾಸ್ ಎಂಬ ಪದವು ಲ್ಯಾಟಿನ್ ಮೂಲವಾದ ಕ್ಲಾಸಿಸ್ ಎಂಬ ಪದದಿಂದ ಜನಿಸಿದೆ. ಮೂಲ ಶಬ್ದದ ಅರ್ಥ ಸಶಸ್ತ್ರವಾದ ಜನರ ಒಂದು ಗುಂಪು ಅಥವಾ ವಿಭಾಗವೆಂದು ಆಗುತ್ತದೆ. ಸರ್ವಿಯಸ್ ತುಲಿಯಾಸ್ ಎಂಬ ಪುರಾಣೋಕ್ತ ರೋಮನ್ ಸಮಾಜ ವರ್ಗಗಳ ಅಥವಾ ಅಂತಸ್ತುಗಳ ಒಂದು ನೂತನ ವಿಭಜನೆಗೆ ಕಾರಣ ಪುರುಷನು ಎಂಬುದಾಗಿ ಸಂಪ್ರದಾಯ ಮೂಲಗಳಿಂದ ತಿಳಿಯುತ್ತದೆ. ಆದಿ ಮಾನವನ ಸಮುದಾಯ ಜೀವನದಲ್ಲಿ ವರ್ಗ ವಿಭಜನೆ ಎಂಬುದು ಇರಲಿಲ್ಲ. ಆಗ ಶೋಷಣೆ, ಪರಾಧೀನತೆ, ಪೀಡನೆಗಳು ಅಸ್ತಿತ್ವದಲ್ಲಿರಲಿಲ್ಲ. ಸಮುದಾಯಿಕವಾಗಿ ಜನರು ತಮ್ಮ ಬದುಕಿಗೆ ಬೇಕಾದವುಗಳನ್ನು ಪೊರೈಸಿಕೊಂಡು ಜೀವಿಸುತ್ತಿದ್ದರು. ಅಥವಾ ತಮ್ಮ ಜೀವನಕ್ಕಾಗಿ ಸಾಮೂಹಿಕವಾಗಿ ಪ್ರಯತ್ನಿಸುತ್ತಿದ್ದರು. ಅವರು ಸಂಪಾದಿಸಿದ ಆಹಾರವನ್ನು ಎಲ್ಲರೂ ಕೂಡಿಯೇ ಹಂಚಿಕೊಂಡು ತಿನ್ನುತ್ತಿದ್ದರು. ಹೀಗೆ ಸಮಗ್ರ ಬದುಕು ಒಂದು ಕೂಟ ಜೀವನವಾಗಿತ್ತು. ವಾಸ್ತವಾಂಶಗಳ ಸಂಶೋಧನೆಯ ಫಲವಾಗಿ ಮಾರ್ಕ್ಸವಾದವು ಕೆಲವೊಂದು ಸಾಮಾನ್ಯ ಅಭಿಪ್ರಾಯಗಳನ್ನು ರೂಪಿಸಿಕೊಂಡು ಸಮಾಜದ ವರ್ಗ ವಿಭಜನೆಯ ಒಂದು ಸಾಮಾನ್ಯ ಚಿತ್ರವನ್ನು ನಮಗೆ ನೀಡುತ್ತದೆ. ಆದಿ ಮಾನವನ ಸಮುದಾಯ ವ್ಯವಸ್ಥೆಯು ಶಿಥಿಲಗೊಂಡ ನಂತರ ಪ್ರಪ್ರಥಮವಾಗಿ ವರ್ಗ ವಿಭಜನೆ ಕಾಣಿಸಿಕೊಳ್ಳುತ್ತದೆ. ಆದಿ ಮಾನವನ ಸಮುದಾಯ ವ್ಯವಸ್ಥೆಯು ಶಿಥಿಲಗೊಂಡು ವರ್ಗ ಸಮಾಜವು ಅಸ್ತಿತ್ವದಲ್ಲಿ ಬಂದದ್ದು ಸುದೀರ್ಘ ಕಾಲದ ಬೆಳವಣಿಗೆಯ ಪರಿಣಾಮವಾಗಿ. ಈ ಪರಿಣಾಮವು ಎಲ್ಲಾ ಕಡೆಗೂ ಏಕಕಾಲದಲ್ಲಿ ಕಾಣಿಸಿಕೊಳ್ಳಲಿಲ್ಲ. ಚರಿತ್ರೆಯ ಪುರಾವೆಯಿಂದ ತಿಳಿಯುವುದೇನೆಂದರೆ, ವರ್ಗ ಸಮಾಜವು ನಾಲ್ಕು ಸಹಸ್ರ ವರ್ಷಗಳ ಕೊನೆಯ ಮತ್ತು ಮೂರು ಸಹಸ್ರ ವರ್ಷಗಳ ಆದಿಕಾಲ (ಕ್ರಿಪೂ)ದಲ್ಲಿ ಪ್ರಾಚೀನ ಈಜಿಪ್ಟ್ ಆಸೀರಿಯಾ ಮತ್ತು ಬೆಬಿಲೋನೀಯ ಗಳಲ್ಲಿ ಮತ್ತು ಕ್ರಿಪೂ. ೩ ರಿಂದ ಎರಡು ಸಹಸ್ರ ವರ್ಷಗಳ ಹಿಂದೆ ಭಾರತ ಮತ್ತು ಚೀನಾಗಳಲ್ಲಿ ಗ್ರೀಕ್ ಮತ್ತು ರೋಮ್‌ಗಳಲ್ಲಿ ಕ್ರಿ. ಪೂ. ಒಂದು ಸಹಸ್ರ ವರ್ಷಗಳ ಹಿಂದೆ ಅಸ್ತಿತ್ವದಲ್ಲಿ ಬಂದಿದ್ದಿತ್ತು. ನಮ್ಮ ದೇಶದ ಇತಿಹಾಸದಲ್ಲಿ ನೂರಾರು, ಸಾವಿರಾರು ಮತಭೇದಗಳುಳ್ಳ ಜಾತಿ ಜನಾಂಗಗಳನ್ನ

ಅವರುಗಳ ಸಂಸ್ಕೃತಿ ಮತ್ತು ನಾಗರೀಕತೆ ವೈಶಿಷ್ಟ್ಯಗಳನ್ನು ಇಂದು ಕಾಣಬಹುದಾಗಿದೆ. ಒಂದೊಂದು ಜನಾಂಗದವರಿಗೂ ಅವರದೆ ಆದ ಚಾರಿತ್ರಿಕ, ಸಾಮಾಜಿಕ ಹಿನ್ನೆಲೆಗಳನ್ನು ಕಾಣುತ್ತೇವೆ. ಅಂತಹ ಜಾತಿ ಜನಾಂಗಗಳಲ್ಲಿ ಬೇಡ ಬುಡಕಟ್ಟಿನ ಹಿನ್ನೆಲೆ ತಿಳಿಯುವುದು ಬಹಳ ಮುಖ್ಯವಾಗಿದೆ. ಬೇಡ ಬುಡಕಟ್ಟಿಗೆ ತನ್ನದೇ ಆದ ಸಂಸ್ಕೃತಿ ಇದೆ. ಅನೇಕರು ವೀರ ಸಹಾಸಿಗಳಾಗಿ ಬಾಳಿ ಬದುಕಿ ಪಾಳೇಗಾರಗಿ ರಾಜರೆನಿಸಿಕೊಂಡು ಅಧಿಕಾರದಲ್ಲಿ ಮೆರೆದು ಧೀಮಂತರೆಂದು ಎನಿಸಿಕೊಂಡು ನಾಡಿನ ಉದ್ದಗಲಕ್ಕೂ ತಮ್ಮ ಪ್ರಭುತ್ವ ಸ್ಥಾಪಿಸಿ ಧರ್ಮ ಪ್ರಭುಗಳಾಗಿ ರಾಷ್ಟ್ರ ಪ್ರೇಮಕ್ಕೆ, ಧೈರ್ಯಕ್ಕೆ ಸಾಹಸಕ್ಕೆ ಶೌರ್ಯ ಪರಾಕ್ರಮಗಳಿಗೆ ಹೆಸರುವಾಸಿಯಾಗಿ ಸಾಹಿತ್ಯ, ಸಂಸ್ಕೃತಿ ಕಲೆಗಳ ಪ್ರೋತ್ಸಾಹಕರಾಗಿ ಹೆಸರುವಾಸಿಗಳಾಗಿದ್ದಾರೆ. ವಾಲ್ಮೀಕಿ, ಕಂಪಿಲರಾಯ, ಗಂಡುಗಲಿ ಕುಮಾರ ರಾಮ ರಾಷ್ಟ್ರ ವೀರ ಹೆಚ್. ಎಂ. ನಾಯಕ ವಿಜಯ ನಗರ ಸಾಮ್ರಾಜ್ಯ ಸ್ಥಾಪಕರಾದ ಹಕ್ಕ ಬುಕ್ಕರು ಚಿತ್ರದುರ್ಗದ ರಾಜ ವೀರ ಮದಕರಿ ನಾಯಕ ಸುರಪುರದ ರಾಜ ಚಿಕ್ಕ ವೆಂಕಟಪ್ಪ ನಾಯಕ, ವೀರ ಸಿಂಧೂರ ಲಕ್ಷ್ಮಣ, ಬೇಡರ ಕಣ್ಣಪ್ಪ, ಏಕಲವ್ಯ, ಶಬರಿ, ಮತ್ತು ಗುಹಾ ಹೀಗೆ ಸಾವಿರಾರು ಕಲಿಗಳು ಈ ಜನಾಂಗದಲ್ಲಿ ಜನಿಸಿದ್ದಾರೆ. ೨೦೧೧ರ ಜನಗಣತಿಯ ಪ್ರಕಾರ ಬೇಡ ಸಮುದಾಯದವರು ಕರ್ನಾಟಕದಲ್ಲಿ ೬೦ ಲಕ್ಷದಷ್ಟು ಇದೆ. ರಾಯಚೂರು, ಕಲ್ಬುರ್ಗಿ, ಬಳ್ಳಾರಿ, ಚಿತ್ರದುರ್ಗ ಮತ್ತು ಕೊಪ್ಪಳದಲ್ಲಿ ಈ ಜನ ದಟ್ಟವಾಗಿದೆ. ಬೆಳಗಾವಿ, ಕೋಲಾರ, ತುಮಕೂರು, ಮೈಸೂರು ಹಾಗೂ ಶಿವಮೊಗ್ಗ ಜಿಲ್ಲೆಗಳ ಕೆಲ ಭಾಗಗಳಲ್ಲಿಯೂ ಬೇಡ ಜನಾಂಗ ವಿಫುಲವಾಗಿದೆ. ಇಷ್ಟು ದೊಡ್ಡ ಜನಸಂಖ್ಯೆಯನ್ನು ಹೊಂದಿರುವ ಬೇಡ ಸಮಾಜವು ವೇದ ಕಾಲದಿಂದ ಹುಟ್ಟಿ ಬಂದಿದೆ. ಈ ಸಮಾಜಕ್ಕೆ ಬೇಡ ಅಂತ ಹೆಸರು ಬರಲು ಕಾರಣ ಈ ಸಮಾಜ ವೇದ ಕಾಲದಿಂದ ಬಂದಿರುವುದರಿಂದ ವೇದವೆಂಬ ಶಬ್ಧವು ವ್ಯಾದ ಎಂಬ ರೂಢಿಯಲ್ಲಿ ಬಂದಿತು. ವ್ಯಾದ ಬೇಟೆಯಾಡುವವರು ಆದ್ದರಿಂದ ಈ ಸಮಾಜದ ಬೇಟೆ ಎಂಬ ಶಬ್ದ ಬದಲಾವಣೆಯನ್ನು ಹೊಂದಿ ಬೇಡ ಎಂದು ಕರೆಯುವ ಪದ್ಧತಿ ರೂಢಿಗೆ ಬಂದಿತು. ಇದು ಅಲ್ಲದೇ ಈ ಸಮಾಜಕ್ಕೆ ಬೇಡರು ಎಂದು ಕರೆಯುತ್ತಾರೆ. ಬೇಡರ ಎಂಬುದು ಉರ್ದು ಶಬ್ದ ಉರ್ದು ಭಾಷೆಯಲ್ಲಿ ಬೇಡರ ಎಂದರೆ ಯಾರಿಗೂ ಹೆದರದವನು ಎಂದರ್ಥ. ಈ ಬೇಡರ ಸಮಾಜದವರು ಯಾರಿಗೂ ಹೆದರದೆ ಇದ್ದ ಶೂರ ಜನ ಜೀವನದಲ್ಲಿ ಸುಖ ಬರಲಿ ದುಃಖ ಬರಲಿ ಭಾವವೇಶಕ್ಕೆ ಒಳಗಾಗದೆ ನಗುನಗುತ್ತಾ ಇರೋ ಜನ ಆದ್ದರಿಂದ ಈ ಸಮಾಜದವರಿಗೆ ಉರ್ದು ಶಬ್ದದಿಂದ ಬೇಡರ ಎಂದು ಕರೆಯುತ್ತಾರೆ. ೧೬೮೦ ರಲ್ಲಿ ಮೊಘಲ್ ಸೈನ್ಯ ಹಾಗೂ ಬೇಡರ ಸೈನ್ಯ ಒಂದಕ್ಕೊಂದು ಆದಿಲ್ ಷಾಹಿಯ ಸಮೀಪವಿರುವ ವಾಗಿನ್‌ಗೇರಿ ಗುಡ್ಡದಲ್ಲಿ ಎದುರಿಗೆ ಬಂದಾಗ ಬೇಡರ ಜನಾಂಗದ ಸೈನ್ಯ ಸ್ವಲ್ಪ ಪ್ರಮಾಣದಲ್ಲಿ ಇದ್ದರೂ ಸಹ ಅವರ ಶೂರತನ ಹಾಗೂ ಸಾಹಸತನಗಳನ್ನು ಕಂಡಾಗ ಔರಂಗಜೇಬನು "ಏ ಕಿಸಿ ಸೆ ನಹಿ ಡರ್ ನೆ ವಾಲೆ ಲೋಗ್" ಬೇಡರ ಲೋಗ್ ಎಂದು ನುಡಿದನು. ಅಂದಿನಿಂದ ಈ ಜನಾಂಗಕ್ಕೆ ಉರ್ದು ಶಬ್ದದಿಂದ ಬೇಡರ ಎಂದು ಕರೆದರು. ಬೇಡರು ಎಂದರೆ, ಈ ಜನಾಂಗದವರು ಎಂದಿಗೂ

ಭಿಕ್ಷೆಯನ್ನು ಬೇಡರು ಎಂದು ತಿಳಿಯುವ ಮೂಲಕ ಬೇಡರು ಎಂಬ ಹೆಸರು ಬಂದಿದೆ ಎಂದು ಈ ಜನಾಂಗದವರು ಹೇಳುತ್ತಾರೆ. (ಡಿ.ಬಿ.ಢಂಗ, ೧೯೮೮-೧-೨) "ಬೇರಡ ಅಂದರೆ ಮರಾಠಿಯಲ್ಲಿ ಎಂದಿಗೂ ಅಳದವನು ಎಂದು ಅರ್ಥವಾಗುವುದು. ಆದ್ದರಿಂದ ಈ ಜನಾಂಗಕ್ಕೆ ಮರಾಠಿಯಲ್ಲಿ ಬೇರಡ ಎಂದು ಕರೆಯುತ್ತಾರೆ. ಛತ್ರಪತಿ ಶಿವಾಜಿ ಕಾಲಕ್ಕೆ ಬೇಡರ ಜನಾಂಗದ ಅನೇಕ ಜನ ಸೈನ್ಯದಲ್ಲಿ ಸಹಾಯ ಮಾಡಿದ್ದರಿಂದ ಮಹಾರಾಷ್ಟ್ರದಲ್ಲಿ ಬೇರಡ ಎಂದು ಕರೆಯುವುದು ರೂಢಿಗೆ ಬಂತು. ದಕ್ಷಿಣ ಭಾರತದಲ್ಲಿ ಕೆಲ ಬೇಡರ ಸಂಸ್ಥಾನಗಳು ಇದ್ದವು ಅವುಗಳನ್ನು ಆಳುತ್ತಿರುವವರೆ ಬೇಡರ ದೊರೆಯರು ಆದ್ದರಿಂದ ಈ ಸಮುದಾಯಕ್ಕೆ ದೊರೆಯರು ಎಂದು ಸಹ ಹೆಸರು ಬಂದಿತು. ಈ ರೀತಿ ಕಲ್ಬುರ್ಗಿ ಜಿಲ್ಲೆ ಹಾಗೂ ರಾಯಚೂರು ಜಿಲ್ಲೆಯಲ್ಲಿ ಕರೆಯುತ್ತಾರೆ. ಅದೇ ಪ್ರಕಾರ ಈ ದೊರೆಯರು ಎಂಬ ಸಮುದಾಯದಿಂದಲೇ ದೊರೆ ಮಕ್ಕಳ ಎಂಬ ಮತ್ತೊಂದು ಉಪ ಸಮುದಾಯ ಹುಟ್ಟಿತು. ಬಿಜಾಪುರ ಆದಿಲ್ ಷಾ ರಾಜಧಾನಿಯಲ್ಲಿ ಈ ಜನಾಂಗವು ಅತೀ ಶೂರತನದಿಂದ ಎಲ್ಲಾ ಕಾರ್ಯದಲ್ಲಿ (ಯುದ್ಧ ಮೊದಲಾದವುಗಳು) ಯಶಸ್ವಿಯಾಗುತ್ತಿದ್ದರು. ಆದ್ದರಿಂದ ಈ ಜನಾಂಗದಿಂದ ಶೌರ್ಯ ಮೆಚ್ಚಿಕೊಂಡು ಆದಿಲ್ ಷಾ ಸುಲ್ತಾನನು ಇವರಿಗೆ ಖಡ್ಗವನ್ನು ಬಹುಮಾನವನ್ನಾಗಿ ಕೊಡುತ್ತಿದ್ದನು. ಇಲ್ಲಿ ಖಡ್ಗ ಎಂದರೆ ತಲವಾರ್ ಎಂದು ಅರ್ಥವಾಗುವುದು ಈ ತಲ್ವಾರ್ ಬಹುಮಾನ ಪಡೆಯುತ್ತಿರುವ ಕೆಲವು ಬೇಡರ ಸಮುದಾಯವೇ ತಳವಾರ್ ಜನಾಂಗ ಹುಟ್ಟಿ ತಳವಾರ ಎಂದು ಕರೆಯುವ ಪದ್ದತಿ ಬಂದಿದೆ. ಈ ರೀತಿ ಬಿಜಾಪುರ ಜಿಲ್ಲೆಯ ಸುತ್ತಲೂ ಕರೆಯುತ್ತಾರೆ. ವೇಡನ್ ತಮಿಳು ಶಬ್ದ ತಮಿಳಿನಲ್ಲಿ ಈ ಬೇಡರ ಸಮಾಜಕ್ಕೆ ವೇಡನ್ ಎಂದು ಕರೆಯುತ್ತಾರೆ. ತೆಲುಗು ಭಾಷೆಯಲ್ಲಿ ಬೇಡರ ಸಮಾಜಕ್ಕೆ ಭೋಯ ಎಂದು ಕರೆಯುತ್ತಾರೆ. ರಾಜರ ಕಾಲದಲ್ಲಿ ಪಲ್ಲಕ್ಕಿಯನ್ನ ಹೊರುವವರನ್ನು ಭೋಯ ಎಂದು ಕರೆಯುತ್ತಾರೆ. ರಾಮೋಶಿ ಎಂಬುದು ರಾಣವಾಸಿ ಎಂಬ ಮರಾಠಿ ಶಬ್ದದಿಂದ ಕರೆಯುವುದು ರೂಢಿಗೆ ಬಂದಿದೆ. ರಾಣ ಎಂದರೆ ಅರಣ್ಯ ಎಂದರ್ಥ. ವಾಸಿ ಎಂದರೆ ವಾಸಿಸುವವ ಬೇಡರ ಜನಾಂಗ ಪ್ರಾಚೀನ ಕಾಲದಲ್ಲಿ ಅರಣ್ಯದಲ್ಲಿ ಹೆಚ್ಚಾಗಿ ವಾಸಿಸುತ್ತಿದ್ದರು. ಆದ್ದರಿಂದ ಈ ಬೇಡರ ಜನಾಂಗಕ್ಕೆ ರಾಮೋಶಿ ಎಂದು ಕರೆಯುತ್ತಾರೆ. ಕೆಲ ಭಾಗದಲ್ಲಿ ರಾಮೋಶಿ ಎಂದರೆ ರಾಮನ ವಂಶದವರು ಎಂದು ಹೇಳಿಕೊಳ್ಳುತ್ತಾರೆ. ಈ ಬೇಡರ ಜನ ತಾವು ಬೇಟೆಯಾಡುತ್ತಿರುವಾಗ ಸ್ಪಷ್ಟವಾಗಿ ಗುರಿಯಿಟ್ಟು ಬೇಟೆಯಾಡುತ್ತಿದ್ದರು. ಆದರಿಂದ ಈ ಬೇಡರ ಜನಾಂಗಕ್ಕೆ ಗುರಿಕಾರರೆಂದು ಕಲ್ಬುಗಿ ಜಿಲ್ಲೆಯ ಕಡೆಗೆ ಕರೆಯುತ್ತಾರೆ. ಬೇಡರ ಶಬ್ದದಿಂದ ಬದಲಾವಣೆ ಹೊಂದಿ ಬೆಂಡರ ಎಂದು ಕೆಲವು ಕಡೆ ಕರೆಯುತ್ತಾರೆ. ತಮಿಳು ಶಬ್ದದಿಂದ ನಾಯಕಡ ಎಂದು ಕೆಲವು ಕಡೆ ಕರೆಯುತ್ತಾರೆ. ಕನ್ನಯ್ಯನವರು, ಕನ್ನಯ್ಯನ ಮಕ್ಕಳು ಕೆಲವು ಕಡೆ ಕರೆಯುವದು ವಾಡಿಕೆವುಂಟು. ಈ ಸಮಾಜದಲ್ಲಿ ಕೆಲವರು ಬೇಡರ ಕನ್ನಯ್ಯನ ಭಕ್ತರಾಗಿದ್ದಾರೆ. ಅವರಿಗೆ ಕನ್ನಯ್ಯನವರು ಎಂದು ಕರೆಯುತ್ತಾರೆ. ಇದು ಅಲ್ಲದೇ ಉತ್ತರ ಭಾರತದ ಕಡೆ ವಾಸಿ ಎಂದು ಕರೆಯುತ್ತಾರೆ. ವೇಟನ್, ವೇಡುವಾಸ್, ವೆಡ್ಲಾಸ್ ಈ ರೀತಿ

ಸಿಲೋನಿನಲ್ಲಿ ಕರೆಯುತ್ತಾರೆ. ಕರ್ನಾಟಕದ ಬಳ್ಳಾರಿ ಜಿಲ್ಲೆಯಲ್ಲಿ ಕೆಲ ಭಾಗಗಳಲ್ಲಿ ಪೆದ್ದರು ಎಂದು ಕರೆಯುತ್ತಾರೆ,. ಕಾಶ್ಮೀರದಲ್ಲಿ ಈ ಜನಾಂಗಕ್ಕೆ ಡೋಗ್ರಾ ಎಂದು, ಉತ್ತರ ಪ್ರದೇಶದಲ್ಲಿ ಚೌಟಿ ಎಂದು ರಾಜಸ್ಥಾನ್ ಮತ್ತು ಪಂಜಾಬ್ ಹಾಗೂ ಮಧ್ಯ ಪ್ರದೇಶ ರಾಜ್ಯಗಳಲ್ಲಿ ಭಿಲ್ಲಾ ಎಂದು ಕರೆಯುತ್ತಾರೆ. ಇದು ಅಲ್ಲದೇ ಪಂಚಾಬಿನಲ್ಲಿ ಬಾಲ್ಮೀಕಿ ಎಂದು ಬಂಗಾಳ ಮತ್ತು ಬಿಹಾರದಲ್ಲಿ ಸೇನ್ ಎಂದು ಕೇರಳದಲ್ಲಿ ನಾಯರ್ ಎಂದು ಕರೆಯುತ್ತಾರೆ. ತಮಿಳುನಾಡಿನಲ್ಲಿ ನಾಯಿಡ್ ಎಂದು ಬೈಡಾಸ್ ಎಂದು ಬಳ್ಳಾರಿ ಜಿಲ್ಲೆಯ ಕೆಲವು ಭಾಗಗಳಲ್ಲಿ ಕರೆಯಿಸಿಕೊಳ್ಳುತ್ತಾರೆ. ಪ್ರಸಿದ್ಧ ಇತಿಹಾಸಕಾರ ಡಾ. ಪಿ.ಬಿ. ದೇಸಾಯಿ ತಮ್ಮ ಮದಗಜಮಲ್ಲ ಪುಸ್ತಕದಲ್ಲಿ ಈ ರೀತಿ ತಿಳಿಸುತ್ತಿದ್ದಾರೆ. ಬೇಡ ಜನಾಂಗದ ಪ್ರಾಚೀನ ಚರಿತ್ರೆ ಕನಿಷ್ಠ ೧೨–೧೩ನೇ ಶತಮಾನದಷ್ಟು, ಆದರೂ ಹಿಂದಿನ ಕಾಲದವರೆಗೆ ಹೋಗುವುದು. ಬೇಡರು ಎಂದರೆ, ಕರ್ನಾಟಕದ ರಜಪೂತರು. ರಜಪೂತರು ತಾವು ರಾಜ ಪುತ್ರರು ಎಂದರೆ ಅರಸನ ಮಕ್ಕಳು ಎಂದು ಹೇಳಿಕೊಳ್ಳುವಂತೆ ಈ ಬೇಡರು ತಾವು ದೊರೆ ಮಕ್ಕಳು, ಕನ್ನಯ್ಯನವರು ಎಂದರೆ ಶ್ರೀ ಕೃಷ್ಣನ ಪರಿವಾರದವರು ಎಂಬುದಾಗಿ ಗೌರವದಿಂದ ಕರೆಯಿಸಿಕೊಳ್ಳುವರು. ಬೇಡರು ಮೊದಲಿನಿಂದಲೂ ದಂಡಿನ ಊಳಿಗಕ್ಕಾಗಿ ಮೀಸಲಾಗಿ ನಿಂತಿದ್ದ ಕ್ಷಾತ್ರ ವೃತ್ತಿಯ ವೀರ ಜನಾಂಗ ಈ ಜನಾಂಗದವರು ಕರ್ನಾಟಕದ ವಿಸ್ತಾರವಾದ ಪ್ರದೇಶಗಳಲ್ಲಿಯೂ ಆಂಧ್ರ ಮತ್ತು ಮಹಾರಾಷ್ಟ್ರಗಳ ಕೆಲ ಭಾಗಗಳಲ್ಲಿಯೂ ನೆಲೆಸಿದರು. ವಿಜಯನಗರದ ಸ್ಥಾಪನೆಯ ಪೂರ್ವದಲ್ಲಿ ಮಹಮ್ಮದಿಯರ ದಾಳಿಯನ್ನ ಹೆದರಿಸಿ ಕೆಲ ಕಾಲತಡೆದು ನಿಲ್ಲಿಸಿ ಸ್ವರಾಜ್ ಮತ್ತು ಸ್ವ ಧರ್ಮ ರಕ್ಷಣೆಯ ಆದರ್ಶವನ್ನು ಎತ್ತಿ ಹಿಡಿದು ವಿಜಯನಗರದ ಸ್ಥಾಪನೆಗೆ ಮಾರ್ಗ ತೋರಿಸಿಕೊಟ್ಟ ವೀರ ಕಂಪಿಲರಾಯ ಹಾಗೂ ಆತನ ಮಗ ಕಡುಗಲಿ ಕುಮಾರನಾದ ಕುಮಾರ ರಾಮನಾಥನು ಈ ಬೇಡರ ಜಾತಿಯವರೆ ಆಗಿದ್ದರೂ ಮುಂದೆ ವಿಜಯನಗರ ಸೈನ್ಯದ ಬಹುಭಾಗವು ಈ ಬೇಡ ಕಾಲಾಳುಗಳ ಪಡೆಯಿಂದ ವ್ಯಾಪಿಸಿದ್ದಿತ್ತು. ವಿಜಯನಗರದ ಆನಂತರ ಪ್ರಾಮುಖ್ಯತೆಗೆ ಬಂದ ಅನೇಕ ಪಾಳೇಗಾರ ರಾಜ್ಯಗಳು ಈ ಬೇಡರಿಂದ ಸ್ಥಾಪನೆಯಾದವು. ಹೈದರ್ ಟಿಪ್ಪುವಿನ ದಂಡಿನಲ್ಲಿ ಈ ಬೇಡ ವೀರರು ಬಹು ಸಂಖ್ಯೆಯಿಂದ ಸೇರಿಕೊಂಡಿದ್ದು, ಆ ಪಿತಾ ಪುತ್ರಾಗಳ ವಿಜಯಗಳ ಶ್ರೇಯಸ್ಸಿನ ಮುಖ್ಯ ಭಾಗವು ಈ ಬೇಡರಿಗೆ ಸಲ್ಲುವುದಾಗಿದೆ ಎಂದು ಬಲ್ಲವರು ಅಭಿಪ್ರಾಯ ಪಟ್ಟಿರುವರು. (ವೀರಣ್ಣ ದಳವಾಯಿ, ೧೯೯೯,–೩) "ಆ ಕಾಲದ ಇಬ್ಬರೂ ಮುಸ್ಲಿಂ ಚರಿತ್ರೆಕಾರರು ವಿಜಯನಗರ ಸಾಮ್ರಾಜ್ಯ ಸ್ಥಾಪಕ ಹಕ್ಕ–ಬುಕ್ಕರನ್ನು ವಿಮರ್ಶಿಸುವಂತೆ ಒಬ್ಬರು ಓರಂಗಲ್ಲಿನ ಕಣ್ಯ ನಾಯಕನ ಸಂಬಂಧಿಕರೆಂದು ಇನ್ನೊಬ್ಬರು ಕಂಪಿಲರಾಯನ ಮಕ್ಕಳು ಎಂದು ಇನ್ನೂ ಕೆಲವು ಉಲ್ಲೇಖಗಳಲ್ಲಿ ಕಂಪಿಲರಾಯನ ಅಕ್ಕನ ಮಕ್ಕಳು ಎಂದು ಇವನ ತಂದೆ ಸಂಗಮರಾಯ ಎಂದು ತಿಳಿಸಿದ್ದಾರೆ. ಹೀಗೆ ಒಬ್ಬೊಬ್ಬ ಲೇಖಕರು ಒಂದೊಂದು ರೀತಿಯಲ್ಲಿ ಉಲ್ಲೇಖಿಸಿದ್ದರೂ ಇವರು ಬೇಡ ಜನಾಂಗಕ್ಕೆ ಸೇರಿದವರು ಎಂದು ಸ್ಥಿರಗೊಳಿಸಿದ್ದಾರೆ. ವಿಜಯನಗರ ಅರಸರಲ್ಲಿ ಪ್ರೌಢ ದೇವರಾಯ ತುಳು ವಂಶದ ನರಸ ನಾಯಕನ ಮಗ ಕೃಷ್ಣದೇವರಾಯ ಇತಿಹಾಸ ಲೋಕದಲ್ಲಿ ಧೃವ ತಾರೆಗಳಾಗಿ ಬೆಳಗಿದರು. ಶ್ರೀ

ಕೃಷ್ಣನ ಅಂತ್ಯ ಆಶೀರ್ವಾದಕ್ಕೆ ಪಾತ್ರನಾದ ಮೂಗ ನಾಯಕ, ಮಹಿಮಾ ಪುರುಷ ಜಗಲೂರ ಪಾಪ ನಾಯಕ ೧೩ನೆಯ ಶತಮಾನ ಸದ್ಯ ಬೆಂಗಳೂರಿನ ಕೈಲಾಸ ಆಶ್ರಮ ನಿವಾಸಿ ಜ್ಞಾನಜ್ಯೋತಿ ಪಳನಿ (ತಿರುಚಿ) ಸ್ವಾಮಿಗಳು ಇದೇ ಜನಾಂಗದವರು" ಜಗತ್ತಿನಲ್ಲಿ ಬೇಡರಷ್ಟು ಶೂರರು ಸಿಗಬಹುದು ಆದರೆ, ಬೇಡರಿಗಿಂತ ಶೂರರು ದೊರೆಯಲಾರರು ಎಂದು ವಿಲಿಯಂ ಸ್ಮಿತ್ ಹೇಳಿದ್ದಾರೆ" ಮೂಲತಃ ಕಾಡಿನಲ್ಲಿ ವಾಸವಾಗಿದ್ದುಕೊಂಡು ಬೇಟೆಯ ವೃತ್ತಿಯಿಂದ ಬದುಕುವ ಜನಾಂಗವನ್ನು ಬೇಡರು ಎಂದು ಕರೆಯಲಾಗಿದೆ. ನಾಗರಿಕತೆ ಬೆಳವಣಿಗೆಯ ಹಂತದಲ್ಲಿ ಇವರು ಗ್ರಾಮವಾಸಿಗಳಾಗಿ ಕೃಷಿ ಮತ್ತಿತರ ವೃತ್ತಿಗಳನ್ನು ಕೈಗೊಂಡರು. ಇವರಿಗೆ ಬೇರಾದ್, ಕಿರಾತ, ಶಬರ, ವ್ಯಾಧ ಎಂಬ ಬೇರೆ ಬೇರೆ ಹೆಸರುಗಳುಂಟು. ಬೇಡರು ಕಣ್ವ ಋಷಿಯ ವಂಶಜರು ಎಂಬ ನಂಬಿಕೆಯಿದೆ. ಅದಕ್ಕಾಗಿಯೇ ಅವರು ತಮ್ಮನ್ನು 'ಕಾಣ್ಯಮ್' ಕುಲದವರು ಎಂದು ಕರೆದುಕೊಳ್ಳುತ್ತಾರೆ. ತಮ್ಮ ವಂಶದ ಮೂಲ ಪುರುಷ ವಾಲ್ಮೀಕಿ ಕ್ಷತ್ರಿಯರೆಂದು ಕರೆದುಕೊಳ್ಳುತ್ತಾರೆ. ಪೂರ್ವದಲ್ಲಿ ದಾರಿಹೋಕರನ್ನು ಪೀಡಿಸಿ ಅವರಿಂದ ವಸ್ತುಗಳನ್ನು ದೋಚಿಕೊಳ್ಳುತ್ತಿದ್ದರು. ತಮಿಳುನಾಡಿನಲ್ಲಿ ಆಗಿ ಹೋದ ೬೩ ಪುರಾತನ ಶಿವಶರಣರಲ್ಲಿ ಒಬ್ಬರಾಗಿರುವ ಬೇಡರ 'ಕಣ್ಣಯ್ಯ' ಎನ್ನುವ ವ್ಯಕ್ತಿಯು ಈ ಜನಾಂಗದ ಆದರಣಿಯ ವ್ಯಕ್ತಿ. ವಿದೇಶಿ ವಿದ್ವಾಂಸರಾದ ಬುಚಾನನ್‌ರವರು 'ಬೇಡರು ಮೂಲತಃ ದ್ರಾವಿಡ ಜನಾಂಗಕ್ಕೆ ಸೇರಿದವರಾಗಿರಬಹುದು ಎಂದು ಹೇಳಿದ್ದಾರೆ. ಉತ್ತರ ಮಲಬಾರಿನ ಪೆರಿಂಗಾಲ್ ಪೆಟ್‌ವಾನ್ಸ್ ಅವರು, ಟ್ರವಂಕೂರಿನ ಮಾಲವೇದನ್ಸ್, ಸಿಲೋನಿನ ವೆಡ್ಡಾ ಮತ್ತು ಕರ್ನಾಟಕದ ಬೇಡರು ಒಂದೇ ಮೂಲದವರು ಎಂಬುದು ರೈಸ್ ಅವರ ಅಭಿಪ್ರಾಯವಾಗಿದೆ. ವ್ಯಾಪಕವಾದ ತೌಲನಿಕವಾದ ಅಧ್ಯಯನದ ಮೂಲಕ ಈ ಅಭಿಪ್ರಾಯ ಖಚಿತ ರೂಪ ಪಡೆಯಬೇಕಾಗಿದೆ. ನಮ್ಮ ದೇಶದಲ್ಲಿ ಬಹು ಪುರಾತನ ಕಾಲದಿಂದಲ್ಲೂ ಈ ಜನಾಂಗ ಅಸ್ತಿತ್ವದಲ್ಲಿ ಇತ್ತು ಎಂಬ ಬಗೆಗೆ ಅನುಮಾನವಿಲ್ಲ. ಈ ವಿಷಯಕ್ಕೆ ಸಂಬಂಧಿಸಿದಂತೆ ಪೌರಾಣಿಕ-ಸಾಂಸ್ಕೃತಿಕ ಹಿನ್ನೆಲೆಯ ಹಲವಾರು ಉಲ್ಲೇಖಗಳು ಉಪಲಬ್ಧವಿದೆ. (ಡಾ. ಕರಿಶೆಟ್ಟಿ ರುದ್ರಪ್ಪ, ೧೯೯೫, ೧೧-೧೨) "ಬೇಟೆಯೇ ಬದುಕಿನ ಭಾಗವಾಗಿಸಿಕೊಂಡ ಬುಡಕಟ್ಟು ಜನಾಂಗವು ಬೇಡರು ಎಂದು ಕರೆಯಿಸಿಕೊಂಡ ಬಗ್ಗೆ ಒಂದು ವರ್ಣರಂಜಿತ ಇತಿಹಾಸವೇ ಇದೆ. ಕಾಡು, ಕಣಿವೆ, ಗುಡ್ಡ ಗವಿಗಳನ್ನೆ ತಮ್ಮ ವಾಸಸ್ಥಳ ಮಾಡಿಕೊಂಡ ಇವರು ಚರ್ಮ ತೊಗಟೆಗಳನ್ನೆ ಉಡುಪಾಗಿ ಧರಿಸಿದರು. ಆದಿ ಮಾನವನ ಎಲ್ಲ ಆವಸ್ಥೆಗಳನ್ನ ಹೊತ್ತುಕೊಂಡ ಇವರು ಕ್ರೂರ ಪ್ರಾಣಿಗಳ ಮಧ್ಯೆ ಬಾಳಿದರು. ಇಂತಹ ಬೇಡ ಜನಾಂಗದ ರೋಮಾಂಚಕ ಹೆಜ್ಜೆಗಳು ಎಲ್ಲಿಂದ ಆರಂಭವಾಗುತ್ತವೆ ಎಂಬುದಕ್ಕೆ ಹಲವಾರು ವಿದ್ವಾಂಸರು ಅನೇಕ ವಾದಗಳನ್ನು ನೀಡಿದ್ದಾರೆ. ಆದಿ ಮೂಲವಾದ ಭಗವಂತನು ಬೇಡರ ಚಂಚು ಲಕ್ಷ್ಮಿಯನ್ನು ಮದುವೆಯಾಗುವ ಮೂಲಕ ಬೇಡರ ವಂಶವನ್ನು ಬೆಳೆಸಿದನು ಎಂಬ ಕಥೆಯೊಂದು ನಮ್ಮಲ್ಲಿ ಇಂದಿಗೂ ಪ್ರಚಲಿತವಿದೆ. ಅದರಂತೆ ಮನುವಿನ ೭ನೆಯ ತಲೆಯವನಾಗಿ ಚಂದ್ರ ವಂಶದಲ್ಲಿ ಕಾರ್ತ್ಯಾವಿರ್ಯಾರ್ಜುನ ಹುಟ್ಟಿದ. ಈತ ಹೇಹಯ ರಾಜ್ಯವನ್ನು ಆಳುತ್ತಿರುವಾಗ ವೈಷ್ಣವ ಯಾಗಾದಿಗಳನ್ನು

ಮಾಡುತ್ತಿದ್ದ. ಇದೇ ಸಂದರ್ಭದಲ್ಲಿ ಜಮದಗ್ನಿ ಇತನಿಂದ ಹತನಾದ. ಇದರಿಂದ ಕುಪಿತನಾದ ಪರಶುರಾಮ, ಕಾರ್ತ್ಯಾವಿರ್ಯಾರ್ಜುನ ಹಾಗೂ ಅವನ ಮಕ್ಕಳನ್ನು ಕೊಂದು ಕ್ಷತ್ರಿಯರೆಲ್ಲಾರನ್ನು ಸೆದೆಬಡಿಯಲು ೨೧ ಬಾರಿ ಭೂಮಿ ಮೇಲೆ ದಂಡೆಯಾತ್ರೆ ಕೈಗೊಂಡ. ಬೆದರಿದ ಕ್ಷತ್ರಿಯರೆಲ್ಲರು ಕಾಡಿಗೆ ಹೋದರು. ಕಾಡುವಾಸಿಗಳಾದರು. ಇವರೆ ಮುಂದೆ ಬೇಡರಾದರೆಂದು ಹೇಳುತ್ತಾ ಕ್ಷತ್ರಿಯರಿಗೂ ಬೇಡರಿಗೂ ಭಿನ್ನತೆ ಇಲ್ಲ ಎಂದು ಕೆಲ ಶೋಧಕರು ವಾದಿಸಿದ್ದಾರೆ. ಪಾಂಡವರ ಪ್ರತಿಯೊಬ್ಬರಿಗೂ ಒಂದೊಂದು ಬೇಡರ ಪಡೆ ಬೆಂಗಾವಲಿಗೆ ಇತ್ತಂತೆ. ದಕ್ಷಿಣದ ಪೈನಾ ಗಂಗಾ ತೀರಾದ ಸುತ್ತಿನ ಪ್ರದೇಶದ ಬೇಡರ ದೊರೆಯ ಹತೋಟಿಯಲ್ಲಿತ್ತಲ್ಲದೇ ಸುರ್ಪರಕದಿಂದ ರತ್ನಗಿರಿಯವರಿಗಿನ ಪ್ರದೇಶ ಬೇಡರ ರಾಜ್ಯವಾಗಿತ್ತೆಂದು ಹೇಳುವ ಮೂಲಕ ಮಹಾಭಾರತ ಕಾಲೀನ ಬೇಡರ ರಾಜ್ಯ ಮತ್ತು ಅವರ ಅಸ್ತಿತ್ವವನ್ನು ಗುರುತಿಸಲಾಗಿದೆ. ಕಲಿಯುಗದ ಆರಂಭಕ್ಕೆ ದಕ್ಷಿಣದ ದೇಶದಲ್ಲಿ ಬೇಡರ ವಿನಃ ಬೇರೆ ಯಾವ ಜನಾಂಗವು ಇರಲಿಲ್ಲ. ಅನಂತರ ಉದಯಿಸಿದ ಮನೆತನಗಳಿಗೆಲ್ಲ ಬೇಡರೇ ಮೂಲರೆಂದು ಪ್ರತಿಪಾದಿಸುವ ಅನೇಕ ಊಹೆಯ ವಾದಗಳಿವೆ. ಬೇಡರ ಜನಾಂಗವು "ಮೂಲ ದ್ರಾವಿಡ" ಜನಾಂಗದವರೆಂಬ ವಾದದಲ್ಲಿ ಎರಡಿಲ್ಲ. ಅವರಿದ್ದ ಪುಳಿಂದ, ಭಿಲ್ಲ, ಕಿರಾತ, ವ್ಯಾದ, ಶಿಬಿರ, ನಿಷಾದ ಮುಂತಾದ ಹೆಸರುಗಳೇ ಸಾಕ್ಷಿ. ಅಂತೆಯೇ ದ್ರಾವಿಡ ಭಾಷೆಯಲ್ಲಿ ವೇಡನ್, ವೇಣದನ್ ಎಂದೆಲ್ಲಾ ಕರೆಯಲಾಗಿದೆ. ಹಳೆಗನ್ನಡದಲ್ಲಿ ವೇಡರ್, ವೇಳರ್, ವಿದಿಕ್, ಬಿಲ್ಲ, ಬೇಂಟೆಯವರ್, ಬೇಂಟೆಕಾರ, ವಿಯದರ್, ಬಿಯದರ್, ಕುಣಿಂದರ್, ಕೋವರ್ ಎಂಬ ನಾಮಗಳಿವೆ. ರಾಷ್ಟ್ರಕೂಟರ ಅಪಭ್ರಂಶ ಭಾಷೆಯಲ್ಲಿ ಸಾಹಲ, ಸಾಹಿಲ, ನಾ ಇಲ್ಲ, ವಾಹ, ಸಮರ, ಸಿಮಿರ, ಬೆಲಾಡ, ಭೀಲ್ಲ, ಪಾದ್ಧೀಯ ಮುಂತಾಗಿ ಗುರುತಿಸಲಾಗಿದೆ. ಇವೆಲ್ಲ ಪದಗಳು ಬೇಡ ಜನಾಂಗದ ಪ್ರಾಚೀನತೆಯ ವ್ಯಾಪ್ತಿಯನ್ನು ಸ್ಪಷ್ಟೀಕರಿಸುತ್ತವೆ. ಬೇಡ ಜನಾಂಗದ ಮೂಲ 'ವಾಲ್ಮೀಕಿ' ಯೆಂದು ಹಲವರ ಅನಿಸಿಕೆ. ಕಿರಾತರ ಯಜಮಾನನಾದ ಈತ ಕಾಮಕೇತು , ಲಕ್ಷ, ಮೀನ, ಮಲ್ಲರೆಂಬ ಇನ್ನಿತರ ಏಳು ಜನ ತನ್ನ ಮಕ್ಕಳ ನೇತೃತ್ವದಲ್ಲಿ ಏಳು ಪಡೆಗಳನ್ನು ರಚಿಸಿ, ದರೋಡೆ ನಡೆಸುತ್ತಿದ್ದನು. ಮುಂದೆ ಕಾಡಿನಲ್ಲಿ ಕಾಲಾನಂತರ ಚದುರಿ ಹೋದ ಪಡೆಗಳೇ ಬೇಡರ ಜನಾಂಗದ ವಂಶ ವಿಕಾಸಕ್ಕೆ ನಾಂದಿ ಹಾಡಿದವು ಎಂಬ ಒಂದು ಐತಿಹ್ಯವಿದೆ. ಅದೇನೇ ಇದ್ದರೂ ತೂರಿ ಹೋದ ಇಂಥ ಬೇಡ ಪಡೆಯ ತುಕಡಿಗಳು ಆಯಾ ಪ್ರದೇಶಗಳಲ್ಲಿ ಗಟ್ಟಿಯಾಗಿ ನೆಲೆಯೂರಿದವು ಎಂಬುದರಲ್ಲಿ ಸಂಶಯವಿಲ್ಲ. ಅವರೀಗ ಅಲ್ಲಿಯ ಹೆಸರುಗಳಿಂದಲೇ ಇಂದು ದೇಶಾದ್ಯಂತ ಗುರುತಿಸಲ್ಪಡುತ್ತಿದ್ದಾರೆಂಬುದೇ ಬಹು ಮಹತ್ವ ಪೂರ್ಣ ಅಂಶವಾಗಿದೆ. ವಾಲ್ಮೀಕಿ ತ್ರೇತಾಯುಗ ಮೂಲ ಸಂವೇದನೆಯನ್ನು ಬದುಕಿನ ಮೌಲ್ಯವನ್ನು ಸೋಲು ಗೆಲುವುಗಳನ್ನೆಲ್ಲ ಒಟ್ಟಾಗಿ ಹಿಡಿದಿಟ್ಟ ದಾರ್ಶನಿಕ ಶಕ್ತಿ ವಾಲ್ಮೀಕಿಗೆ ದಕ್ಕಿತು. ಮತ್ತು ಅದು ರಾಮಾಯಣದ ರೂಪದಲ್ಲಿ ಹೊರಬಿತ್ತು. ಇಂಥ ಶಕ್ತಿ ಸಿಗುವ ಮುನ್ನ ಆದಿ ಮಾನವನಂತೆ, ಅಡವಿಯಲ್ಲಿ ಅಲೆಯುತ್ತಿದ್ದ ವಾಲ್ಮೀಕಿ ಪ್ರಚೇತಸ ಮತ್ತು ಪ್ರಮೋಜೆಯರ ಮಗನಾಗಿ ಹುಟ್ಟಿ, ತಮಸಾ ನದಿ ತೀರದಲ್ಲಿ ವಾಸವಾಗಿದ್ದನು. ನಂತರ ಕಿರಾತರ ಯಜಮಾನನಾಗುವ

ಮೂಲಕ ಕಾಮಕೇತು, ಲಕ್ಷ, ಮೀನಮಲ್ಲರೆಂಬ ಹನ್ನೆರೆಡು ಮಕ್ಕಳಲ್ಲಿ ಏಳು ಮಕ್ಕಳನ್ನು ಆಯ್ಕೆ ಮಾಡಿಕೊಂಡು ವಾಲ್ಮೀಕಿಯು ಅವರ ಮುಖಂಡತ್ವದಲ್ಲೇ ಪಡೆ ರಚಿಸಿ, ದರೋಡೆ ನಡೆಸುತ್ತಿದ್ದನೆಂದು ಒಂದು ಅಭಿಪ್ರಾಯವಿದೆ. ಮುಂದೆ ಕಾಡಿನಲ್ಲಿ ಚದುರಿ ಈ ಪಡೆಗಳೇ "ಬೇಡರ" ಜನಾಂಗದ ವಂಶ ವಿಕಾಸಕ್ಕೆ ಕಾರಣವಾಯಿತೆಂದು ಹೇಳುತ್ತಾರೆ. ಇದನ್ನೆ ಹಿನ್ನೆಲೆಯಾಗಿಟ್ಟುಕೊಂಡು ಹಲವರು ಬೇಡ ಜನಾಂಗದ ಮೂಲ ವಾಲ್ಮೀಕಿ ಎಂದು ವಾದಿಸುತ್ತಾರೆ. ಇದರಿಂದ ಬೇಡರ ಒಂದು ಗುಂಪು ತಮ್ಮನ್ನು ವಾಲ್ಮೀಕಿ, ವಾಲ್ಮೀಕಿ ಮಕ್ಕಳೆಂದು ಕರೆಯಿಸಿಕೊಳ್ಳಲು ಇಚ್ಚಿಸುತ್ತಾರೆ. ಮಹಾರಾಷ್ಟ್ರದಲ್ಲಿ ಕಬ್ಬಲಿಗರು ವಾಲ್ಮೀಕಿ ಪೂಜಕರಾಗಿರುವುದರಿಂದ ಅವರಿಗೆ ವ್ಹಾಲ್ಯಾ (ವಾಲ್ಮೀಕಿ) ಕೋಳಿ ಎನ್ನುತ್ತಾರೆ. ಅದರಂತೆ ತ್ರೇತಾಯುಗದಲ್ಲಿದ್ದ ಗುಹ, ಶಬರಿ, ದ್ವಾಪರದಲ್ಲಿದ್ದ ಏಕಲವ್ಯ, ಧರ್ಮವ್ಯಾದ, ಕಲಿಯುಗದಲ್ಲಿದ್ದ ಬೇಡರ ಕಣ್ಣಪ್ಪರನ್ನು ಬೇಡರು ತಮ್ಮ ಪೂರ್ವಜರೆಂದು ಇಂದಿಗೂ ಆರಾಧಿಸುತ್ತಿರುವುದರ ಅರ್ಥ. ಇವರ ವಂಶ ವಿಕಾಸವನ್ನು ಸೂಚಿಸುತ್ತದೆ. ಅಷ್ಟೇ ಅಲ್ಲ ಅವರ ವಂಶದವರೆಂದು ಹೇಳಿಕೊಳ್ಳಲು ಹೆಮ್ಮೆ ಪಡುತ್ತಾರೆ. ವ್ಯಾಸನ ವಂಶಸ್ಥರ ಚರಿತ್ರೆ ಮಹಾಭಾರತವಾದರೆ, ವಾಲ್ಮೀಕಿ ತನ್ನ ವಂಶದ ಚರಿತ್ರೆಯನ್ನು ರಾಮಾಯಣವಾಗಿರಬಹುದೇ ಎಂಬ ಬಲವಾದ ಊಹೆವೊಂದು ಇದೆ.

**೩.೨. ಬೇಡ ಸಮುದಾಯ**

ಬೇಡರ ಗುಂಪಿನಲ್ಲಿ ಶೂರನಾದ ವ್ಯಕ್ತಿ ಪಾಳೆಪಟ್ಟುಗಳನ್ನು ಕಟ್ಟಿಕೊಂಡು ಪಾಳೆಗಾರನೆನಿಸಿದ. ಆತನೆ ಮುಂದೆ ಮುಖಂಡನಾದ. ನೇತೃತ್ವ ವಹಿಸಿದ ಈತನಿಗೆ ನಾಯಕನೆಂದೇ ಗೌರವ ಸೂಚಕ ಅಭಿದಾನವಿತ್ತರು. ನಾಯಕ ಎಂಬ ಪದವು ಕ್ರಿ.ಶ. ೯ನೆಯ ಶತಮಾನದವರೆಗೆ ಕರ್ನಾಟಕದಲ್ಲಿ ಸೇನಾಪತಿ, ಪಡೆಗಳ ಮುಂದಾಳು, ಮುಖ್ಯಸ್ಥನೆಂಬ ಅರ್ಥಗಳಲ್ಲೇ ಬಳಕೆಯಾಗಿದೆ. ಬೇಡರ ಹೆಸರುಗಳ ಕೊನೆಗೆ ನಾಯಕ ಪದ ಬಳಕೆಯಾಗುವ ಪೂರ್ವದಲ್ಲಿ ಬೋವ, ಬೋಯ, ಬೋಯಿ ಎಂದಿದ್ದ ಬಗ್ಗೆ ಹಲವಾರು ದಾಖಲೆಗಳು ಇಂದಿಗೂ ದೃಢೀಕರಿಸುತ್ತವೆ. ಬೇಡರ ರಾಜ್ಯಗಳಲ್ಲಿ ಸುಮಾರು ೫೨೦ ವರ್ಷ ಗಳಷ್ಟು ದೀರ್ಘಕಾಲ ಇಂಥ ನಾಯಕರು ಶ್ರೀಮನ್ಮಹಾನಾಯಕಾಚಾರ್ಯ ಎಂಬ ಬಿರುದು ಹೊತ್ತು ಆಳ್ವಿಕೆ ಮಾಡಿದರೆಂಬುದು ಗಮನಾರ್ಹ. ನಾಯಕ ಎಂದು ಹೆಸರು ಬರಲು ಕಾರಣ ಆದಿಕಾಲದಲ್ಲಿ ಏಕಲವ್ಯನಂಥ ಅನೇಕರು ಅರಸರಾಗಿದ್ದರು. ಅಂಥವರಿಂದ ಬಂದ ಕೆಲ ಜನಾಂಗಕ್ಕೆ ನಾಯಕ ಜನಾಂಗ ಎಂದು ಕರೆಯುತ್ತಾರೆ. ನಾಯಕ ಈ ಶಬ್ದ ಬರಲು ಕಾರಣವನ್ನು ಮತ್ತೊಂದು ರೀತಿಯಲ್ಲಿ ಈ ಜನಾಂಗದವರು ಹೇಳುತ್ತಾರೆ. ಅದು ಏನೆಂದರೆ, ಈ ಶಬ್ದ ೯ ನೆಯ ಶತಮಾನದಿಂದ ಬಳಕೆಯಲ್ಲಿ ಬಂದಿದೆ. ಇದು ವಿಜಯನಗರ ಅರಸರ ಕಾಲದಲ್ಲಿ ಆಗಿನ ರಾಜರು ಈ ಸಮಾಜದಲ್ಲಿ ಕೆಲವರಿಗೆ ಉಂಬಳಿಯನ್ನು ಹಾಕಿ, ಮುಖಂಡತ್ವವನ್ನು ಕೊಟ್ಟು, ಅವರಿಗೆ ನಾಯಕರೆಂದು ಕರೆಯುತ್ತಿದ್ದರು. ಅವರೆಲ್ಲರನ್ನು ತಮ್ಮ ಸೈನ್ಯದ ಜೊತೆ ಸೇರಿಸಿಕೊಂಡು ಹೋಗುತ್ತಿದ್ದರು. ಆದ್ದರಿಂದ ಇವರಿಗೆ ನಾಯಕ ಎಂದು ಹೆಸರು ಬಂದಿತು. (ಡಿ.ಡಿ. ಥಂಗ, ೧೯೮೮) "ಸದ್ಯ ಕರ್ನಾಟಕದಲ್ಲಿ ಬೇಡರಲ್ಲಿ ಮುಖ್ಯವಾಗಿ ಎರಡು ಬಣಗಳನ್ನು ಕಾಣುತ್ತೇವೆ.

ಮ್ಯಾಸ ಬೇಡರು ಮತ್ತು ಊರ ಬೇಡರು ಎಂದು. ತಮ್ಮನ್ನು ತಾವೇ ಸೀಳಿಕೊಂಡಿದ್ದಾರೆ. ಆಳುತ್ತಿರುವ ಅರಸನಿಗೆ ವೈರಿಗಳ ಬರುವಿಕೆ ಬಗ್ಗೆ ಗೂಢಚಾರಿಕೆ ತಲುಪಿಸುತ್ತಾ ಕಾಡಿನಲ್ಲೇ ಅಲೆಯುತ್ತಿದವರೆಲ್ಲಾ ಮ್ಯಾಸ ಬೇಡರಾದರೆ ಊರಲ್ಲಿದ್ದವರೆಲ್ಲಾ ಊರ ಬೇಡರಾದರು. ಮ್ಯಾಸ ಬೇಡರಲ್ಲಿ ಊರು, ಮ್ಯಾಸ, ಅಡವಿ ಮ್ಯಾಸ, ಕಳ್ಳ ಮ್ಯಾಸ, ಮುಂಜಿ ಮ್ಯಾಸಗಳೆಂದು ವಿಧಗಳಿವೆ. ಮೋಯಿಸ ಇದರ ಅರ್ಥವೇ ಮ್ಯಾಸವೆಂದು ಡಾ. ಕೃಷ್ಣಮೂರ್ತಿ ಹನ್ನೂರ ಎನ್ನುವರ ತರ್ಕ. ಮೀಸಲು ಸೈನ್ಯವಾದ ಇವರ ವೃತ್ತಿಯನ್ನು ಗ್ರಾಮೀಣರು ಮ್ಯಾಸ ಎಂದು ಅರ್ಥದಲ್ಲಿ ಉಪಯೋಗಿಸಿರುವುದನ್ನು ಡಾ. ಅನುರಾಧ ಆಧಾರಿಸುತ್ತಾರೆ. ಇವರನ್ನೇ ಕೆಲವೆಡೆ ಊರು ನಾಯಕರು, ಮ್ಯಾಸ ನಾಯಕರೆಂದು ಗುರುತಿಸಲಾಗುತ್ತದೆ. ಮಾರಮ್ಮ ನಾಯಕರು, ಮುಚ್ಚಾಲ ನಾಯಕರು, ಹಾಲು ಬೇಡರು, ಮೊಂಡ ಬೇಡರು, ಸಂಚಲು, ಭಿಲ್ಲರು, ರಾಜ ಪರಿವಾರದವರು, ಕೊಂಡ ರಾಜಲು ಎಂದೆಲ್ಲಾ ಕರೆಯುವಲ್ಲಿ ಅವರ ವೃತ್ತಿ ಮತ್ತು ಗುಣ ವಿಶೇಷಣಗಳನ್ನು ಅರ್ಥೈಸಲೇಬೇಕಾಗುತ್ತದೆ. ಇವರಲ್ಲಿ ಕೆಲವರು ಕ್ರಮೇಣ ಊರು ಕಟ್ಟಿ ವಿಸ್ತರಿಸಿ ಅವುಗಳ ಮೇಲೆ ಒಡೆತನ ಸಾಧಿಸಿ ರಾಜ್ಯಪಾಲರಾದರು, ರಾಜರು ಎನಿಸಿಕೊಂಡರು. ಸದಾ ಸುಸಜ್ಜಿತ ಸೈನ್ಯವನ್ನು ಹೊಂದಿ, ದಂಡಿನೊಡನೆ ಪಾಳೆಯನ್ನು ಹಾಕಿ ಇಳಿದುಕೊಂಡು ಕದನಕ್ಕೆ ಸಿದ್ಧವಾಗಿರತಕ್ಕವರಿಗೆ ಪಾಳೇಯಗಾರರು ಎಂದು ಕರೆಯುತ್ತಾರೆ. ಪಾಳೇಯಗಾರರಲ್ಲಿ ಬೇಡರ ಸಂಖ್ಯೆ ಹೆಚ್ಚಾಗಿರುವ ಕಾರಣಕ್ಕೆ ಇವರು ತಮ್ಮನ್ನು ಪಾಳೇಗಾರರು ಎಂದು ಕರೆದುಕೊಂಡಿರಬೇಕು. ವಿಜಯನಗರ ಸಾಮ್ರಾಜ್ಯಕ್ಕಿಂತ ಹಿಂದೆಯೇ ಪಾಳೇಗಾರರ ಮನೆತನಗಳು ಇದ್ದರೂ ಈ ಕಾಲದಲ್ಲಿಯೇ ಇವರು ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುಕೊಂಡಿದ್ದರು. ರಕ್ಕಸ ತಂಗಡಿ ಕದನದ ನಂತರ ಸ್ವತಂತ್ರವಾಗಿ ಪಾಳೆಯ ಪಟ್ಟುಗಳಲ್ಲಿ ಆಳ್ವಿಕೆ ನಡೆಸಿದರು ಬ್ರಿಟಿಷರ ಆಗಮನದಿಂದ ಇವರ ಅಧಿಕಾರ ಮೊಟಕಾಯಿತು. ನಾಯಕ ಎಂಬ ಪದವನ್ನು ಕುರಿತು ಚಿತ್ರಲಿಂಗಯ್ಯ, ಎಂ.ವಿ. ಅವರು ವಿವರಣಾತ್ಮಕ ಮಾಹಿತಿಯನ್ನು ಒದಗಿಸಿದಾರೆ. 'ನಾಯಕಾಚಾರ್ಯ, ಶ್ರೀ ಮನ್ಮಮಹಾನಾಯಕಚಾರ್ಯ, ನಾಯಕ ಶಿರೋಮಣಿ, ನಾಯಕ ನಾರಾಯನ, ನಾಯಕ ಶಿಖಾಮಣಿ ಮುಂತಾದ ಬಿರುದುಗಳನ್ನು ಪಡೆದುಕೊಂಡಿದ್ದ ಬೇಡ ಜನಾಂಗದ ಪಾಳೇಯಗಾರರು ತಮ್ಮನ್ನು 'ನಾಯಕ ಜಾತಿಯವರು ಅರ್ಥ ಬರುವಂತೆ ಕರೆದುಕೊಂಡಿದ್ದಾರೆ. ಕ್ರಿ.ಶ. ೯ ನೆಯ ಶತಮಾನದಲ್ಲಿ ಮೊಟ್ಟ ಮೊದಲು ಕಾಣಿಸಿಕೊಳ್ಳುವ ನಾಯಕ ಎಂಬ ಪದ ಜಾತಿ ಸೂಚಕವಲ್ಲ ಅಥವಾ ಗೌರವ ಸೂಚಕ ಅಥವಾ ಅಧಿಕಾರ ಸೂಚಕ ಪದ ನಂತರ ಕನ್ನಡನಾಡಿನ ಚರಿತ್ರೆಯಲ್ಲಿ ಬೇಡರ ನಿರಂತರ ಪ್ರಸಿದ್ಧಿಯಿಂದಾಗಿ ಅವರ ಪಾಲಿಗೆ ನಾಯಕ ಪದವು ಜಾತಿ ಸೂಚಕ ಶಬ್ದವಾಗಿದೆ. ನಾಯಕ ಎಂಬ ಉಪನಾಮವು ಬೇಡರ ಹೆಸರಿನ ಕೊನೆಯಲ್ಲಿ ಬರುವುದಕ್ಕಿಂತ ಪೂರ್ವದಲ್ಲಿ 'ಬೋವ, ಬೊಯಿಯ, ಬೋಯಿ ಎಂಬ ಉಪನಾಮಗಳು ಬಳಕೆಯಲ್ಲಿದ್ದವು ತೆಲುಗಿನಲ್ಲಿ ಇಂದಿಗೂ ಬೇಡರನ್ನು 'ಬಾಯೋಡ, ಬಾಯೋಳ್ ಎಂದು ಕರೆಯುತ್ತಾರೆ. ಕರ್ನಾಟಕದ ಇತಿಹಾಸ ಉದ್ದಕ್ಕೂ ಬೇಡರ ಧೈರ್ಯ, ಸಾಹಸದ ವರ್ಣನೇ ಕಂಡು ಬರುತ್ತದೆ. ಬುಚ್ಚಣ್ಣನ್ ಅವರು ತಮ್ಮ ಕೃತಿಯಲ್ಲಿ ಬನವಾಸಿಯ ಕದಂಬರು ಬೇಡರ ಜಾತಿಗೆ ಸೇರಿದವರು

ಎಂದು ಅಭಿಪ್ರಾಯ ಪಟ್ಟಿದ್ದಾರೆ. (ಮನೆ, ಸಮಾಜ ಮತ್ತು ಸಂಸ್ಕೃತಿ, ಎಂ.ಪಿ. ವೀಣಾ ಅವರ ಪ್ರಬಂಧ) ವಿಜಯನಗರ ಕಾಲದಲ್ಲಿ ಬೇಡರು ಸೈನಿಕ ವ್ಯವಸ್ಥೆಯಲ್ಲಿ ಬಹುಮುಖ್ಯ ಪಾತ್ರವನ್ನು ನಿರ್ವಹಿಸಿದ್ದರು. ವಿಜಯನಗರದ ದೊರೆಗಳು ತಮ್ಮ ಸೈನ್ಯದಲ್ಲಿ ಹೆಚ್ಚಾಗಿ ಬೇಡರನ್ನೇ ನೇಮಿಸಿಕೊಳ್ಳುತ್ತಿದ್ದರು. ಆಯಕಟ್ಟಿನ ಸ್ಥಳಗಳಲ್ಲಿ ಪಾಳೇಗಾರರನ್ನಾಗಿ ನೇಮಿಸಿ ಪಾಳೆ ಪಟ್ಟುಗಳನ್ನು ನೀಡಿ ಅವರಿಂದ ವರ್ಷಕ್ಕೆ ಇಂತಿಷ್ಟು ಹಣವನ್ನು ಅಥವಾ ಸೈನಿಕ ಸಹಾಯವನ್ನು ಪಡೆದುಕೊಳ್ಳುತ್ತಿದ್ದರು. ವಿಜಯನಗರದ ಅವನತಿಯ ನಂತರ ಜರಿಮಲೈದುರ್ಗ, ಗುಡೇಕೋಟೆ, ಹರಪನಹಳ್ಳಿ, ಚಿತ್ರದುರ್ಗ ಪಾಳೇಗಾರರು ತಮ್ಮ ಸ್ವತಂತ್ರವನ್ನು ಘೋಷಿಸಿಕೊಂಡರು. ಹೈದರ್ ಮತ್ತು ಟಿಪ್ಪು ಸುಲ್ತಾನ್ ಸಹ ಬೇಡರನ್ನು ತಮ್ಮ ಸೈನ್ಯದಲ್ಲಿ ನೇಮಿಸಿಕೊಂಡಿದ್ದರು. ಕಪ್ಪಲದುರ್ಗದ ಉತ್ತರ ಗುಡ್ಡಗಾಡಿನಲ್ಲಿ ಸಾಗುವಳಿಯಾದ ಅನೇಕ ಹೊಲಗಳಿವೆ. ಟಿಪ್ಪು ಸುಲ್ತಾನ್‌ನು ತನ್ನ ಆಳ್ವಿಕೆಯ ಕಾಲದಲ್ಲಿ ಬೇಡರನ್ನು ಈ ಹೊಲಗಳಲ್ಲಿ ನೆಲೆಗೊಳಿಸಿದ್ದ, ಅವರಿಗೆ ೧೨ ಪಗೋಡ ಸಂಬಳವನ್ನು ಕೊಡುತ್ತಿದ್ದ. ಬೇಕಾದಾಗ ಈ ಬೇಡರನ್ನು ತನ್ನ ಸೈನ್ಯದಲ್ಲಿ ಯುದ್ಧಕ್ಕಾಗಿ ಸೇರಿಸಿಕೊಳ್ಳುತ್ತಿದ ಇವರು ಸುಸಜ್ಜಿತವಾದ ಫೌಜಿನಲ್ಲಿ ಸೇರುತ್ತಿದ್ದರು ಇವರ ಸೈನ್ಯದ ಸಹಾಯದಿಂದಲೇ ಬೇಡ ಜಾತಿಯ ಪಾಳೇಗಾರರನ್ನು ಸೋಲಿಸುತ್ತಿದ ದಾಖಲೆಗಳಿವೆ. ಹೈದರ್ ಮತ್ತು ಟಿಪ್ಪು ಬಹಳ ಬುದ್ಧಿವಂತಿಕೆಯಿಂದ ಬೇಡರನ್ನು ಬೇಡರ ವಿರುದ್ದವೇ ಎತ್ತಿ ಕಟ್ಟುತ್ತಿದ್ದರು.

**೩.೩. ಊರ ನಾಯಕರು ಮತ್ತು ಮ್ಯಾಸ ನಾಯಕರು**

ಉತ್ತರಕರ್ನಾಟಕದ ನಾಯಕ ಜನಾಂಗದ ಮೂಲ ವೃತ್ತಿ ಪಶುಪಾಲನೆ, ಕುರಿ ಸಾಕಾಣಿಕೆಯಾಗಿತ್ತು. ಶಿವಮೊಗ್ಗ ತಾಲೂಕುಗಳಲ್ಲಿ ಊರ ನಾಯಕರು ಮತ್ತು ಮ್ಯಾಸ ನಾಯಕರು ಪ್ರಮುಖವಾಗಿ ಕಂಡು ಬರುವ ಉಪ ಪಂಗಡಗಳು. ಒಂದೇ ಕುಲದ ಈ ಎರಡು ಉಪ ಪಂಗಡಗಳ ಸಮಾಜ, ಸಂಸ್ಕೃತಿಯಲ್ಲಿ ವೈವಿಧ್ಯತೆ, ಸಾಮ್ಯತೆ ಮತ್ತು ವ್ಯತ್ಯಾಸಗಳು ಕಂಡು ಬರುತ್ತವೆ. ಇವರಲ್ಲಿರುವ ಬೆಡಗುಗಳು ಹೆಚ್ಚಿನ ಹೋಲಿಕೆಯನ್ನು ಗಮನಿಸಿದಾಗ ಹಿಂದೆ ಇವೆರೆಡು ಉಪ ಪಂಗಡಗಳು ಸೇರಿದ್ದು, ನಂತರದಲ್ಲಿ ಬೇರ್ಪಟ್ಟವು ಎಂಬುದು ತಿಳಿಯುತ್ತದೆ. ಬೇಡರ ಎರಡು ಉಪ ಪಂಗಡವನ್ನು ಕುರಿತು ಥರ್ಸ್ಟನ್ ಅವರು ಈ ರೀತಿ ಅಭಿಪ್ರಾಯ ಪಟ್ಟಿದ್ದಾರೆ. ತೆಲುಗು ಮತ್ತು ಕನ್ನಡ ಮಾತನಾಡುವ ಬೇಡರಲ್ಲಿ ಊರ ಮತ್ತು ಮ್ಯಾಸ ಬೇಡರು ಇದ್ದಾರೆ. ಇವರಲ್ಲಿಯೇ ಮತ್ತೇ ಕುಲದ (ಸ್ವಗೋತ್ರವಲ್ಲದ) ಹೊರಗೆ ಮದುವೆಯಾಗುವ ಅನೇಕ ಬೆಡಗುಗಳಿವೆ ಪ್ರತಿಯೊಂದು ಬೆಡಗುಗಳು ತಮ್ಮದೇ ಆದ ದೇವರುಗಳನ್ನು ಹೊಂದಿವೆ. ಬೋಯಾ ಮತ್ತು ಬೇಡರಲ್ಲಿ ಬೆಡಗುಗಳು ಒಂದೇ ರೀತಿಯ ಹೆಸರುಗಳನ್ನು ಹೊಂದಿವೆ. ಹಾಗೂ ಊರ ಮತ್ತು ಮ್ಯಾಸ ಬೇಡರಲ್ಲಿಯೂ ಬೆಡಗುಗಳ ಹೆಸರಿನಲ್ಲಿ ಹೋಲಿಕೆ ಇದೆ. ಇದರಿಂದ ಇವು ಒಂದು ಕಾಲದಲ್ಲಿ ಒಂದೇ ಪಂಗಡಕ್ಕೆ ಸೇರಿದ್ದು, ನಂತರ ಬೇರ್ಪಟ್ಟವು ಎಂಬುದು ಸ್ಪಷ್ಟವಾಗುತ್ತದೆ. ನಗರ ಸಂಸ್ಕೃತಿಯಲ್ಲಿ ಬೆರತು ಹೋದ ಊರ ಬೇಡರಿಗೂ ಅಡವಿಯಲ್ಲಿ ವಾಸವಾಗಿದ್ದ ಮ್ಯಾಸ ಬೇಡರಿಗೂ ಸಂಸ್ಕೃತಿಯಲ್ಲಿ ವ್ಯತ್ಯಾಸವಿರುವುದು ಸಹಜ. ಒಂದು

ಗುಂಪು ಊರಲ್ಲಿಯೇ ಉಳಿದುಕೊಳ್ಳುತ್ತದೆ ಅವರೇ ಊರ ನಾಯಕರಾಗಿ, ಮತ್ತೊಂದು ಪಂಗಡವಾಗಿ ದನ ಕುರಿಗಳನ್ನು ಮೇಯಿಸುತ್ತಾ ಅಡವಿಯಲ್ಲಿಯೇ ವಾಸವಾಗಿರುವುದರಿಂದ ಅಡವಿ ನಾಯಕ ಅಥವಾ ಮ್ಯಾಸ ನಾಯಕನೆಂದು ಪರಿವರ್ತನೆಯಾಗಿದೆ. ಊರ ಅಥವಾ ಅಡವಿ ಪರಿಸರದಲ್ಲಿ ಮುಂದುವರೆದ ಈ ನಾಯಕ ಜನಾಂಗದ ಜೀವನ ಕಾಲಾಂತರದಲ್ಲಿ ಭಿನ್ನವಾಗಿ ಕಾಣುವುದರಲ್ಲಿ ಸಂದೇಹವಿಲ್ಲ ನಾಯಕ ಜನಾಂಗದ ಇತಿಹಾಸ, ಕಸುಬು, ಭೌಗೋಳಿಕ ಹಂಚಿಕೆ, ಸಾಮಾಜಿಕ ಜೀವನ ಮಟ್ಟ, ಆರ್ಥಿಕ ಮತ್ತು ರಾಜಕೀಯ ಸ್ಥಾನಮಾನಗಳನ್ನು ಗಮನಿಸಬೇಕಾದದು ಮುಖ್ಯವಾಗಿದೆ. ನಾಯಕ ಜನಾಂಗದ ಇತಿಹಾಸವನ್ನು ಗಮನಿಸಿದಾಗ ಈ ಜನಾಂಗ ಗುಡ್ಡಗಾಡು ಮತ್ತು ಅರಣ್ಯ ಪ್ರದೇಶದ ತಪ್ಪಲಿನಲ್ಲಿ ವಾಸಿಸುತ್ತಿದ್ದು ತೀರಾ ಸಾಮಾನ್ಯವಾಗಿದ್ದು ಈಗಲೂ ಕೊಳ್ಳೆಗಾಲ ಹೆಗ್ಗಡದೇವನಕೋಟೆ ಹುಣಸೂರು ಇಂತಹ ಕಾಡಿಗೆ ಸಮೀಪವಿರುವ ಪ್ರದೇಶಗಳಲ್ಲಿ ಈ ಜನಾಂಗ ಕಂಡು ಬರುತ್ತದೆ. ಈ ಜನಾಂಗ ಹಿಂದಿನಿಂದಲೂ ಜೀವನೋಪಾಯಕ್ಕಾಗಿ ಅರಣ್ಯ ಉತ್ಪನ್ನಗಳ ಸಂಗ್ರಹ ಮತ್ತು ಕಾಡು ಪ್ರಾಣಿಗಳ ಬೇಟೆಯನ್ನು ಅವಲಂಬಿಸಿತ್ತು. ಕುಲ ಕಸುಬಾಗಿ ಬೇಟೆಯ ಸಂಪ್ರದಾಯವನ್ನು ಈ ಜನಾಂಗದಲ್ಲಿ ಕಾಣಬಹುದಾಗಿದ್ದು ಇದಕ್ಕೆ ಪ್ರತ್ಯಕ್ಷ ಪುರಾವೆಗಳಾಗಿ ಇಂದಿಗೂ ಈ ಜನಾಂಗದ ಮನೆಗಳಲ್ಲಿ ಬಲೆ, ಈಟಿ, ಭರ್ಚಿಯಂತಹ ಆಯುಧಗಳನ್ನು ಇಟ್ಟಿರುವುದನ್ನು ಇಂದಿಗೂ ಸಹ ಕಾಣಬಹುದಾಗಿದೆ. ವನ್ಯಮೃಗಗಳು ಹಾಗೂ ಅರಣ್ಯ ಉತ್ಪನ್ನಗಳ ಸಂರಕ್ಷಣೆ ಕಾಯ್ದೆ ಜಾರಿಗೆ ಬಂದ ನಂತರ ಈ ಜನಾಂಗ ಕಾಲಕ್ರಮೇಣ ಕಾಡು ಬಿಟ್ಟು ನಾಡಿನ ಕಡೆಗೆ ನಡೆದು ಬೇಸಾಯ ಕೂಲಿಯನ್ನು ಅವಲಂಬಿಸಬೇಕಾಯಿತು. ತದನಂತರ ಹಿಂದುಳಿದ ಬಡವರ್ಗದ ಕಣ್ಮಣಿ ಅಂದಿನ ಮುಖ್ಯಮಂತ್ರಿ ಡಿ. ಶ್ರೀ ದೇವರಾಜ ಅರಸರವರು ಈ ಜನಾಂಗದ ದುಃಸ್ಥಿತಿಯನ್ನು ಅರಿತು ಕಾನೂನು ತಜ್ಞರಾದ ಶ್ರೀ ಎಲ್.ಜಿ. ಹಾವನೂರರ ವರದಿಯ ಆಧಾರದ ಮೇಲೆ ರಾಜ್ಯ ಹಾಗೂ ಕೇಂದ್ರ ಸರ್ಕಾರದ ಫಲವಾಗಿ ಆರ್ಥಿಕವಾಗಿ ಹಿಂದುಳಿದಿದ್ದು ಶೈಕ್ಷಣಿಕ ಗಂಧದ ಅರಿವೇ ಇಲ್ಲದಿದ್ದ ಈ ಜನಾಂಗವನ್ನು ಗುರುತಿಸಿ ಸಾಮಾಜಿಕವಾಗಿ ಮೇಲೆ ಎತ್ತಲು ಪರಿಶಿಷ್ಟ ವರ್ಗದ ಗುಂಪಿಗೆ ಸೇರಿಸುವ ಮೂಲಕ ೧೯ನೆಯ ಏಪ್ರಿಲ್ ೧೯೯೧ ರಂದು ರಾಷ್ಟ್ರಪತಿಯವರಾದ ಶ್ರೀ ವೆಂಕಟರಾಮನ್ ಅವರ ಅಂಕಿತದ ಮೂಲಕ ಅನುಮತಿ ಪಡೆಯಿತು. ಈ ಪ್ರಕಾರ ನಾಯಕ, ನಾಯಕ, ಬೇಡ, ವಾಲ್ಮೀಕಿ, ತಳವಾರ ನಾಯಕ ಜನಾಂಗದ ಉಪ ಜಾತಿಗಳಾಗಿದ್ದು ಇವೆಲ್ಲವು ನಾಯಕ ಜನಾಂಗದ ಪರ್ಯಾಯ ಪದಗಳೆಂದು ಸರ್ಕಾರ ತನ್ನ ಸಮೀಕ್ಷೆಯ ವರದಿಯ ಆಧಾರದ ಮೇಲೆ ಘೋಷಿಸಲಾಯಿತು. ಇದು ಸರ್ಕಾರದ ರಾಜ್ಯ ಪತ್ರಗಳಲ್ಲಿ ಪ್ರಕಟವಾಗಿದೆ. ಸುಮಾರು ೬೦ ಲಕ್ಷ ಜನಸಂಖ್ಯೆಯುಳ್ಳ ವಾಲ್ಮೀಕಿ ನಾಯಕ ಜನಾಂಗವು ಸಂಘಟಿತರಾಗದೆ, ಅಭಿವೃದ್ದಿಯಾಗದೆ ಅತ್ಯಂತ ಅಸಹಾಯಕ ಸ್ಥಿತಿಯಲ್ಲಿದೆ. ತೀವ್ರತರವಾದ ಬಡತನದಿಂದ, ಅನಕ್ಷರತೆಯಿಂದ ಜನಸಂಖ್ಯೆಗೆ ಅನುಗುಣವಾದ ರಾಜಕೀಯ, ಆರ್ಥಿಕ ಹಾಗೂ ಸಾಮಾಜಿಕ ನ್ಯಾಯ ಪಡೆಯಲು ವಿಫಲವಾಗಿದೆ. ಈ ನಿಟ್ಟಿನಲ್ಲಿ ಈ ಜನಾಂಗವು ಮೊದಲು ಸಂಘಟಿತವಾಗಬೇಕಾಗಿದೆ. ಎಲ್ಲಾರು ವಿದ್ಯಾವಂತರಾಗಿ ರಾಜಕೀಯದಲ್ಲಿ

ಸಮಾಜದ ಉನ್ನತ ಸ್ಥಾನದಲ್ಲಿ ನ್ಯಾಯೋಚಿತವಾಗಿ ದಕ್ಕಬೇಕಾದ ಪಾಲನ್ನು ಪಡೆಯಲು ಹೋರಾಟ ಮಾಡಬೇಕಾಗಿದೆ. ಈ ದಿಶೆಯಲ್ಲಿ ಈ ಸಮಾಜದ ಹಿತಾ ಚಿಂತಕರು ಶಾಸಕರು, ಗಣ್ಯರು ಆಗಾಗ ಸಭೆ ಸೇರಿ ಈ ಜನಾಂಗದ ಬೆಳವಣಿಗೆಯ ಆತಂಕಗಳನ್ನು ಸರಿಪಡಿಸಲು ಗುರು ಮಠದ ಅಗತ್ಯವನ್ನು ಕಂಡು ಕೊಂಡರು. ಸೂಕ್ತ ಮಾರ್ಗದರ್ಶನಕ್ಕಾಗಿ ಶ್ರೀ ಕೈಲಾಸ ಆಶ್ರಮದ ಶ್ರೀ ಶ್ರೀ ಶ್ರೀ ತಿರುಚಿ ಸ್ವಾಮಿಗಳ ಸಾನಿಧ್ಯದಲ್ಲಿ ದಿನಾಂಕ ೬–೭–೧೯೯೭ ರಂದು ಮತ್ತೊಮ್ಮೆ ಚರ್ಚಿಸಿ ಈ ಆದೇಶದ ಪ್ರಕಾರ ಈಗಾಗಲೇ ರಾಜನಹಳ್ಳಿಯಲ್ಲಿ ಕರಿದಿಸಿರುವ ನಿವೇಶನದ ಭೂಮಿ ಪೂಜೆ ದಿನಾಂಕ ೨೨–೬–೧೯೯೭ ರಂದು ಆದ್ದೂರಿಯಿಂದ ನೆರವೇರಿಸಿದ್ದು ಆಗಿದೆ ಹಾಗೂ ಗುರುಗಳ ಪಟ್ಟಾಭಿಷೇಕ ಕಾರ್ಯವನ್ನು ದಿನಾಂಕ ೯–೨–೧೯೯ರಂದು ಸೋಮವಾರದಂದು ಮಾಡಲು ನಿಗದಿಯಾಗಿ ಅದರಂತೆ ರಾಜನಹಳ್ಳಿಯ ಮಠಕ್ಕೆ ಶ್ರೀ ಜಗದ್ಗುರುಗಳಾದ ಶ್ರೀ ಪುಣ್ಯಾನಂದಪುರಿ ಸ್ವಾಮಿಗಳನ್ನು ನೇಮಿಸಿ ಅವರ ಪಟ್ಟಾಭೀಷೇಕ ನಡೆಯಿತು. ಈ ಗುರುಗಳು ನಾಯಕ ಜನಾಂಗದ ಗುರುಗಳಾಗಿದ್ದಾರೆ ಈ ಗುರುಗಳ ಮೂಲಕ ತಮ್ಮ ಹಕ್ಕು ಭಾದ್ಯತೆಗೆ ತಕ್ಕಂತೆ ನ್ಯಾಯೋಚಿತವಾದ ಹಕ್ಕುಗಳನ್ನು ಪಡೆಯಲು ಮುಂದಾಗಿದ್ದಾರೆ. ಕ್ರಿ. ಶ. ೧೮ನೆಯ ಶತಮಾನದಿಂದ ಈಚೇಗೆ ಪಾಳೆಯ ಪಟ್ಟುಗಳನ್ನು ಕಳೆದುಕೊಂಡು ಸೈನಿಕ ವೃತ್ತಿಯು ಇಲ್ಲದಂತೆಯಾಗಿ ಅರಣ್ಯ ನಾಶವಾಗಿ ಸರ್ಕಾರದ ಅರಣ್ಯ ನೀತಿಯಿಂದ ಬೇಟೆಯ ವೃತ್ತಿಯನ್ನು ಕೈ ಬಿಟ್ಟು ವ್ಯವಸಾಯದಲ್ಲಿ ಸರ್ಕಾರಿ ನೌಕರಿಯಲ್ಲಿ ತೊಡಗಿಕೊಂಡಿದ್ದಾರೆ. ಇಂದು ವ್ಯವಸಾಯವೇ ಜೀವನ ಆಧಾರವಾಗಿದೆ. ಕ್ರಿ. ಶ. ೧೯೭೬ರಲ್ಲಿ ಪರಿಶಿಷ್ಟ ಬುಡಕಟ್ಟಿಗೆ ಸೇರಿದ ನಾಯಕ ಜನಾಂಗವು ಇಂದು ಸರ್ಕಾರದ ವಿಶೇಷ ಮೀಸಲಾತಿ ಸೌಲಭ್ಯವನ್ನು ಪಡೆದುಕೊಳ್ಳುತ್ತಿದೆ. ರಸ್ತೆ ಅಪಘಾತದಲ್ಲಿ ರೈಲು ಹಳಿಯ ಮೇಲೆ ವಾಹನ ಚಲಿಸುವಾಗ ಶ್ರೀ ಪುಣ್ಯನಂದಪುರಿ ಸ್ವಾಮಿಗಳು ದುರ್ಮರಣವನ್ನು ಹೊಂದಿದರು. ತದನಂತರ ಈಗ ರಾಜನಹಳ್ಳಿಯ ಗುರುಪೀಠಕ್ಕೆ ಪ್ರಸನ್ನನಂದಪುರಿ ಸ್ವಾಮಿಗಳು ನಾಯಕ ಜನಾಂಗದ ಗುರುಗಳಾಗಿದ್ದಾರೆ.

ಬೇಡ ಬುಡಕಟ್ಟು ಕರ್ನಾಟಕದಲ್ಲಿ ಎಲ್ಲಾ ಜಿಲ್ಲೆಗಳಲ್ಲಿ ಕಂಡು ಬರುತ್ತದೆ. ಬುಡಕಟ್ಟು ವ್ಯಾಖ್ಯಾನ ನಂಬಿಕೆಗಳು, ಸಾಂಸ್ಕೃತಿಕ ಆಚರಣೆಗಳು ಅವರ ಜೀವನ ಕ್ರಮ ಆಧುನಿಕತೆಯ ಜೀವನ ಶೈಲಿಯಿಂದ ಬುಡಕಟ್ಟುಗಳಲ್ಲಿ ಆಗುತ್ತಿರುವ ವೈಪರಿತ್ಯಗಳು ಇತ್ತೀಚಿನ ಬದಲಾವಣೆಗಳನ್ನು ನೋಡಿದಾಗ ಬುಡಕಟ್ಟುಗಳ ಸಂಸ್ಕೃತಿ ಆಚಾರ–ವಿಚಾರ, ಉಡುಗೆ ತೊಡಗೆಗಳು, ಸಂಪ್ರದಾಯ ಮತ್ತು ನಂಬಿಕೆಗಳು ಅವರ ಕಷ್ಟ ಸುಖ, ದುಃಖ ದುಮ್ಮಾನಗಳನ್ನು ಇಂದಿನ ಸಮಾಜಕ್ಕೆ ಮನವರಿಕೆ ಮಾಡಿಕೊಡುವ ದಿಟ್ಟ ಪ್ರಯತ್ನ ಇದಾಗಿದೆ. ಬೇಡ ಬುಡಕಟ್ಟುಗಳಲ್ಲಿ ಆಗುತ್ತಿರುವ ಅನನ್ಯವಾದ ಸಂಸ್ಕೃತಿ ಜೀವನ ಕ್ರಮವನ್ನು ಇಂದಿನ ನಾಗರೀಕ ಸಮಾಜಕ್ಕೆ ಪರಿಚಯಿಸಿ ಅವರಲ್ಲಿಯೂ ಆತ್ಮಾಭಿಮಾನದ ಬದುಕು ಸಾಗಿಸುವ ಬೇಡ ಬುಡಕಟ್ಟಿಗೆ ಧೈರ್ಯ ತುಂಬಬೇಕಾದ ಕೆಲಸವಾಗಬೇಕಾಗಿದೆ. ಅದರಲ್ಲಿಯೂ ಶಿವಮೊಗ್ಗ ಜಿಲ್ಲೆಯಲ್ಲಿ ಬೇರೆ ಬೇರೆ ತಾಲೂಕಿನಲ್ಲಿ ಚದುರಿ ಹೋಗಿರುವ ಬೇಡ ಬುಡಕಟ್ಟನ್ನು ಸಮಾಜದ ಮುಖ್ಯವಾಹಿನಿಗೆ ಕರೆತರುವ ಕಾರ್ಯವನ್ನು ಮಾಡಬೇಕಾಗಿದೆ. ಶಿವಮೊಗ್ಗ ಜಿಲ್ಲೆಯಲ್ಲಿರುವ ಬೇಡ

ಬುಡಕಟ್ಟು ತಾವು ವಾಸಿಸುವ ಪರಿಸರದ ಬಗ್ಗೆ, ಆಡುವ ಭಾಷೆಯ ಬಗ್ಗೆ ಸಂಪ್ರದಾಯ, ನಂಬಿಕೆಗಳ ಬಗ್ಗೆ ಅಪಾರವಾದ ಪ್ರೀತಿ ಅದರಲ್ಲೂ ಅವರು ವಾಸಿಸುವ ಭೂಮಿ, ಮಾತೃ ಭೂಮಿ, ಪರಿಸರ, ಅವರಲ್ಲಿಯ ಪೂಜ್ಯತೆಗೆ ಸಮಾನ ಅವರಲ್ಲಿಯೂ ತಮ್ಮ ಭಾಷೆಯ ಬಗ್ಗೆ ಎಷ್ಟೇ ಅಭಿಮಾನವನ್ನು ಹೊಂದಿದ್ದರೂ ಬೇರೆಯವರ ಭಾಷೆ ಆಚಾರ-ವಿಚಾರ ಸಂಸ್ಕೃತಿಯನ್ನು ಅರ್ಥ ಮಾಡಿಕೊಂಡು ತಮ್ಮ ಬದುಕನ್ನು ಸಾಗಿಸುತ್ತಿದ್ದಾರೆ. ಸುಮಧುರವಾದ ಬಾಂಧವ್ಯ ಗುಂಪು ಜೀವನದಲ್ಲಿ ಅವರಲ್ಲಿಯೂ ಕಾಣಬಹುದಾಗಿದೆ. ಈ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲಾಯಾದ್ಯಂತ ಬೇರೆ ಬೇರೆ ತಾಲೂಕುಗಳಲ್ಲಿರುವ ಅವರ ನಂಬಿಕೆ, ಜನಪದ ಸಂಸ್ಕೃತಿ, ಔಷಧೋಪಚಾರ, ಕರಕುಶಲ ಕಲೆಗಳ ಬಗ್ಗೆ ಆಹಾರ ಪದ್ಧತಿ, ಶಿಕ್ಷಣ ಕ್ರಮ ಬೇಡ ಬುಡಕಟ್ಟು ಮಕ್ಕಳ ಆರೋಗ್ಯ ಅವರಲ್ಲಿ ಆಗುತ್ತಿರುವ ಇತ್ತೀಚಿನ ಬದಲಾವಣೆಗಳು, ಸ್ಥಿತಿ-ಗತಿಗಳು ಬೇಡಬುಡಕಟ್ಟುಗಳ ವೈವಾಹಿಕ ಪದ್ದತಿ, ಸಾಂಸ್ಕೃತಿಕ ಆಚರಣೆಗಳು ಮೂಲಭೂತ ಹಕ್ಕುಗಳು, ಅಭಿವೃದ್ಧಿ ಬೇಡ ಬುಡಕಟ್ಟುಗಳಲ್ಲಿ ಆಗುತ್ತಿರುವ ಸ್ಥಿತ್ಯಂತರಗಳು, ಜಾಗತೀಕರಣ, ಆಧುನೀಕತೆ, ನಗರೀಕರಣಗಳ ಆರ್ಭಟದಲ್ಲಿ ಬೇಡ ಬುಡಕಟ್ಟು ತಾನು ಉಳಿಸಿಕೊಂಡು ಬಂದಿರುವ ದೇಶಿ ಪದ್ಧತಿ, ಗುಂಪು ಜೀವನ, ಸಂಘಟನೆ ದೇಶಿ ಸಂಸ್ಕೃತಿ ಇಂದಿಗೂ ತನ್ನ ಜೀವಂತಿಕೆಯನ್ನು ಮುಂದುವರಿಸಿಕೊಂಡು ಬಂದಿದೆ. ಬೇಡ ಬುಡಕಟ್ಟುಗಳ ಪುನರ್ವಸತಿ ಸಾಂಸ್ಕೃತಿಕ ಅನನ್ಯತೆ ವಿವಿಧ ಸಂಪ್ರದಾಯಗಳ ಸಾಮಾರಸ್ಯದ ಬಾಂದವ್ಯ ಮತ್ತು ಅವರ ಒಡನಾಟದ ಅಂಶಗಳನ್ನು ಈ ಮೂಲಕ ಒಂದು ಚೌಕಟ್ಟಿನ ಒಳಗೆ ಹಿಡಿದಿಡುವ ಪ್ರಯತ್ನವನ್ನು ಮಾಡಲಾಗಿದೆ. ಆಧುನಿಕತೆಯನ್ನು ಅಷ್ಟಾಗಿ ಒಪ್ಪಿಕೊಳ್ಳದೆ ಬೇಡ ಬುಡಕಟ್ಟು ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಬಂದಿರುವ ಹಲವು ಭಾರಿ ಬೇಡ ಬುಡಕಟ್ಟುಗಳನ್ನು ಒಕ್ಕಲು ಎಬ್ಬಿಸುವ ಪ್ರಯತ್ನಗಳು ನಡೆದರು ಕೂಡ ಆ ಪ್ರಯತ್ನಕ್ಕೆ ಓಗೊಡದೆ ದಿಟ್ಟತನದಿಂದ ತಮ್ಮ ಸಂಸ್ಕೃತಿಗೆ ಧಕ್ಕೆ ಬಾರದಂತೆ ಕಾಪಾಡಿಕೊಂಡು ಬಂದಿರುವ ಆಚಲವಾದ ಧೃಡ ನಿರ್ಧಾರ ಶಿವಮೊಗ್ಗ ಜಿಲ್ಲೆಯ ಬೇಡ ನಾಯಕ ಬುಡಕಟ್ಟುಗಳಲ್ಲಿ ಕಾಣಬಹುದಾಗಿದೆ. ಬೇಡ ಬುಡಕಟ್ಟು ಪೂರ್ವಕಾಲದಿಂದಲೂ ಗುಂಪು ಜೀವನವನ್ನು ನಡೆಸುತ್ತಾ ಬಂದಿದೆ. ಕೆಲವು ಬುಡಕಟ್ಟುಗಳು ಇತರೇ ಸಮುದಾಯದ ಸಾಂಸ್ಕೃತಿಕ ವಾಹಿನಿಗಳಲ್ಲಿ ಬೆರೆತರು ತಮ್ಮದೇ ಆದ ಸಂಸ್ಕೃತಿಯ ನೆನೆಪುಗಳನ್ನು ಯಥಾ ಪ್ರಕಾರ ಆಚರಣೆಗಳಲ್ಲಿ ಉಳಿಸಿಕೊಂಡು ಬಂದಿರುವುದು ಹೆಮ್ಮೆಯ ವಿಷಯವಾಗಿದೆ. ಕೆಲವು ಬುಡಕಟ್ಟುಗಳು ತಮ್ಮ ಹೊಟ್ಟೆಯನ್ನು ಹೊರೆಯುದಕ್ಕಾಗಿ ನಾಗರಿಕ ಜಗತ್ತಿನೊಂದಿಗೆ ತಮ್ಮನ್ನು ಗುರುತಿಸಿಕೊಂಡರು ಅವರ ಸಂಸ್ಕೃತಿಯ ಮೂಲ ಬೇರುಗಳು ಆಳವಾಗಿ ಬೇರು ಬಿಟ್ಟಿರುವುದನ್ನು ಈ ಮೂಲಕ ಕಂಡುಕೊಳ್ಳಲಾಗಿದೆ. ಈ ಬುಡಕಟ್ಟಿನ ಸಾಂಸ್ಕೃತಿಕ ಆಚರಣೆಗಳನ್ನು ಹಬ್ಬ ಹರಿದಿನ, ಜಾತ್ರೆ, ಉತ್ಸವಗಳ ಅಗತ್ಯತೆ ಮತ್ತು ಅನಿವಾರ್ಯತೆ ಪ್ರಸ್ತುತ ಸಂದರ್ಭದಲ್ಲಿದೆ. ಇಂದಿನ ಆಧುನಿಕ ದಿನಮಾನದಲ್ಲಿ ಶಿವಮೊಗ್ಗ ಜಿಲ್ಲೆಯಲ್ಲಿರುವ ಬೇಡ ಬುಡಕಟ್ಟು ತಮ್ಮ ಬದುಕನ್ನು ಕಟ್ಟಿಕೊಳ್ಳುವುದರ ಮೂಲಕ ತಮ್ಮ ಭವ್ಯ ಪರಂಪರೆಯ ಶ್ರೀಮಂತ ಸಂಸ್ಕೃತಿಯನ್ನು ಶಿವಮೊಗ್ಗ ಜಿಲ್ಲೆಗೆ ತಮ್ಮದೇ ಆದ ಕೊಡುಗೆಯನ್ನು ನೀಡಿದೆ. ಮುಂದಿಯೂ ಕೂಡ ಇಂತಹ

ಉದಾತತ್ತವಾದ, ಮೌಲ್ಯವಿತವಾದ ಸಾಂಸ್ಕೃತಿಕ ಅನನ್ಯತೆಯನ್ನು ಕೂಡ ಉಳಿಸಿಕೊಂಡು ಹೋಗುವ ಬಹು ದೊಡ್ಡ ಜವಾಬ್ದಾರಿ ಶಿವಮೊಗ್ಗ ಜಿಲ್ಲೆಯ ಬೇಡ ಬುಡಕಟ್ಟಿನ ಮೇಲಿದೆ. ಇಂದು ನಾವು ಹಲವಾರು ಬುಡಕಟ್ಟುಗಳಲ್ಲಿ ನಂಬಿಕೆ, ವಿಧಿ ನಿಷೇದ್ಧ, ನ್ಯಾಯ ಪದ್ದತಿಗಳು ಅಸ್ತಿತ್ವದಲ್ಲಿದ್ದವು. ಆದರೆ ಈಗ ಬಹುತೇಕ ವಿವಿಧ ಪದ್ದತಿಗಳು, ನಂಬಿಕೆ ಸಂಪ್ರದಾಯಗಳು ಆಧುನಿಕತೆಯ ಜಾಗತೀಕರಣದ ಪ್ರಭಾವಕ್ಕೆ ಸಿಕ್ಕಿ ಕಣ್ಮರೆಯಾಗುವ ಸಾಧ್ಯತೆಯಿದೆ. ಕರ್ನಾಟಕದ ಪ್ರತಿಯೊಂದು ಗ್ರಾಮಗಳಲ್ಲಿ ಸಾಮರಸ್ಯ ಮಾನವೀಯತೆ ಅಂತಃಕರಣ ಮತ್ತು ಸಮಾನತೆಯ ಮೌಲ್ಯಗಳು ಇಲ್ಲಾವಾಗುತ್ತಾ ದಿನ ನಿತ್ಯ ಬದುಕಿನ ಜಂಜಾಟದಲ್ಲಿ ಆಂತಕ ತಲ್ಲನಗಳನ್ನು ತಂದೊಡ್ಡಬಹುದಾದ ಸಾಧ್ಯತೆಯಿದೆ. ಆಧುನಿಕತೆಯ ಭರಾಟೆಯಲ್ಲಿ ಕೆಲವು ಬುಡಕಟ್ಟುಗಳಲ್ಲಿ ಗುಟುಕ, ಮಟ್ಕಾ, ಗಾಂಜಾ, ಮದ್ಯಪಾನ, ಧೂಮಪಾನ ಮನೆ ಮಾಡತೊಡಗಿವೆ. ಇಂತಹ ಸಂದರ್ಭಗಳಲ್ಲಿ ಬುಡಕಟ್ಟುಗಳಲ್ಲಿ ಕಂಡು ಬರುವ ಕ್ರೀಡೆ, ಸಂಸ್ಕೃತಿ, ನಂಬಿಕೆ, ನಿಯಮ, ವಿಧಿ ನಿಷೇಧಗಳಿಗೆ ತಮ್ಮನ್ನು ತೆರೆದುಕೊಂಡ ಪುನರ್‌ಜೀವನಗೊಳಿಸುವ ಪ್ರಯತ್ನವನ್ನು ಮಾಡಬೇಕಾಗಿದೆ. ಬಹುತೇಕ ಬುಡಕಟ್ಟುಗಳಲ್ಲಿ ಹಿಂದೆ ನಾವು ಗುಂಪು ಜೀವನವನ್ನು ಕಾಣುತ್ತಿದ್ದೇವೆ. ಆ ಗುಂಪು ಜೀವನ ಇಲ್ಲದಿದ್ದರೆ ಸಮಸ್ಯೆಗಳ ಸರಮಾಲೆ ಎದುರಾಗಿ ಅವರ ಬದುಕು ದುಸ್ತರದ ಹಂಚಿಕೆ ತಲುಪುವ ಸಾಧ್ಯತೆ ಎದುರಾಗಲಿದೆ. ಶಿವಮೊಗ್ಗ ಜಿಲ್ಲೆಯ ಬೇಡ ಬುಡಕಟ್ಟುಗಳಲ್ಲಿ ಕಂಡುಬರುವ ಜನಪದ ಆಟಗಳು, ಕರ ಕುಶಲ ಕಲೆಗಳು, ಕೇವಲ ಮನರಂಜನೆಗೆ ಸೀಮಿತವಾಗಿವೆ. ಅವರು ಕಟ್ಟಕೊಂಡಿರುವ ಸಮಾಜದೊಳಗಿನ ಏರು ಪೇರುಗಳನ್ನು ಸರಿಪಡಿಸುವ ಪ್ರಮುಖ ಪಾತ್ರವನ್ನು ನಿರ್ವಹಿಸಬೇಕಾಗಿದೆ. ಬೇಡ ಬುಡಕಟ್ಟು ಕಂಡು ಬರುವ ದೇಶೀಯ ಆಟಗಳು ಮನುಷ್ಯನ ಮಾನಸಿಕ ಬೆಳವಣಿಗೆ ಆಂತರಿಕ ವಿಕಾಸಕ್ಕೆ ಕಾರಣವಾಗುತ್ತವೆ ಎಂಬುದರಲ್ಲಿ ಎರಡು ಮಾತಿಲ್ಲ. ಈ ಬುಡಕಟ್ಟುಗಳಲ್ಲಿ ಕಂಡುಬರುವ ಜೀವನ ನಿರ್ವಹಣೆ ದುಃಸ್ಥಿತಿಯಲ್ಲಿದೆ. ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ತೀರ ಹಿದುಳಿದಿರುವ ಬುಡಕಟ್ಟು ಇದಾಗಿದೆ. ಈ ಬುಡಕಟ್ಟಿನ ವಾಸ್ತವಿಕ ಸಮಸ್ಯೆಯನ್ನು ಅರಿತು ಚರ್ಚೆಗೆ ಒಳಪಡಿಸಿ ಸರ್ಕಾರದಿಂದ ಪರಿಹಾರ ಸಿಗಬಹುದಾದ ವಿವಿಧ ಯೋಜನೆಗಳ ಬಗೆಗೆ ಅವರಿಗೆ ತಿಳುವಳಿಕೆ ಅರಿವು ಮೂಡಿಸುವ ಅದರ ಮೂಲಕ ಪರಿಹಾರ ಕ್ರಮಗಳನ್ನು ಕೈಗೊಳ್ಳಬೇಕಾದ ಅನಿವಾರ್ಯತೆ ಇಂದು ಅತ್ಯಗತ್ಯವಾಗಿದೆ. ಈ ಬೇಡ ಬುಡಕಟ್ಟಿನಲ್ಲಿ ವಿಶೇಷವಾಗಿ ಬಡತನ, ಹಸಿವು, ಅನಾರೋಗ್ಯ, ನಿರ್ವಸತೀಕರಣ, ಶೈಕ್ಷಣಿಕ ಹಿಂದುಳಿಯುವಿಕೆ, ನಿರುದ್ಯೋಗ, ರಾಜಕೀಯ ಜ್ಞಾನದ ಕೊರತೆ, ಹೋರಾಟ ಮನೋಭಾವದ ಕೊರತೆ, ಅಜ್ಞಾನ ಮತ್ತು ಅಂಧಕಾರ ಬಾಧಿಸುತ್ತಿದೆ. ಈ ಸಮುದಾಯ ಇವೆಲ್ಲವುಗಳಿಂದ ಹೊರಬರುವ ಪ್ರಯತ್ನ ಮಾಡಬೇಕಾಗಿದೆ. ಅವರಲ್ಲಿ ಸಂಘಟನಾತ್ಮಕ ಹೋರಾಟ ಅಗತ್ಯವಾಗಿ ಬೇಕಾಗಿದೆ. ಸಂವಿಧಾನಬದ್ಧವಾಗಿರುವ ಹಕ್ಕೋತ್ತಾಯ ಪರಿಣಾಮಕಾರಿಯಾಗಿ ಹೋರಾಟ ಮಾಡುವ ಮೂಲಕ ಸರ್ಕಾರದ ವಿವಿಧ ಸೌಲಭ್ಯಗಳನ್ನು ಪಡೆಯಲು ಅವರಿಗೆ ತಿಳುವಳಿಕೆ ಜರೂರಾಗಿ ಬೇಕಾಗಿದೆ.

ಆಧುನಿಕ ಸಂಸ್ಕೃತಿಯ ಇಂದಿನ ದಿನಮಾನಗಳಲ್ಲಿ ಬೇಡ ಬುಡಕಟ್ಟು ತಮ್ಮ ಬದುಕನ್ನು ಸಂರಕ್ಷಿಸಬೇಕಾದ ಜವಾಬ್ದಾರಿ ಸ್ಥಳೀಯ ಸರ್ಕಾರ, ಸ್ಥಳೀಯ ಸಂಘಗಳ ಮೇಲಿದೆ. ಪ್ರಸ್ತುತ ಸಂದರ್ಭದಲ್ಲಿ ಇಂದಿನ ಸಮಾಜದಲ್ಲಿ ಸರ್ಕಾರದ ಮಟ್ಟದಲ್ಲಿ ಈ ಬುಡಕಟ್ಟು ಸಮುದಾಯದ ಒಂಟಿ ಧ್ವನಿಯನ್ನು ಆಲಿಸದೆಯಿರುವವರೆ ಇಲ್ಲವೆಂಬ ಪರಿಸ್ಥಿತಿ ಬಂದೊದಗಿದೆ. ಕಾರಣವಿಷ್ಟು ಅವರಲ್ಲಿ ರಾಜಕೀಯ ಶಕ್ತಿ ಹೊರಹೊಮ್ಮಲು ಪ್ರಭಾವಶಾಲಿಯಾದ ಪರಿಣಾಮಕಾರಿಯಾದ ಸಂಘಟನಾ ಶಕ್ತಿ ಇಲ್ಲವಾಗಿದೆ. ಈ ಕಾರಣಕ್ಕಾಗಿಯೇ ಯಾವ ರಾಜಕೀಯ ವ್ಯಕ್ತಿಗಳು ಕೂಡ ಈ ಬುಡಕಟ್ಟು ಸಮುದಾಯಗಳ ಬಗ್ಗೆ ಗಮನ ಹರಿಸದೆಯಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಕರ್ನಾಟಕದಲ್ಲಿನ ಬಹುತೇಕ ಬುಡಕಟ್ಟು ಸಮುದಾಯಗಳ ಕೂಗು ಅರಣ್ಯರೋಧನವಾಗಿದೆ. ಸಂಘಟನಾ ಶಕ್ತಿಯ ಕೊರತೆ, ರಾಜಕೀಯ ಪ್ರಜ್ಞೆಯ ಕೊರತೆ, ನಾಯಕತ್ವದ ಕೊರತೆಯಿಂದಾಗಿ ಸರ್ಕಾರದಿಂದ ಸಿಗಬೇಕಾದ ಎಷ್ಟೋ ಯೋಜನೆಗಳು ಅವರ ಕೈತಪ್ಪುವ ಸಾಧ್ಯತೆಗಳು ಇರುತ್ತವೆ. ಕರ್ನಾಟಕದಲ್ಲಿನ ಬುಡಕಟ್ಟು ಸಮುದಾಯಗಳು ಹಳ್ಳಿ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ, ಅರಣ್ಯದಲ್ಲಿ ವಾಸಿಸುವ ಮೂಲಕ ಅಶಿಕ್ಷಿತರಾಗಿ ಬಡತನ, ಹಸಿವಿನ ಬದುಕನ್ನು ಸಾಗಿಸುತ್ತಿರುವ ಈ ಸಮುದಾಯಗಳಿಗೆ ಸರ್ಕಾರ ಕೈಗೊಂಡಿರುವ ಬಹುತೇಕ ಯೋಜನೆಗಳು ಪ್ರಾಮಾಣಿಕವಾಗಿ ದೊರಕಿಸಿಕೊಳ್ಳಲು ಯೋಜನೆಯ ಸದುಪಯೋಗ ಪಡೆಯಲು ಈ ಸಮುದಾಯವನ್ನು ಜಾಗೃತಗೊಳಿಸಬೇಕಾದ ಅಗತ್ಯತೆ ಇಂದು ಅನಿವಾರ್ಯವಾಗಿದೆ.

### ೩.೪. ಶಿವಮೊಗ್ಗ ಜಿಲ್ಲೆಯ ಬೇಡ ಬುಡಕಟ್ಟು

ಶಿವಮೊಗ್ಗ ಜಿಲ್ಲೆಯಲ್ಲಿ ಬೇಡರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ, ಸಾಗರ, ಸೊರಬ, ಭದ್ರಾವತಿ, ಶಿಕಾರಿಪುರ, ಹೊಸನಗರ ಮತ್ತು ಶಿವಮೊಗ್ಗ ತಾಲೂಕುಗಳಲ್ಲಿ ತಮ್ಮದೇ ಆದ ಬುಡಕಟ್ಟು ಸಂಸ್ಕೃತಿಯನ್ನು ಹೊಂದಿದ್ದಾರೆ. ಆಧುನಿಕತೆಯ ಭರಾಟೆ ಎಷ್ಟೇ ಪ್ರಬಲವಾಗಿದ್ದರೂ ತಮ್ಮ ಮೂಲ ಸಂಸ್ಕೃತಿ, ಮತ್ತು ಜನಪದ ಆಚರಣೆಗಳ ಮೂಲಕ ಶಿವಮೊಗ್ಗ ಜಿಲ್ಲೆಗೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಸರಾಸರಿ ಸುಮಾರು ಭದ್ರಾವತಿಯಲ್ಲಿ ಬೇಡರು ೩೦,೦೦೦ಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಇದ್ದಾರೆ. ಇನ್ನೂಳಿದ ತಾಲೂಕುಗಳಾದ, ಶಿಕಾರಿಪುರದಲ್ಲಿ ಸುಮಾರು ೩೨,೦೦೦ ಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಇದ್ದಾರೆ. ಈ ತಾಲೂಕಿನಲ್ಲಿ ಅತಿ ಹೆಚ್ಚು ಬೇಡರು ಇದ್ದಾರೆ. ಲಿಂಗಾಯತ ಸಮುದಾಯ, ಪ್ರಥಮ ಸ್ಥಾನದಲ್ಲಿದ್ದರೆ, ಎರಡನೇಯ ಸ್ಥಾನದಲ್ಲಿ ಅತಿಹೆಚ್ಚಿನ ಜನಾಂಗವು ಪರಿಶಿಷ್ಟ ಜಾತಿಯವರು ಇದ್ದಾರೆ. ಇನ್ನೂ ಮೂರನೇ ಸ್ಥಾನದಲ್ಲಿ ಹೆಚ್ಚಿನ ಜನಸಂಖ್ಯೆ ಹೊಂದಿರುವು ಬೇಡರು. ಸಾಗರ ತಾಲೂಕಿನಲ್ಲಿ ಸುಮಾರು ೮,೦೦೦ಕ್ಕಿಂತಲೂ ಹೆಚ್ಚಿನ ಜನಸಂಖ್ಯೆಯನ್ನು ಹೊಂದಿರುವ ಬೇಡರು, ತೀರ್ಥಹಳ್ಳಿಯಲ್ಲಿ ಸುಮಾರು ೭,೦೦೦ ಬೇಡರು ಇರುವುದನ್ನು ಗಮನಿಸಬಹುದಾಗಿದೆ. ಇನ್ನೂ ಶಿವಮೊಗ್ಗ ತಾಲೂಕಿನಲ್ಲಿ ಸುಮಾರು ೪೦,೦೦೦

ಕ್ಕಿಂತಲೂ ಹೆಚ್ಚಿನ ಬೇಡರು ಇರುವುದನ್ನು ಕಾಣಬಹುದಾಗಿದೆ. ಇನ್ನೂ ಹೊಸನಗರ ತಾಲೂಕಿನಲ್ಲಿ ಸುಮಾರು ೬೦೦೦ ಬೇಡರು ಇದ್ದಾರೆ. ಭದ್ರಾವತಿ ತಾಲೂಕಿನಲ್ಲಿ ಅಂದಾಜು ಸುಮಾರು ೩೦,೦೦೦ ಬೇಡರು ಇದ್ದಾರೆ. ಅಲ್ಲದೇ, ಸಾಗರ ತಾಲೂಕಿನಲ್ಲಿ ೧೧,೦೦೦ ಬೇಡರು, ತೀರ್ಥಹಳ್ಳಿಯಲ್ಲಿ ಅಂದಾಜು ಸುಮಾರು ೬,೦೦೦ ಬೇಡರು ಇದ್ದಾರೆ. ಸೊರಬ ತಾಲೂಕಿನಲ್ಲಿ ಸುಮಾರು ೧೪,೦೦೦ ಬೇಡರು ಇರುವುದನ್ನು ಗಮನಿಸಲಾಗಿದೆ. ಶಿವಮೊಗ್ಗ ಜಿಲ್ಲೆ ಮಹಾನಗರ ಪಾಲಿಕೆಯನ್ನು ಹೊಂದಿದೆ. ಶಿವಮೊಗ್ಗ ತಾಲೂಕಿನಲ್ಲಿರುವ ಬೇಡರು, ಶಿವಮೊಗ್ಗ ನಗರದ, ವಿದ್ಯಾನಗರ ೧೩ನೇ ವಾರ್ಡ್, ಬೇಡರ ಕೇರಿ ಅಶೋಕ ರಸ್ತೆ ಕ್ರಾಸ್, ಶೇಷಾದ್ರಿಪುರಂ, ೨ನೇ ಕ್ರಾಸ್, ರಾಗಿಗುಡ್ಡ, ವಿನೋಬನಗರ ೩೪ನೇ ವಾರ್ಡ್, ಗೋಪಾಳ ಬಡಾವಣೆ, ಗೋಪಾಳ ಕೆ.ಎಚ್.ಬಿ. ಕಾಲೋನಿ ಮೂರ್‌ನಾಮಿ ಶೆಡ್ಡು, ಕಾಶೀಪುರ, ನವಲೆ, ಮತ್ತೋಡು ಗ್ರಾಮ, ಬಸವನ ಗಂಗೋರು ಶಿವಮೊಗ್ಗದಿಂದ ೪ ಕಿ.ಮೀ. ದೂರವಿರುವ ಗ್ರಾಮ, ಮಲವಗೊಪ್ಪ ಭದ್ರಾಪುರ, ಹೊಳೆ ಅನಸವಾಡಿ, ಉಣಸೋಡು, ಹನುಮಂತನಗರ ಮಲ್ಲಿಗೇನಹಳ್ಳಿ, ಚಿಕ್ಕಲ್ಲು ವಲಯ, ಬೊಮ್ಮನಕಟ್ಟೆ ಗ್ರಾಮ, ಹಾಗೆಯೇ ಶಿವಮೊಗ್ಗ ನಗರದ, ವೆಂಕಟೇಶ್ವರ ನಗರ, ತಿಲಕನಗರ, ಗಾಂಧಿನಗರ, ಬಸವೇಶ್ವರ ಬಡಾವಣೆ, ಜಯನಗರ, ಹೊಸಮನೆ, ಶರಾವತಿ ನಗರ, ರಾಜೇಂದ್ರ ನಗರ, ವೆಂಕಟೇಶ್ವರ ನಗರ, ಅಮಿದ್‌ನಗರ ಕಾಲೋನಿ, ಬಸವನಗುಡಿ, ಲಾಲ್‌ಬಹುದ್ದೂರ್ ಶಾಸ್ತ್ರಿ ನಗರ. ಅಶ್ವಥ್‌ನಗರ, ಅಚ್ಚುತ್‌ರಾವ್ ಕಾಲೋನಿ, ಅಶೋಕ ನಗರದಲ್ಲಿ ಬೇಡರ ಮನೆಗಳಿವೆ. ಗುಂಪು ಜೀವನವೂ ಇವರಲ್ಲಿ ಕಂಡುಬರುತ್ತದೆ. ಶಿವಮೊಗ್ಗ ತಾಲೂಕಿನಲ್ಲಿ ನೆಲೆಸಿರುವ ಬೇಡರ ಮನೆದೇವರುಗಳೆಂದರೆ, ಶ್ರೀ ಕೋಟೆ ಆಂಜನೇಯಸ್ವಾಮಿ, ಬಳ್ಳಾರಿ ಜಿಲ್ಲೆ ಹರಪನಹಳ್ಳಿಯ ಶ್ರೀ ಕೂಲಹಳ್ಳಿಗೋಣಿಬಸವೇಶ್ವರ, ಉಚ್ಚಂಗಿ ಎಲ್ಲಮ್ಮ ಹರಪನಹಳ್ಳಿ ತಾಲೂಕಿನ ಹುಚ್ಚಂಗೆಮ್ಮ ದೇವತೆ, ಕರಡಿ ದುರುಗಯ್ಯ (ಆಂಜನೇಯನಿಗಿರುವ ಹೆಸರು) ಸ್ವಾಮಿ ದೇವರು, ಲಕ್ಷ್ಮಿ ರಂಗನಾಥ ಸ್ವಾಮಿ, ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿ, ಹೊನ್ನಳ್ಳಿ ಹಳದಮ್ಮ-ಇನ್ನಿತರ ದೈವಗಳು ಬೇಡರ ಮನೆದೇವರುಗಳು. ಶಿವಮೊಗ್ಗ ಜಿಲ್ಲೆಯಲ್ಲಿರುವ ಅತಿ ಹೆಚ್ಚಿನ ಬೇಡರು ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನಿಂದ ಬಂದವರು. ಸುಮಾರು ೨೦೦ ವರ್ಷಗಳ ಕಾಲ ಅಂದರೆ ಕ್ರಿ.ಶ. ೧೪೮೮ ರಿಂದ ೧೭೭೧ರವರೆಗೆ ಆಡಳಿತವನ್ನು ನಡೆಸಿದ "ಹರಪನಹಳ್ಳಿಯ ಪಾಳೆಯಗಾರರು" ಪಾಳೆಯಗಾರರಾಗಿ ಉತ್ತಮ ಆಡಳಿತವನ್ನು ನಡೆಸಿದ್ದಾರೆ. ೧೫ ಜನ ಹೆಸರಾಂತ ಪಾಳೆಗಾರರು ಹರಪನಹಳ್ಳಿಯ ಆಳ್ವಿಕೆಯನ್ನು ನಡೆಸಿ ಗುಡಿ ಗೋಪುರಗಳನ್ನು, ಕೆರೆ ಬಾವಿಗಳನ್ನು, ಕೋಟೆ ಕೊತ್ತಲಗಳನ್ನು ಕಟ್ಟಿಸಿ ಜನ ಕಲ್ಯಾಣ ಕಾರ್ಯಗಳನ್ನು ಮಾಡಿದ್ದಾರೆ. ಹರಪನಹಳ್ಳಿಯ ಸೋಮಶೇಖರ ನಾಯಕ ಪ್ರಸಿದ್ಧ ಪಾಳೆಯಗಾರನಾಗಿ ಆಳ್ವಿಕೆ ಮಾಡಿದ್ದಾನೆ. ಹಲವಾರು ಯುದ್ಧಗಳಲ್ಲಿ ಜಯಶೀಲನಾಗಿದ್ದಾನೆ. ಯಾವಾಗ ಹರಪನಹಳ್ಳಿಯ ಪಾಳೆಯಗಾರ ಅವನತಿ ಅವಸನವಾಯಿತೋ ಹರಪನಹಳ್ಳಿಯಿಂದ ಬಹಳಷ್ಟು ಬೇಡರು ಶಿವಮೊಗ್ಗ ಮತ್ತು ಶಿವಮೊಗ್ಗ ಜಿಲ್ಲೆಯಾದ್ಯಂತ ಬಂದು ನೆಲೆಸಿದ್ದಾರೆ. ಬಂಡಿಗಳ ಮೂಲಕ, ಜಾನುವಾರಗಳ ಮೂಲಕ ರಸ್ತೆಯ ಮೂಲಕ ನಡೆದುಕೊಂಡು

ಬಂದು ತಮ್ಮ ತಮ್ಮ ಮನೆಯ ಸಲಕರಣೆ, ಬಟ್ಟೆ–ಮೂಟೆ, ಆಹಾರ ಧಾನ್ಯಗಳನ್ನು ತೆಗೆದುಕೊಂಡು ಶಿವಮೊಗ್ಗವನ್ನು ಬಂದು ತಲುಪಿದ್ದಾರೆ. ಅಲ್ಲಿಂದ ಬರುವಾಗ, ಖಡ್ಗಗಳು, ಭರ್ಚಿ, ಗುರಾಣಿ, ಕತ್ತಿಗಳು–ಇನ್ನಿತರ ಆಯುಧಗಳನ್ನು ತಂದಿದ್ದಾರೆ. ದಸರಾ ಹಬ್ಬದಲ್ಲಿ ಆಯುಧ ಪೂಜೆ ದಿನ ಇವೆಲ್ಲ ಸಲಕರಣೆಗಳನ್ನಿಟ್ಟು ಪೂಜೆ ಮಾಡುವ ಪವಿತ್ರ ಪೂಜೆಯ ಪರಿಕಲ್ಪನೆಯನ್ನು ನಾವು ನೋಡಬಹುದಾಗಿದೆ. ಕೆಲವರ ಮನೆಯಲ್ಲಿ ಈ ಆಯುಧಗಳು ಇಂದಿಗೂ ಇವೆ. ಹಾಗಾಗಿ ಇವರ ಬಹುತೇಕ ಮನೆ ದೇವರು ಹರಪನಹಳ್ಳಿಯ ಉಚ್ಚಂಗೆಮ್ಮ, ಶಿವಮೊಗ್ಗದ ಕೋಟೆ ಆಂಜನೇಯ ದೈವ ಮತ್ತು ರಂಗನಾಥ ಸ್ವಾಮಿ ದೇವರು ಶಿವಮೊಗ್ಗ ನಗರದಲ್ಲಿ ನೆಲೆಸಿರುವಂತೆ ಬೇಡರು ಶಿವಮೊಗ್ಗ ಜಿಲ್ಲೆಯ ಗ್ರಾಮೀಣ ಮತ್ತು ಹಳ್ಳಿಯಲ್ಲಿಯೂ ನೆಲೆಸಿದ್ದಾರೆ. ಇನ್ನೂ ಕೆಲವು ಕಡೆ ಹಳ್ಳಿಯನ್ನು ಆಡಿಗಳೆಂದು ಕರೆಯುತ್ತಾರೆ. ಬೇಡರು ನೆಲೆಸಿರುವ ಹಳ್ಳಿಗಳೆಂದರೆ ಉದಾಹರಣೆ ಗಾಜನೂರು, ಶೆಟ್ಟಿ ಹಳ್ಳಿ, ತಿಳಿವಳಿ ಕ್ಯಾಂಪ್, ವಯಸ್ಸಿನ್ ಹಳ್ಳಿ, ಮತ್ತೋಡು ಗ್ರಾಮ, ಬಸವನ ಗಂಗೂರು, ಹೊಳೆ ಹಟ್ಟಿ, ಬನ್ನಿಕೇರಿ, ಕೊಮ್ಮನಾಳು, ಹೊಳಲೂರು, ಸೂಗೂರು, ಅನಸವಾಡಿ, ಹರಮಗಟ್ಟೆ, ಸುತ್ತು ಕೋಟೆ, ಆಯಾನೂರು, ರಾಮಿನ ಕೊಪ್ಪ, ಮುದೂವಾಳ, ತ್ಯಾಜ್ಯವಳ್ಳಿ, ದೇವಬಾಳ, ಶ್ಯಾಮಿಯನ ಹಳ್ಳಿ, ಗಬ್ಬೂರು, ಆರನಳ್ಳಿ, ಚಿನ್ನಮನೆ, ಅರಸಾಳು, ಕುಂಸಿ, ಚೋರಡಿ ಮತ್ತು ಕೋರಗಿ ಇನ್ನಿತರ ಶಿವಮೊಗ್ಗ ಜಿಲ್ಲೆಯ ಗ್ರಾಮಗಳಲ್ಲಿ ಬೇಡರು ಜೀವನವನ್ನು ನಡೆಸುತ್ತಿದ್ದಾರೆ. ಇವರಲ್ಲಿ ಗುಂಪು ಜೀವನವನ್ನು ಕಾಣಬಹುದಾಗಿದೆ. ಗ್ರಾಮೀಣ ಮುಖಂಡ ಮತ್ತು ಯಜಮಾನನ ಪಾತ್ರವು ಕೂಡ ಬಹಳ ಮಹತ್ವದ್ದಾಗಿರುತ್ತದೆ. ಯಜಮಾನರಾಗಿ ಗ್ರಾಮಗಳ ಮುಖಂಡರಾಗಿ ಗ್ರಾಮೀಣ ಪರಿಸರದ ಆಗುಹೋಗುಗಳಲ್ಲಿ ಕಷ್ಟ ಕಾರ್ಪಣ್ಯಗಳಲ್ಲಿ, ಹಬ್ಬ ಮತ್ತು ಜಾತ್ರೆಗಳಲ್ಲಿ ಮುಖಂಡತ್ವದ ಪಾತ್ರವನ್ನು ನಿರ್ವಹಿಸುವುದನ್ನು ನಾವು ಕಾಣಬಹುದಾಗಿದೆ.

ಶಿವಮೊಗ್ಗ ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿ ಅತಿಹೆಚ್ಚಿನ ಸಂಖ್ಯೆಯಲ್ಲಿ ಬೇಡರು ಇರುವ ಗ್ರಾಮಗಳೆಂದರೆ, ಹೊಳೆಹಟ್ಟಿ, ತ್ಯಾಜ್ಯವಳ್ಳಿ, ಚೊರ್ಡಿ, ಕೊರಗಿ, ಚಿನ್ನಮನೆ, ಗಬ್ಬೂರು, ಮುದವಾಳ ಮತ್ತು ಬಸವನ ಗಂಗೂರು ಗ್ರಾಮಗಳಲ್ಲಿ ಅಥವಾ ಹಳ್ಳಿಗಳಲ್ಲಿ ಅತಿಹೆಚ್ಚಿನ ಸಂಖ್ಯೆಯಲ್ಲಿ ಇದ್ದಾರೆ. ಶಿವಮೊಗ್ಗ ಜಿಲ್ಲೆಯ ಬೇಡರಲ್ಲಿ ಅವಿಭಕ್ತ ಕುಟುಂಬಗಳು ಇದ್ದಂತೆ ವಿಭಕ್ತ ಕುಟುಂಬಗಳು ಸಾಕಷ್ಟಿವೆ. ಸಣ್ಣ ಸಣ್ಣ ಭಿನ್ನಭಿಪ್ರಾಯ, ವೈಮನಸ್ಸು, ಆಧುನಿಕತೆ ಮತ್ತು ನಗರೀಕರಣದಿಂದಾಗಿ ಸಂಬಂಧಗಳಿಗೆ ಬೆಲೆ ಇಲ್ಲದಂತಾಗಿದೆ. ಹಾಗಾಗಿ ಅಣಬೆಗಳು ತಲೆ ಎತ್ತಿದಂತೆ, ನಾಯಿ ಕೊಡೆಯಂತೆ, ವಿಭಕ್ತ ಕುಟುಂಬಗಳು ನಿರ್ಮಾಣವಾಗಿವೆ. ಬೇಡರಲ್ಲಿ ಬಡತನದಿಂದ ಬಳಲುವವರು, ಮನೆಕೆಲಸ, ಬಟ್ಟೆ ಹೊಗೆಯುವ ಕೆಲಸ, ಹಮಾಲಿ, ತರಕಾರಿ ಮಾರಾಟ, ಬೀಡಿ ಅಂಗಡಿ, ಚಹಾ ಅಂಗಡಿ, ಮನೆಗಳನ್ನು ಕಟ್ಟುವ (ಬೇಲ್ದಾರ) ಕೆಲಸ, ಕೃಷಿಕೂಲಿ ಕೆಲಸ, ಜಾನುವಾರಗಳನ್ನು ಮೇಯಿಸುವ ಕೆಲಸ, ಇನ್ನಿತರ ಬಡತನದ ದುಡಿಮೆಗಳಾದ ಹೈನುಗಾರಿಕೆ, ಆಕಳ ಸಾಕಾಣಿಕೆ, ಎಮ್ಮೆ, ಕುರಿ ಸಾಕಾಣಿಕೆ, ಕೋಳಿ ಸಾಕಾಣಿಕೆ ಇನ್ನಿತರ ಕೆಲಸಗಳಲ್ಲಿ ದುಡಿಯುತ್ತಿದ್ದಾರೆ. ಶಿವಮೊಗ್ಗ ಜಿಲ್ಲೆಯಲ್ಲಿ ಕಂಡು ಬರುವ

ಬೇಡರಲ್ಲಿ ಒಗ್ಗೂಟ್ಟಿನ ಸೂತ್ರವಿದೆ. ಹೊಡೆದಾಟ, ಕಳ್ಳತನ, ಜಗಳ, ಅನೈತಿಕ ಸಂಬಂಧ, ಹಬ್ಬ ಮತ್ತು ಜಾತ್ರೆ ಇನ್ನಿತರ ವಿಷಯಗಳಲ್ಲಿ ಭಿನ್ನಭಿಪ್ರಾಯ ಮಾಡಿದಾಗ ಪೋಲೀಸ್ ಸ್ಟೇಷನ್‌ಗೆ ಹೋಗದೇ ಪಂಚಾಯಿತಿ ಸೇರುವ ಮೂಲಕ ಒಂದು ತೀರ್ಮಾನಕ್ಕೆ ಬರುತ್ತಾರೆ. ಕೆಲ ಸಂದರ್ಭದಲ್ಲಿ ಪಂಚಾಯಿತಿಯ ಯಜಮಾನರು ದಂಡವನ್ನು ಕೂಡ ಹಾಕುತ್ತಾರೆ. ಇವರ ಆಹಾರ ಪದ್ಧತಿಯೂ ಕೂಡ ವಿಶಿಷ್ಟವಾಗಿದೆ. ಅಕ್ಕಿ ರೊಟ್ಟಿ, ತರಕಾರಿ, ಪಲ್ಯಗಳು, ರಾಗಿ ಮುದ್ದೆ, ಬದನೆಕಾಯಿ ಪಲ್ಲೆ, ತಂಬ್ಳಿ, ಮೀನು, ಕುರಿ–ಮಾಂಸ, ಕೋಳಿ, ನಾಟೀ ಕೋಳಿ, ಮಸರು, ಮಜ್ಜಿಗೆ ಇನ್ನಿತರ ಆಹಾರವನ್ನು ಸೇವಿಸುತ್ತಾರೆ. ಶನಿವಾರ ದಿನದಂದು ಮಾತ್ರ ಯಾವುದೇ ಕಾರಣಕ್ಕು ಮಾಂಸಾಹಾರವನ್ನು ಸೇವಿಸುವುದಿಲ್ಲ. ಶಿವಮೊಗ್ಗ ಜಿಲ್ಲೆ ಬೇಡರಲ್ಲಿ ನಗರ ಮತ್ತು ಗ್ರಾಮೀಣ ಪರಿಸರದಲ್ಲಿ ಶೈಕ್ಷಣಿಕವಾಗಿ ತುಂಬಾ ಹಿಂದುಳಿದಿದ್ದಾರೆ. ಅದಕ್ಕೆ ಬಡತನ ಮತ್ತು ಕಡುಬಡತನ ಕಾರಣವಾಗಿದೆ. ಅನಕ್ಷರಸ್ಥರ ಸಂಖ್ಯೆ ಅತೀ ಹೆಚ್ಚಾಗಿ ಕಂಡು ಬರುತ್ತಾರೆ. ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಬೇಡರು ತುಂಬಾ ಹಿಂದುಳಿದಿದ್ದಾರೆ. ವರ್ಷಕ್ಕೊಮ್ಮೆ ಬರುವ ವಾಲ್ಮೀಕಿ ಜಯಂತಿಯನ್ನು ಮತ್ತು ಸಿಂಧೂರ ಲಕ್ಷ್ಮಣ ಜಯಂತಿಯನ್ನು ವಿಜೃಂಭಣೆಯಿಂದ ಮಾಡುತ್ತಾರೆ. ಶಿವಮೊಗ್ಗದ ನಗರ ಪ್ರದೇಶಗಳಲ್ಲಿರುವ ಬೇಡರು ಆನಾರೋಗ್ಯಕ್ಕೆ ಈಡಾದಾಗ ವೈದ್ಯರ ಬಳಿ ಹೋಗುತ್ತಾರೆ. ಆದರೆ, ಗ್ರಾಮೀಣ ಭಾಗದ ಬೇಡರು ನಾಟೀ ವೈದ್ಯ ಪದ್ಧತಿಯ ಮೊರೆ ಹೋಗುತ್ತಾರೆ. ಮುಡುದಾಸ, ಹೊಟ್ಟೆಗೆ ಮದ್ದು ಹಾಕಿದಾಗ, ಮುಟ್ಟಿನ ನೋವಿಗೆ, ಸರ್ಪದ ಹುಣ್ಣು, ಬಿಳಿ ಕಾಮನಿ, ಇಸುಬು, ಹೊಟ್ಟೆನೋವು, ನಾಯಿ ಕಡಿದರೆ, ಅರ್ಧ ತಲೆನೋವಿಗೆ ಸಂಬಂಧಿಸಿದಂತೆ ನಾಟೀ ವೈದ್ಯ ಪದ್ಧತಿಯ ಮೂಲಕ ರೋಗವನ್ನು ನಿವಾರಿಸಿಕೊಳ್ಳುತ್ತಾರೆ. ಉಡುಗೆ ತೊಡುಗೆಗಳನ್ನು ನೋಡಿದಾಗ ರೈತರು ನಿಲುವಂಗಿ ಮತ್ತು ಪಂಜೆಯನ್ನು ತೊಡುತ್ತಾರೆ. ಮಹಿಳೆಯರು ಸೀರೆಯನ್ನು ಉಡುತ್ತಾರೆ. ಶಾಲಾ–ಕಾಲೇಜಿಗೆ ಹೋಗುವ ಹೆಣ್ಣು ಮಕ್ಕಳು ಚೂಡಿದಾರ ವಸ್ತ್ರ ಧರಿಸಿದರೆ ಯುವಕರು ಪ್ಯಾಂಟು –ಶರ್ಟುನ್ನು ಧರಿಸುತ್ತಾರೆ. ಇತ್ತೀಚೆಗೆ ಯುವಕರು ದುಶ್ಚಟಗಳ ದಾಸರಾಗಿದ್ದಾರೆ, ಗುಟ್ಕಾ, ತಂಬಾಕು, ಬೀಡಿ, ಸಿಗರೇಟು, ಮದ್ಯಪಾನವನ್ನು ಮಾಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಇದು ಅಧಿಕವಾಗಿದೆ. ಎಂದೇ ಹೇಳಬೇಕಾಗುತ್ತದೆ. ಶಿವಮೊಗ್ಗ ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿ ಮನೆಯ ಆಡಳಿತವನ್ನು ಯಜಮಾನ ನೋಡಿಕೊಂಡರೆ, ಅಡುಗೆ ಮನೆಯ ಜವಾಬ್ದಾರಿಯನ್ನು ಯಜಮಾನಿ ನೋಡಿಕೊಳ್ಳುತ್ತಾಳೆ. ಇತ್ತೀಚಿನ ದಿನಗಳಲ್ಲಿ ಅವಿಭಕ್ತ ಕುಟುಂಬ ಪದ್ಧತಿಗಳು ನಶಿಸಿ ಹೋಗುತ್ತಿವೆ. ಎಲ್ಲೆಡೆ ವಿಭಕ್ತ ಕುಟುಂಬಗಳು ತಾಂಡವಾಡುತ್ತಿವೆ. ಶಿವಮೊಗ್ಗ ನಗರ ಮಟ್ಟದಲ್ಲಿ ಮತ್ತು ಗ್ರಾಮೀಣ ಮಟ್ಟದಲ್ಲಿ ಸ್ತ್ರೀ ಶಕ್ತಿ ಸಂಘಗಳಿವೆ. ಶ್ರೀ ಧರ್ಮಸ್ಥಳ ಮಂಜುನಾಥ ಮಹಿಳೆಯರ ಸಂಘ ಎಲ್ಲಮ್ಮ ದೇವಿ ಸ್ವಸಹಾಯ ಸಂಘ, ಸ್ತ್ರೀ ಶಕ್ತಿ ಸಂಘ ಸಕ್ರೀಯವಾಗಿ ಕಾರ್ಯ ನಿರ್ವಹಿಸುತ್ತವೆ. ಬೇಡರ ಅಭಿವೃದ್ಧಿ ಈಗೀಗ ಈ ಸಂಘಗಳ ಮೂಲಕ ನಡೆಯುತ್ತಿದೆ. ಈ ಸಂಘಗಳ ಮೂಲಕ ಮಹಿಳೆಯರ ಅಭಿವೃದ್ಧಿಯಾಗುತ್ತಿದೆ. ಆರ್ಥಿಕ ಮತ್ತು ಕುಟುಂಬ ಅಭಿವೃದ್ಧಿ ಸ್ತ್ರೀ ಶಕ್ತಿ ಸಂಘಗಳ ಮೂಲಕ ನಡೆಯುತ್ತಿದೆ. ಮಿತ ಸಂತಾನದ ಕಲ್ಪನೆ

ಶಿವಮೊಗ್ಗ ಜಿಲ್ಲೆಯ ಬೇಡರಲ್ಲಿ ಕಂಡು ಬರುತ್ತದೆ. ಶಿಕಾರಿಪುರ, ತೀರ್ಥಹಳ್ಳಿ, ಸೊರಬ, ಸಾಗರ, ಭದ್ರಾವತಿ ಹೊಸನಗರ ಮತ್ತು ಶಿವಮೊಗ್ಗ ತಾಲೂಕಿನಲ್ಲಿ ನೆಲೆಸಿರುವ ಬೇಡರಲ್ಲಿ ಜನನ ಪ್ರಮಾಣ ಒಂದು ಗಂಡು ಮತ್ತು ಒಂದು ಹೆಣ್ಣು ಮಗುವಿಗೆ ಅಷ್ಟೇ ಪ್ರಾಮುಖ್ಯತೆಯನ್ನು ಕೊಡುತ್ತಾರೆ. ನಾವಿಬ್ಬರೂ ನಮಗಿಬ್ಬರೂ ಎಂಬ ಪರಿಕಲ್ಪನೆ ಶಿವಮೊಗ್ಗ ಜಿಲ್ಲಾ ಬೇಡರಲ್ಲಿ ಇದೆ. ಶಿವಮೊಗ್ಗ ನಗರದಲ್ಲಿ ಮಾತ್ರ ಬೇಡರ ಗರಡಿ ಮನೆಗಳು ಕಂಡು ಬರುತ್ತವೆ. ಉದಾಹರಣೆಗೆ ದುರುಗಮ್ಮನ ಗರಡಿ ಮನೆ, ಉಚ್ಚಂಗ್ಯಮ್ಮನ ಗರಡಿ ಮನೆ, ಮೇಘಲಟ್ಟಿ ಗರಡಿ ಮನೆ, ಬೇಡರ ಕೇರಿಯ ಗರಡಿ ಮನೆಗಳಿವೆ. ಬೇಡ ಜನಾಂಗದ ಯುವಕರು ಇತ್ತೀಚೆಗೆ ಕುಸ್ತಿ ಕಲೆಯನ್ನು ಕರಗತ ಮಾಡಿಕೊಳ್ಳುತ್ತಿದ್ದಾರೆ.

**೩.೫. ಬೇಡ ಬುಡಕಟ್ಟಿನ ಕೃಷಿ ಬದುಕು**

ಶಿವಮೊಗ್ಗ ಜಿಲ್ಲೆಯಲ್ಲಿ ನೆಲೆಸಿರುವ ಬೇಡರ ಮೂಲ ವೃತ್ತಿ ಕೃಷಿ. ಇಂದು ಕೃಷಿ ಬದುಕು ಅಷ್ಟು ಸುಲಭವಲ್ಲ. ಕೃಷಿಯಿಂದ ರೈತರ ಜೀವನ ಹಸನವಾಗುತ್ತಿಲ್ಲ. ಶಿವಮೊಗ್ಗ ಜಿಲ್ಲೆಯ ೭ ತಾಲೂಕುಗಳಲ್ಲಿ ಮತ್ತು ೭ ತಾಲೂಕುಗಳ ಗ್ರಾಮಗಳು ಅಥವಾ ಹಳ್ಳಿಗಳಲ್ಲಿ ನೆಲೆಸಿರುವ ಬೇಡರು ಇಂದು ಕೃಷಿಯಲ್ಲಿಯೇ ತಮ್ಮ ಬದುಕನ್ನು ಕಂಡುಕೊಳ್ಳುತ್ತಿದ್ದಾರೆ. ಎಂಟತ್ತಿನ ಮನೆತನ, ನಾಲ್ಕತ್ತೆನ ಮನೆತನ ಎಂದು ಹೆಸರುವಾಸಿಯಾದ ಮನೆತನಗಳು ಇಂದು ಬಡತನದ ಜೀವನವನ್ನು ಅನುಭವಿಸುತ್ತಿವೆ. ಬೇಡರ ಕಟ್ಟೆ ಮನೆತನಗಳು ಇಂದು ಬಡತನದ ಬೇಗೆಯಲ್ಲಿ ಬಳಲುತ್ತಿವೆ. ಇದು ವಾಸ್ತವದ ಸಂಗತಿ. ಸಮುದಾಯಗಳ ಆರಂಭದ ಮೂಲವನ್ನು ನೋಡಿದರೆ ಸಮುದಾಯಗಳು ತಾವು ಮಾಡುವ ವೃತ್ತಿಯಿಂದ ಗುರುತಿಸಿಕೊಳ್ಳುತ್ತಿವೆ. ಬೇಡರ ಮೊದಲ ವೃತ್ತಿ ಬೇಟೆಯಾಡುವುದು ಯಾವಾಗ 'ಅರಣ್ಯ ಸಂರಕ್ಷಣೆ ಕಾಯ್ದೆ' ಬಂತೋ ಅಂದೇ ಅವರ ಬೇಟೆ ಸಂಸ್ಕೃತಿ ಅವಸನಗೊಂಡಿತ್ತು. ನಂತರ ಅವರು ಆಯ್ಕೆ ಮಾಡಿಕೊಂಡಿದ್ದು ಕೃಷಿ ಬದುಕು. ಬೇಡರೆಲ್ಲ ಜಮಿನ್ದಾರರಾಗಿ ಶಿವಮೊಗ್ಗ ಜಿಲ್ಲೆಯಲ್ಲಿ ಗುರುತಿಸಿಕೊಂಡಿಲ್ಲ ಬೆರಳಣಿಕೆಯಷ್ಟು ಜನ ಮಾತ್ರ ಕೃಷಿ ಭೂಮಿಯನ್ನು ಹೊಂದಿರುವುದನ್ನು ಬಿಟ್ಟರೇ ಉಳಿದವರೆಲ್ಲ ಕೃಷಿ ಆಳುಗಳಾಗಿ ದುಡಿಯುತ್ತಿದ್ದಾರೆ. ಶಿವಮೊಗ್ಗ ಜಿಲ್ಲೆಯಾದ್ಯಂತ ಹೆಚ್ಚಾಗಿ ನೀರಾವರಿ ಭೂಮಿ ಅಥವಾ ಜಮೀನ್ದಾರಿಕೆ ಮಾಲೀಕತ್ವವಿರುವುದು, ಬ್ರಾಹ್ಮಣ, ಲಿಂಗಾಯತ, ಭಂಟರು, ಹೆಗಡೆಯವರು ಇನ್ನಿತರ ಮುಂದುವರಿದ ಜನಾಂಗದಲ್ಲಿ ಕೃಷಿ ಭೂಮಿಗಳಿವೆ. ಈ ಭೂಮಿಗಳಲ್ಲಿ ಬೇಡರು ಕೃಷಿ ಕೂಲಿ ಆಳುಗಳಾಗಿ ದುಡಿಯುತ್ತಿದ್ದಾರೆ. ಮುಖ್ಯವಾಗಿ ಈ ಸಮುದಾಯದ ನೆಲೆಗಳನ್ನು ನೋಡಿದರೆ ಶೋಚನೀಯ ಸ್ಥಿತಿಯ ವಾತಾವರಣ ಎದ್ದು ಕಾಣುತ್ತದೆ. ನಗರ ಪ್ರದೇಶದಿಂದ ದೂರ ಉಳಿದು ಮುಂದುವರಿದ ಸಮುದಾಯದವರ ಹೊಲಗದ್ದೆಗಳಲ್ಲಿ ಕೃಷಿಕೆಲಸ ಮಾಡುವುದು ಕಂಡುಬರುತ್ತದೆ. ಆಧುನಿಕ ಯುಗದಲ್ಲಿ ನಾಗರೀಕ ಪ್ರಪಂಚವನ್ನು ಬಿಟ್ಟು ತಮ್ಮ ಮೂಲ ವೃತ್ತಿಯನ್ನು ಮಾಡಿಕೊಂಡು ಸಮಾಜದ ಕಟ್ಟಕಡೆಯ ಸಮುದಾಯವಾಗಿ ಬೇಡ ಸಮುದಾಯ ಜೀವನ ಮಾಡುತ್ತಿರುವುದು ಕಂಡು ಬರುತ್ತದೆ. ಇಲ್ಲಿಯವರೆಗೆ ಯಾವುದೇ ಮೂಲಭೂತ ಸೌಲಭ್ಯಗಳು ಇಲ್ಲದೇ, ಅದರಲ್ಲೂ ಸೌಲಭ್ಯಗಳು ಇದ್ದರೂ ಬೇಡರಿಗೆ ದಕ್ಕದೇ ಇರುವುದು ಸೋಜಿಗದ ಸಂಗತಿಯಾಗಿದೆ.

ಶಿವಮೊಗ್ಗ ಜಿಲ್ಲೆಯಾದ್ಯಂತ ನೆಲೆಸಿರುವ ಬೇಡರು ಕೃಷಿಕೂಲಿ ಕೆಲಸಗಾರರಾಗಿ ತಮ್ಮದೇ ಆದ ಮೂಲ ವೃತ್ತಿಯನ್ನು ಅವಲಂಬಿಸಿ ದುಡಿಯುತ್ತಿದ್ದಾರೆ. ಅವರಲ್ಲಿ ಗುಂಪು ಜೀವನವನ್ನು ಕಾಣಬಹುದಾಗಿದೆ. ತಮಗೆ ಅನುಕೂಲವಾಗುವ ಹೊಲಗದ್ದೆಗಳಿಗೆ ಸಮೀಪವಿರುವ ಪ್ರದೇಶವನ್ನು ಆಯ್ಕೆ ಮಾಡಿಕೊಂಡು ಬರುತ್ತಿದ್ದಾರೆ. ಈ ಸಮುದಾಯ ನಿಸರ್ಗದೊಂದಿಗೆ ಸಂಬಂಧ ಬೆಸೆಯುತ್ತಾ ತಮ್ಮದೇ ಆದ ಜೀವನ ಕ್ರಮವನ್ನು ರೂಢಿಸಿಕೊಂಡಿರುವುದು ಕಂಡು ಬರುತ್ತದೆ. ಮೇಲೆ ಹೇಳಿದ ಜೀವನೋಪಾಯದ ಕೃಷಿ ಜೀವನವನ್ನು ಗಮನಿಸಿದಾಗ ಜೊತೆಗೆ ಅವರು ನೆಲೆಸಿರುವ ಸ್ಥಳಗಳನ್ನು ನೋಡಿದಾಗ ಈ ಕಸುಬಿನಿಂದ ಎಂದೂ ಸುಖ ಸಂತೋಷದಿಂದ ಬದುಕಲು ಸಾಧ್ಯವಿಲ್ಲ. ಈ ಕೆಲಸಗಳಿಂದ ತಾತ್ಕಾಲಿಕ ಬದುಕನ್ನು ಸಾಗಿಸಲು ಮಾತ್ರ ಸಾಧ್ಯವಾಗುತ್ತದೆ. ಈ ಕಸುಬು, ವೃತ್ತಿ ಮುಂದಿನ ಜೀವನದ ಭದ್ರತೆ ಕಾಣಲು ಸಾಧ್ಯವಿಲ್ಲವೆಂದು ಹೇಳಬಹುದಾಗಿದೆ. ಹೀಗಾಗಿ ಈ ಸಮುದಾಯ ಬಡತನ ಹಾಗೂ ಕಡುಬಡತನದಿಂದ ಬದುಕುವ ದಯನೀಯ ಸ್ಥಿತಿ ಅಥವಾ ಅತಂತ್ರ ಸ್ಥಿತಿಯಲ್ಲಿದೆ. ಇತ್ತೀಚಿಗೆ ದೇಶದ್ಯಾಂತ ಸುದ್ಧಿಯಾಗಿರುವ ಅಪೌಷ್ಠಿಕತೆ ಶಿವಮೊಗ್ಗ ಜಿಲ್ಲೆಯ ಬೇಡರನ್ನು ಬಿಟ್ಟಿಲ್ಲ. ಪುರುಷರು, ಮಹಿಳೆಯರು, ವೃದ್ಧರು ಮತ್ತು ಮಕ್ಕಳು ಪೌಷ್ಠಿಕ ಆಹಾರವಿಲ್ಲದೇ ಅಪೌಷ್ಠಿಕತೆಯಿಂದ ಬಳಲುತ್ತಿದ್ದಾರೆ. ಈ ದುಃಸ್ಥಿತಿಯಿಂದ ನರಳುತ್ತಾ ಯಾವುದೇ ಮೂಲಭೂತ ಸೌಲಭ್ಯವಿಲ್ಲದೇ ಅತ್ಯಂತ ನಿಕೃಷ್ಟ ಹೀನಾಯ ಸ್ಥಿತಿಯಲ್ಲಿ ಜೀವನ ನಡೆಸುತ್ತಿರುವುದು ಕಂಡು ಬರುತ್ತದೆ. ಬೇಸಿಗೆ, ಬರಗಾಲದ ಸಮಯದಲ್ಲಿ ಕೃಷಿಕೂಲಿ ಕೆಲಸವಿಲ್ಲದೇ ಒಂದೊತ್ತಿನ ಊಟಕ್ಕೂ ಪರದಾಡುವ ಸ್ಥಿತಿ ಈ ಸಮುದಾಯಕ್ಕೆ ಒದಗಿ ಬಂದಿದೆ. ಶಿವಮೊಗ್ಗ ಜಿಲ್ಲೆಯಾದ್ಯಂತ ಕೃಷಿ ಕೂಲಿಕೆಸದಲ್ಲಿ ನಿರತವಾದ ಬೇಡ ಸಮುದಾಯದ ಜೊತೆಜೊತೆಗೆ ಕೃಷಿ ಬದುಕನ್ನು ಮೆಲುಕು ಹಾಕಿದಾಗ ಭೂ ಮಾಲೀಕರು ಒಂದಲ್ಲ ಒಂದು ರೀತಿಯ ಸಮಸ್ಯೆಯಲ್ಲಿ ಸಿಕ್ಕಿಕೊಂಡರೆ ಅದರಂತೆ ಕೂಲಿ ಆಳುಗಳು ಕೂಡ ತಮ್ಮದೇ ಆದ ಸಮಸ್ಯೆಯಲ್ಲಿ ನರಳಾಡುತ್ತಿದ್ದಾರೆ. ಕೃಷಿ ಅಥವಾ ಪ್ರಕೃತಿಯಿಂದ ಉಂಟಾಗುವ ಅತಿವೃಷ್ಟಿ ಅಥವಾ ಅನಾವೃಷಿಗಳು ಕೃಷಿ ಬದುಕಿನ ಮೇಲೆ ಗಾಢವಾದ ಪರಿಣಾಮವನ್ನುಂಟು ಮಾಡಿವೆ. ಅದೇ ರೀತಿ ಸತತವಾದ ಬರಗಾಲವು ಕೂಡ ಕೃಷಿಯ ಬದುಕನ್ನು ದಿಕ್ಕು ತಪ್ಪಿಸಿವೆ. ಸೂಕ್ತ ಮಾರುಕಟ್ಟೆ ವ್ಯವಸ್ಥೆ ಇಲ್ಲದಿರುವುದು ಕೂಡ ಕೃಷಿ ವೃತ್ತಿಗೆ ಹಿನ್ನಡೆಯನ್ನುಂಟು ಮಾಡಿದೆ. ಜನಪ್ರತಿನಿದಿಗಳ ಧಿವ್ಯ ನಿರಾಶಕ್ತಿಯೂ ಕೂಡ ಕೃಷಿ ಚಟುವಟಿಕೆಗೆ ಭಾರೀ ಕಂಟಕವನ್ನು ತಂದೊಡ್ಡಿದೆ. ಜಾನುವಾರುಗಳ ಸಾಕಾಣೆ ಕೂಡ ಒಂದು ದೊಡ್ಡ ಸಮಸ್ಯೆಯಾಗಿ ಪರಿಣಮಿಸಿದೆ. ಮೊದಲಿದ್ದ ಅವಿಭಕ್ತ ಕುಟುಂಬಗಳು ನಿರ್ನಾಮವಾಗಿ ವಿಭಕ್ತ ಕುಟುಂಬಗಳು ತಲೆ ಎತ್ತಿವೆ. ಕರ್ನಾಟಕ ರಾಜ್ಯದಲ್ಲಿ ೨೦೧೬ ಜನವರಿಯಿಂದ ೨೦೧೭ ಜನವರಿಯೊಳಗೆ ಸುಮಾರು ೩೭೫೦ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಗಣನೀಯವಾಗಿ ಏರುತ್ತಿರುವ ಬೆಲೆಗಳು ರೈತರಿಗೆ ವರದಾನವಾಗುವ ಬದಲು ನರಕನ್ನುಂಟು ಮಾಡಿವೆ. ಮಳೆ ಆಶ್ರಿತ ಭೂಮಿ ಶಿವಮೊಗ್ಗ ಜಿಲ್ಲೆಯಲ್ಲಿ ಅತೀ ಹೆಚ್ಚು ಇದೆ. ಮಲೆನಾಡು ಪ್ರದೇಶ ಎಂಬ ಹಣೆಪಟ್ಟಿ ಶಿವಮೊಗ್ಗಕ್ಕೆ ಇದ್ದರೂ ಕೂಡ

ಸಮಯಕ್ಕೆ ಸರಿಯಾಗಿ ಮಳೆ ಕೈಕೊಟ್ಟಿದೆ. ಮೇವಿನ ಕೊರತೆಯಿಂದಾಗಿ ಜಾನುವಾರುಗಳು ಕಟುಗರ್ ಕೈಗೆ ಸಿಗುವಂತಾಗಿದೆ. ತೀವ್ರವಾದ ಬರಗಾಲ ಜಾನುವಾರುಗಳು ಕಸಾಯಿಖಾನೆ ಸೇರುವಂತೆ ಮಾಡಿದೆ. ಮೊದ ಮೊದಲು ಎಲ್ಲಾ ರೈತ ಸಮುದಾಯದ ಮನೆಗಳಲ್ಲಿ ಮೊಸರು, ಮಜ್ಜಿಗೆ, ಬೆಣ್ಣೆ, ತುಪ್ಪ ಹೈನುಗಾರಿಕೆ ಸಮೃದ್ಧತೆಯಿಂದ ಇರುತ್ತಿತ್ತು. ಆದರೆ ಈಗ ಹೈನುಗಾರಿಕೆ ಕೂಡ ಮೊದಲಿದ್ದ ಕಳೆಯನ್ನು ಕಳೆದುಕೊಂಡಿದೆ. ಹಳೆಯಕಾಲದ ಬೇಸಾಯ ಪದ್ದತಿಯೂ ಕೂಡ ಕೃಷಿ ಬದುಕಿಗೆ ಹಿನ್ನಡೆಯನ್ನುಂಟು ಮಾಡಿದೆ. ಪಶುಪಾಲನೆಯೂ ಕೂಡ ಅಷ್ಟು ಸುಲಭವಾದ ಕಾಯಕವಾಗಿ ಉಳಿದಿಲ್ಲ. ಶಿವಮೊಗ್ಗ ಜಿಲ್ಲೆಯಾದ್ಯಂತ ಗ್ರಾಮ ಅಥವಾ ಹಳ್ಳಿಗಳಲ್ಲಿ ವಾಸಿಸುವ ಬೇಡರ ಬದುಕು ಕ್ಷೇತ್ರಕಾರ್ಯ ಕೈಗೊಂಡು ನೋಡಿದಾಗ ಅದರ ನಿಜ ಸ್ವರೂಪ ನಮ್ಮ ಪ್ರಜ್ಞೆಗೆ ಬರುತ್ತದೆ. ಅಂದಿನ ಹಳ್ಳಿಯ ಜೀವನ, ಹಬ್ಬ ಹರಿದಿನ, ಜಾತ್ರೆ ಅಥವಾ ಉತ್ಸವಗಳು ತಮ್ಮ ಸ್ವಾರಸ್ಯವನ್ನು ಕಳೆದುಕೊಳ್ಳುತ್ತಿವೆ. ರೈತರು ಆಚರಿಸುವ ಕಾರಹುಣ್ಣಿಮೆ, ಮಣ್ಣೆತ್ತಿನ ಅಮಾವಾಸ್ಯೆ, ಎಳ್ಳು ಅಮಾವಾಸ್ಯೆ, ಸಂಕ್ರಾಂತಿ, ಸುಗ್ಗಿಕುಣಿತ, ರಾಶಿ ಪೂಜೆ, ಭೂದೇವಿ ಪೂಜೆ, ಚರಗ, ನಾಗರ ಪಂಚಮಿ, ಇಂದು ತಮ್ಮ ಕಳೆಯನ್ನು ಕಳೆದುಕೊಳ್ಳುತ್ತಿವೆ. ಇದಕ್ಕೆಲ್ಲ ನಗರೀಕರಣ ಮತ್ತು ಆಧುನೀಕರಣವೇ ಬಹುಮುಖ್ಯವಾದ ಕಾರಣಗಳಾಗಿವೆ. ನಗರ ಅಥವಾ ಗ್ರಾಮಗಳ ಸುತ್ತಲೂ ಕಾರ್ಖಾನೆಗಳ ಸ್ಥಾಪನೆ, ಕೃಷಿ ಕೂಲಿ ಆಳುಗಳ ಸಮಸ್ಯೆಗೆ ಕಾರಣವಾಗಿದೆ. ನೀರಾವರಿ ಭೂಮಿಗಿಂತ, ಮಳೆ ಆಶ್ರಿತ ಭೂಮಿಯೇ ಶಿವಮೊಗ್ಗ ಜಿಲ್ಲೆಯಲ್ಲಿ ಹೆಚ್ಚು ಇರುವುದರಿಂದ ಬೋರ್‌ವೆಲ್ ಹಾಕಿಸಿದರೂ ಕೂಡ ನೀರು ದೊರೆಯದ ಪ್ರಸಂಗಗಳು ಯತೇಚ್ಚವಾಗಿವೆ. ರೈತ ಮತ್ತು ರೈತನ ಕುಟುಂಬ ಇಂದು ಸಂಕಟದಲ್ಲಿದೆ. ಬೇಡರು ವಾಸಿಸುವ ಗ್ರಾಮಗಳ ಆಕ್ರಂಧನ ಮುಗಿಲು ಮುಟ್ಟಿದೆ. ಬೆಲೆಗಳ ಏರಿಳಿತ ರೈತರ ಬದುಕನ್ನು ನೆಲಕಚ್ಚುವಂತೆ ಮಾಡಿದೆ. ನದಿಗಳು, ಆಣೆಕಟ್ಟುಗಳು, ಡ್ಯಾಂಗಳು ಇದ್ದರೂ ಅಲ್ಲಿನ ನೀರು ದೊಡ್ಡ ದೊಡ್ಡ ಕಾರ್ಖಾನೆಗಳ ಪಾಲಾಗುತ್ತಿವೆ. ರಾಜಕೀಯ ನಾಯಕರ ಲಂಚತನ ಹಾಗೂ ಬೇಜವ್ದಾರಿಯಿಂದ ಆಣೆಕಟ್ಟುಗಳ ನೀರು ಕಾರ್ಖಾನೆಗಳ ಪಾಲಾಗುತ್ತಿವೆ. ರೈತರ ಭೂಮಿಗೆ ಸರಿಯಾದ ಸಮಯಕ್ಕೆ ಸರಿಯಾದ ನೀರು ಸಿಗದೇ ಬೆಳೆಗಳು ಅರ್ಧಕ್ಕೆ ಒಣಗಿ ರೈತರನ್ನು ಆತ್ಮಹತ್ಯೆಗೆ ದೂಡುವಂತಹ ಪರಿಸ್ಥಿತಿ ಇಂದು ಬಂದು ಒದಗಿದೆ. ಮಾನವೀಯತೆ, ಕರುಣೆ, ಅನುಕಂಪ, ರಾಜಕೀಯ ನಾಯಕರಿಂದ ಇಂದು ರೈತರ ಸಮುದಾಯಕ್ಕೆ ದೊರಕದಾಗಿದೆ. ಸಕಾಲಕ್ಕೆ ಮಳೆ ಇಲ್ಲದೇ ರೈತರು ಇಂದು ಆಕಾಶವನ್ನು ನೋಡುವಂತಾಗಿದೆ. ನಿಸ್ವಾರ್ಥಕ್ಕಿಂತ ಇಂದು ಸಮಾಜದಲ್ಲಿ ಸ್ವಾರ್ಥ ತುಂಬಿ ತುಳುಕಾಡುತ್ತಿದೆ. ಹಾಗಾಗಿ ಶಿವಮೊಗ್ಗ ಜಿಲ್ಲೆಯಲ್ಲಿ ಬೇಡ ರೈತ ಕುಟುಂಬಗಳು ಕೆಲಸವಿಲ್ಲದೇ ಗುಳೆ ಹೋಗುವ, ವಲಸೆ ಹೋಗುವ ಪರಿಸ್ಥಿತಿಗೆ ಬಂದು ನಿಂತಿವೆ. ಗೋವಾ, ಹೈದ್ರಾಬಾದ್, ಬೆಂಗಳೂರು, ಮಡಿಕೇರಿ, ಪುದುಚೇರಿ, ಬಾಂಬೆ, ಮದ್ರಾಸ್, ದೆಹಲಿ, ಕೇರಳ-ಇನ್ನಿತರ ಕಡೆ ಉದ್ಯೋಗ ಹರಸಿ ಹೋಗುತ್ತಿದ್ದಾರೆ. ಇದರಿಂದ ರೈತ ಕುಟುಂಬದ ಮಕ್ಕಳ ಶಿಕ್ಷಣಕ್ಕೆ ದೊಡ್ಡ ಹೊಡೆತ ಬೀಳಲಿದೆ. ಒಟ್ಟಿನಲ್ಲಿ ಶಿವಮೊಗ್ಗ ಜಿಲ್ಲೆಯಲ್ಲಿರುವ ಬೇಡರು ಇಂದು ಅನಕ್ಷರತೆ, ಅಜ್ಞಾನ, ಬಡತನ ಮತ್ತು ಕಡು

ಬಡತನದಿಂದ ಜೀವನವನ್ನು ಸಾಗಿಸುತ್ತಿದ್ದಾರೆ. ಮಳೆಬಾರದೇ, ಕುಡಿಯಲು ನೀರಿಲ್ಲದೇ, ಬಸವಳಿದ ಜಾನುವಾರುಗಳು, ಪ್ರಾಣಿಪಕ್ಷಿಗಳು ಮತ್ತು ಜಲಚರಗಳು ಸಾಯುವ ಹಂತಕ್ಕೆ ಬಂದು ನಿಂತಿವೆ. ದೊಡ್ಡ ದೊಡ್ಡ ರೈತ ಕುಟುಂಬಗಳು ಮತ್ತು ಮನೆತನಗಳು ಬೀದಿ ಪಾಲಾಗುವ ಹಂತಕ್ಕೆ ಬಂದು ನಿಂತಿವೆ. ಅರಣ್ಯಗಳ ನಾಶ, ಸರ್ಕಾರದ ದಿವ್ಯ ನಿರ್ಲಕ್ಷ್ಯ, ರಸಾಯನಿಕಗಳ ಬಳಕೆ, ರಸಗೊಬ್ಬರಗಳ ಬೆಲೆ ಏರಿಕೆ, ಕೂಲಿ ಆಳುಗಳ ಸಮಸ್ಯೆ ಕೃಷಿ ಬದುಕಿಗೆ ಮುಂಬರುವ ದಿನಗಳಲ್ಲಿ ದೊಡ್ಡ ಕಂಟಕವನ್ನೇ ತರಲಿವೆ. ಹಾಗಾಗಿ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ, ಭದ್ರಾವತಿ, ಹೊಸನಗರ, ಸಾಗರ, ಸೊರಬ, ತೀರ್ಥಹಳ್ಳಿ ಮತ್ತು ಶಿವಮೊಗ್ಗದಲ್ಲಿ ನೆಲೆಸಿರುವ ಅಥವಾ ಗ್ರಾಮಾಂತರ ಪ್ರದೇಶದಲ್ಲಿ ನೆಲೆಸಿರುವ ಕೃಷಿ ಕೂಲಿ ಆಳುಗಳಾಗಿ ದುಡಿಯುತ್ತಿರುವ ಬೇಡರಲ್ಲಿ ಸಂಘಟನೆ ಕೊರತೆ ಇದೆ. ಡಾ. ಬಿ. ಆರ್. ಅಂಬೇಡ್ಕರ್ ಅವರು ಹೇಳಿರುವಂತೆ ಶಿಕ್ಷಣ, ಸಂಘಟನೆ ಮತ್ತು ಹೋರಾಟ ಎಲ್ಲಿಯವರೆಗೆ ಇರುವುದಿಲ್ಲವೋ ಆ ಸಮುದಾಯದ ಉದ್ಧಾರ ಅಸಾಧ್ಯವೆಂಬ ಧ್ಯೇಯ ಅಕ್ಷರಶಃ ನಿಜ. ಶಿವಮೊಗ್ಗ ಜಿಲ್ಲೆಯಲ್ಲಿ ನೆಲೆಸಿರುವ ಬೇಡರು, ಗ್ರಾಮ, ಹೋಬಳಿ, ತಾಲೂಕು ಮತ್ತು ಜಿಲ್ಲಾಮಟ್ಟದಲ್ಲಿ ಸಂಘಟನೆ ಮಾಡಬೇಕಾಗಿದೆ. ಆ ಮೂಲಕ ಹೋರಾಟ ಮಾಡಿ ಸರಕಾರದ ಕಣ್ಣು ತೆರೆಸಬೇಕಾಗಿದೆ. ಸರಕಾರದ ಸೌಲಭ್ಯಗಳನ್ನು ಮತ್ತು ಯೋಜನೆಗಳನ್ನು ಆ ಮೂಲಕ ಪಡೆದುಕೊಳ್ಳುವ ಕೆಲಸವನ್ನು ಮಾಡಬೇಕಾಗಿದೆ. ಬೇಡರು ರಾಜಕೀಯವಾಗಿ ಕೂಡ ಮುನ್ನಲೆಗೆ ಬರಲು ಪ್ರಯತ್ನಿಸುತ್ತಿದ್ದಾರೆ. ಶಿವಮೊಗ್ಗದ ರೂಪ ಲಕ್ಷ್ಮಣ ಅವರು ಶಿವಮೊಗ್ಗ ಮಹಾನಗರ ಪಾಲಿಕೆಯ ಉಪ ಮೇಯರ್ ಆಗಿ ೨೦೧೭ರಲ್ಲಿ ಕೆಲಸ ಮಾಡಿದ್ದಾರೆ. ಹಾಗೆಯೇ ಇವರು ಎರಡು ಬಾರಿ ಶಿವಮೊಗ್ಗ ಮಹಾನಗರ ಪಾಲಿಕೆಯ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ಹಾಗೆಯೇ ಶ್ರೀ ಲಕ್ಷ್ಮಣ ಅವರು, ಶ್ರೀ ಸಿದ್ಧಪ್ಪ, ಶ್ರೀಮತಿ ತನುಜಾ ಸುರೇಶ್ ಅವರು ಶಿವಮೊಗ್ಗ ಮಹಾನಗರ ಪಾಲಿಕೆಯ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ಹಾಗೆಯೇ ತನುಜಾ ಸುರೇಶ್, ಅವರು ಶಿವಮೊಗ್ಗ ತಾಲೂಕು ಪಂಚಾಯಿತಿ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ರೇಣುಕಮ್ಮ ರುದ್ರಪ್ಪ, ಮಮತಾ ಶಾಲಿ ಅವರು ಶಿವಮೊಗ್ಗ ಜಿಲ್ಲಾ ಪಂಚಾಯಿತಿ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ಶ್ರೀ ಎ.ನಾಗರಾಜ ಅವರು ಶಿವಮೊಗ್ಗ ತಾಲೂಕು ಪಂಚಾಯಿತಿ ಅಧ್ಯಕ್ಷರಾಗಿ ರಾಜಕೀಯವಾಗಿ ಗುರುತಿಸಿಕೊಂಡಿದ್ದಾರೆ.



**೩.೬. ಬೇಡರ ಸಾಮಾಜಿಕ ಜೀವನ**

ಯಾವುದೇ ಒಂದು ಸಮಾಜ ಅಥವಾ ಸಮುದಾಯ ಮೇಲ್ನೋಟಕ್ಕೆ ಅತಿ ಸರಳ ಎನ್ನುವಂತೆ ಕಂಡು ಬಂದರು ಅದು ತನ್ನ ಒಡಲೊಳಗೆ ತನಗೆ ಅರಿವಾಗದಂತೆ, ಸೂಕ್ಷ್ಮವೂ ಅತಿ ಸಂಕೀರ್ಣವೂ ಆದ ಸಾಮಾಜಿಕ ಸ್ವರೂಪಗಳನ್ನು ಹೊಂದಿರುತ್ತದೆ. ವ್ಯವಸ್ಥೆಯೊಳಗೆ ತನ್ನ ಸುಭದ್ರತೆಯನ್ನು ಕಾಯ್ದುಕೊಳ್ಳುವುದಕ್ಕಾಗಿ ಸಾಮಾಜಿಕ ಜೀವನದಲ್ಲಿ ತನ್ನದೇ ಆದ ಕುಟುಂಬ ಪದ್ದತಿ, ಮನೆ ನಿರ್ಮಾಣ, ಗೃಹ ಪ್ರವೇಶ, ನ್ಯಾಯ ಪದ್ದತಿ, ಆಹಾರ ಪದ್ದತಿ, ಉಡುಗೆ-ತೊಡುಗೆ, ವೈದ್ಯ, ಮದ್ದು,

ಚಿಕಿತ್ಸೆ, ಬೇಟೆ, ಜಾತಿ ಬಹಿಷ್ಕಾರ, ಮತ್ತು ಜಾತಿಗೆ ಸೇರಿಸಿಕೊಳ್ಳುವ ಕ್ರಮ, ಮಹಿಳೆಯರ ಸ್ಥಾನಮಾನ, ಸಾಮಾಜಿಕ ಸಂಘ-ಸಂಸ್ಥೆಗಳು, ನಂಬಿಕೆ ಮತ್ತು ವಿಧಿ-ನಿಷೇಧಗಳು, ಭವಿಷ್ಯ ವಾಚಕಗಳು, ಕಟ್ಟೆ ಮನೆ ಪದ್ಧತಿ, ಕಲೆ ಮತ್ತು ಕ್ರೀಡೆ ಮುಂತಾದುವುಗಳನ್ನು ಹೊಂದಿರುತ್ತದೆ. ಪ್ರಸ್ತುತದಲ್ಲಿ ಶಿವಮೊಗ್ಗ ಜಿಲ್ಲೆಯ ಬೇಡರ ಸಾಮಾಜಿಕ ಜೀವನವನ್ನು ಕುರಿತು ಚರ್ಚಿಸಲಾಗಿದೆ. ವ್ಯಕ್ತಿ ಕುಟುಂಬ ಜೀವಿ ಹಾಗೆಯೇ ಸಮಾಜ ಜೀವಿ. ಆದ್ದರಿಂದ ವ್ಯಕ್ತಿಗೆ ಈ ಎರಡು ಕಡೆಯಿಂದ ಸಂಬಂಧಗಳು ಉಂಟಾಗುತ್ತವೆ. ಇವನ್ನು ಕೌಟುಂಬಿಕ ಸಂಬಂಧ ಹಾಗೂ ಸಾಮಾಜಿಕ ಸಂಬಂಧ ಎಂದು ಗುರುತಿಸಬಹುದು. ನಾಗರಿಕತೆ ಸಮಾಜದ ತಳಹದಿ ಆದರೆ, ಸಮಾಜಕ್ಕೆ ಕುಟುಂಬವೇ ಮೂಲ. ಕುಟುಂಬದ ಸ್ವರೂಪಕ್ಕೂ ಸಮಾಜದ ಸ್ವಭಾವಕ್ಕೂ ಸಂಬಂಧವಿರುತ್ತದೆ, ಕುಟುಂಬವು ಸಮಾಜದ ಒಂದು ಘಟಕ. ಇದು ಮಾನವೀಯ ಸಂಬಂಧಗಳ ನಿಕಟತೆಯ ಪ್ರತಿಕವೇ ಆಗಿರುತ್ತದೆ. ಕುಟುಂಬ ಎಂದಾಕ್ಷಣ ಅತಿ ಚಿಕ್ಕ ಮಗುವಿನಿಂದ ಹಿಡಿದು ವೃದ್ದರವರೆಗೆ ಎಲ್ಲಾ ಮಾನವೀಯ ಸಂಬಂಧಗಳ ಗುಂಪು ಎನ್ನಬಹುದು. ಶಿವಮೊಗ್ಗ ಜಿಲ್ಲೆಯ ನಗರ ಮತ್ತು ಗ್ರಾಮಿಣ ಪ್ರದೇಶದಲ್ಲಿ ವಾಸಿಸುವ ಬೇಡ ಬುಡಕಟ್ಟು, ನಗರದಲ್ಲಿ ವಿಭಕ್ತ ಕುಟುಂಬಗಳ ಸಂಖ್ಯೆ ಅಧಿಕವಾಗಿದ್ದು ಗ್ರಾಮೀಣ ಭಾಗದಲ್ಲಿ ಅವಿಭಕ್ತ ಕುಟುಂಬಗಳ ಸಂಖ್ಯೆ ವಿಫುಲವಾಗಿರುವುದನ್ನು ಕಾಣಬಹುದಾಗಿದೆ. ಒಂದು ಕುಟುಂಬ ಎಂದ ಮೇಲೆ ಹತ್ತಾರು ಮನಸ್ಸುಗಳು ಏಕಾಭಿಪ್ರಾಯವನ್ನು ವ್ಯಕ್ತಪಡಿಸುತ್ತವೆ ಮಾನವೀಯ ಸಂಬಂಧಗಳ ಜೀವಂತಿಕೆಯನ್ನು ಅವು ಸಾರುತ್ತವೆ. ಬೇಡ ಬುಡಕಟ್ಟಿನಲ್ಲಿ ಭಾಂದವ್ಯ ಎಂಬ ಪರಿಕಲ್ಪನೆ ಅಧಿಕವಾಗಿರುವುದರಿಂದ ಅಲ್ಲಿ ನಿರಂತರವಾದ ಅಭಿಪ್ರಾಯ ಐಕ್ಯತೆ ಮೂಡಿಬರಲು ಸಾಧ್ಯ. ಮನೆ ದೇವರು ಹಬ್ಬ ಹರಿದಿನ ಸಂಪ್ರದಾಯಗಳು ಪೂಜೆ ಪುನಸ್ಕಾರಗಳು ಧಾರ್ಮಿಕ ನಂಬಿಕೆ ವಿಧಿ-ವಿಧಾನಗಳು ವಿವಿಧ ಸಂಸ್ಕಾರಗಳನ್ನು ಶಿವಮೊಗ್ಗ ಜಿಲ್ಲೆಯ ಬೇಡ ಬುಡಕಟ್ಟಿನಲ್ಲಿ ಕಾಣಬಹುದಾಗಿದೆ. ಒಂದು ಮನೆ ಎಂದ ಮೇಲೆ ಆ ಮನೆಗೆ ಒಡೆಯನೇ ಯಜಮಾನನಾಗಿರುತ್ತಾನೆ. ಯಜಮಾನನ ಹೆಂಡತಿ ಯಜಮಾನಿಯಾಗಿರುತ್ತಾಳೆ. ಯಜಮಾನ ತನ್ನ ಮನೆಯಲ್ಲಿ ತನ್ನದೇ ಆದ ಅದಿಪತ್ಯವನ್ನು ಹೊಂದಿರುತ್ತಾನೆ ಮನೆಯಲ್ಲಿ ಜರುಗುವ ಪ್ರತಿಯೊಂದು ಕೆಲಸ ಕಾರ್ಯಗಳು ಯಜಮಾನನ ನಿರ್ದೇಶನದಂತೆ ನಡೆಯುತ್ತವೆ. ಶಿವಮೊಗ್ಗ ಜಿಲ್ಲೆಯ ಬೇಡ ಬುಡಕಟ್ಟಿನ ಗ್ರಾಮೀಣ ಪರಿಸರವನ್ನು ಹೊಕ್ಕಿ ನೋಡಿದಾಗ ಬೇಡ ಕುಟುಂಬದ ಪರಿಕಲ್ಪನೆಯಲ್ಲಿ ಅಣ್ಣ ತಮ್ಮ, ಬಂಧು ಬಳಗ ಎಲ್ಲಾರು ಒಟ್ಟಿಗೆ ಜೀವನ ಸಾಗಿಸುತ್ತಿರುವುದು ಶಿವಮೊಗ್ಗ ಜಿಲ್ಲೆಯಲ್ಲಿ ಕಂಡುಕೊಳ್ಳಲಾಗಿದೆ, ಗ್ರಾಮೀಣ ಪ್ರದೇಶ ಅಂದ ಮೇಲೆ ಅಲ್ಲಿ ಹಬ್ಬ ಹರಿದಿನಗಳು ಮತ್ತು ಜಾತ್ರೆ ವಿಶೇಷ ಅರ್ಥವನ್ನು ಪಡೆದುಕೊಳ್ಳುತ್ತವೆ. ಹಾಗೆಯೇ ನಂಬಿಕೆ ವಿಧಿ ನಿಷೇಧಗಳು ಸಂಪ್ರದಾಯಗಳು ವಿಶಿಷ್ಟವಾಗಿ ಕಂಡು ಬರುತ್ತವೆ. ಹೊಲ ಗದ್ದೆ ಮನೆಗಳಲ್ಲಿ ಸಣ್ಣ ಪುಟ್ಟ ಕಾರಣಗಳಿಗಾಗಿ ಜಗಳಗಳು ಏರ್ಪಟ್ಟಾಗ ಕುಟುಂಬದಲ್ಲಿ ಅವು ಪರಿಹಾರ ಕಂಡುಕೊಳ್ಳುತ್ತವೆ. ಜೀವನದಲ್ಲಿ ಬಹು ಮುಖ್ಯವಾದ ಮದುವೆ, ತೊಟ್ಟಿಲು ಕಾರ್ಯ ಇತ್ಯಾದಿ ಸಡಗರ ಸಂಭ್ರಮದ ವಾತಾವರಣ ಬಂಧು ಬಳಗ

ಬೀಗರು ಬಿಜ್ಜರು ಈ ಸಾಮಾಜಿಕ ವ್ಯವಸ್ಥೆಯಲ್ಲಿ ಸೇರಿಕೊಂಡಾಗ ಅದು ಹೆಚ್ಚು ಸಂತೋಷವನ್ನು ಪಡೆದುಕೊಳ್ಳುತ್ತದೆ. ಒಂದು ಸಮಾಜ ಎಂದಾಗ ಅಲ್ಲಿ ಶೋಷಣೆ ಕೂಡ ಇರುತ್ತದೆ. ಏಕೆಂದರೆ, ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಕೃಷಿ ಜೀವನದಲ್ಲಿ ಗಂಡು ಮತ್ತು ಹೆಣ್ಣಿನಲ್ಲಿ, ಗಂಡಾಳುವಿಗೆ ಇಂತಿಷ್ಟು ಕೂಲಿ ಮತ್ತು ಹೆಣ್ಣಾಳುವಿಗೆ ಇಂತಿಷ್ಟು ಕೂಲಿ ಎಂದು ನೋಡಿದಾಗ ಅಲ್ಲಿ ಶೋಷಣೆ ಎದ್ದು ಕಾಣುತ್ತದೆ. ಗ್ರಾಮೀಣ ಭಾಗದ ಬೇಡ ಬುಡಕಟ್ಟಿನಲ್ಲಿ ನ್ಯಾಯ ಪದ್ದತಿ ಮತ್ತು ನ್ಯಾಯ ತೀರ್ಮಾನ ಪಂಚಾಯತಿ ಮೂಲಕ ಬಗೆ ಹರಿಯುತ್ತದೆ. ಶಿವಮೊಗ್ಗ ಜಿಲ್ಲೆಯ ಬೇಡ ಬುಡಕಟ್ಟಿನಲ್ಲಿ ಆಹಾರ ಪದ್ಧತಿ ಬಹಳ ವಿಶಿಷ್ಟವಾಗಿರುತ್ತದೆ. ಜೋಳದ ರೊಟ್ಟಿ, ರಾಗಿ ಮುದ್ದೆ, ಗುರಾಳ ಪುಡಿ, ಕಡ್ಲಿ ಪುಡಿ, ಕಡ್ಲಿ ಚಟ್ನಿ, ಇನ್ನಿತರ ಆಹಾರ ಪದ್ಧತಿಗಳು ವಿಶಿಷ್ಟತೆಯನ್ನು ಪಡೆದುಕೊಳ್ಳುತ್ತವೆ. ಹಾಗೆಯೇ ಶಿವಮೊಗ್ಗ ಜಿಲ್ಲೆಯ ಬೇಡ ಬುಡಕಟ್ಟಿನ ಉಡುಗೆ ತೊಡುಗೆಗಳು ಕೂಡ ವಿಶಿಷ್ಟ ಪಾತ್ರವನ್ನು ವಹಿಸಿಕೊಳ್ಳುತ್ತವೆ. ಗ್ರಾಮೀಣ ಭಾಗದಲ್ಲಿ ರೈತಾಪಿ ಕುಟುಂಬಗಳೆ ಹೆಚ್ಚಾಗಿ ಇರುವುದರಿಂದ ಪುರುಷರು ನಿಲುವಂಗಿ ಪಂಜೆ, ತಲೆಗೆ ಪೇಟವನ್ನು ಧರಿಸಿದರೆ ಮಹಿಳೆಯರು ಯತ್ತೆಚ್ಚವಾಗಿ ಸೀರೆ ಮತ್ತು ಕುಪ್ಪಸವನ್ನು ತೊಡುತ್ತಾರೆ. ಕೆಲವೊಮ್ಮೆ ಆಹಾರದಲ್ಲಿ ವ್ಯತಿರಿಕ್ತವಾದಾಗ ರೋಗ ರುಜಿನಗಳಿಗೆ ಈಡಾದಾಗ ನಾಟಿ ವೈದ್ಯ, ಪದ್ಧತಿಯ ಮೊರೆ ಹೋಗುತ್ತಾರೆ. ಅಲ್ಲಿ ಪ್ರಮುಖವಾಗಿ ಬೇಡ ಬುಡಕಟ್ಟಿನಲ್ಲಿ ಸಂಘ ಸಂಸ್ಥೆಗಳು ಕೂಡ ಜನಾಂಗೀಯವಾಗಿ ತೊಂದರೆಗಳಾದಾಗ ಸಂಘಟನೆ ಮೂಲಕ ಪ್ರತಿಭಟಿಸುವ ಮನೋಭಾವನೆಯನ್ನು ಕಾಣಬಹುದಾಗಿದೆ. ಹೀಗೆ ಶಿವಮೊಗ್ಗ ಜಿಲ್ಲೆಯ ಬೇಡ ಬುಡಕಟ್ಟಿನ ಸಾಮಾಜಿಕ ಜೀವನವನ್ನು ನಗರಿಕರಣದಿಂದಾಗಿ ನಗರ ಮಟ್ಟದಲ್ಲಿ ಕುಟುಂಬವು ಬದಲಾವಣೆಯನ್ನು ಹೊಂದಿದರೆ ಗ್ರಾಮೀಣ ಪರಿಸರದಲ್ಲಿ ಕುಟುಂಬ ನ್ಯಾಯ ಪದ್ಧತಿ ಆಹಾರ ಪದ್ಧತಿ ವೇಷ ಭೂಷಣಗಳು ಹಬ್ಬ ಹರಿದಿನ ಜಾತ್ರೆ ಉತ್ಸವಗಳು ನಂಬಿಕೆ ವಿದಿ ನಿಷೇಧಗಳು ಕಲೆ ಮತ್ತು ಸಂಸ್ಕೃತಿ ಹಳ್ಳಿ ಊರಿಗೆ ಹನುಮಪ್ಪ ಚೆಂದ ಎನ್ನುವ ಗಾದೆ ಮಾತಿನಂತೆ ದೇವರು ಮತ್ತು ದೈವಕ್ಕೆ ಮನ್ನಣೆ ಇದೆ. ಗ್ರಾಮೀಣ ಪರಿಸರದಲ್ಲಿ ಜನರ ಬದುಕು ಬಡತನದಿಂದ ದುಸ್ಥರವಾಗಿದ್ದರೂ ಕೂಡ ಅವರ ಸಂಸ್ಕೃತಿ ಶ್ರೀಮಂತಿಕೆಯನ್ನು ಪಡೆದುಕೊಂಡಿರುವುದನ್ನು ಗ್ರಾಮೀಣ ಪರಿಸರದಲ್ಲಿ ಕಾಣಬಹುದಾಗಿದೆ.

### ೩.೭. ಜೀವನಾವರ್ತನ ಸಾಮಾಜಿಕ ಆಚರಣೆಗಳು

#### ೧. ಆಚರಣೆಗಳು

ಮನುಷ್ಯ ಬದುಕನ್ನು ಕಲಿತ ಹಾಗೆ ಉತ್ತಮವಾಗಿ ಬದುಕಬೇಕೆಂಬ ಆಪೇಕ್ಷೆ ಆತನಲ್ಲಿ ಬಲವಾಯಿತು. ಮುಂದೆ ಅದಕ್ಕೊಂದು ಕ್ರಮಬದ್ಧವಾದ ರೂಪ ತಂದುಕೊಳ್ಳಲು ಇತರರು ಅದನ್ನು ಅನುಸರಿಸುವಂತಾಗಲು ಅನೇಕ ಕಟ್ಟು ಕಟ್ಟಳೆಗಳನ್ನು ವಿಧಿಸಿಕೊಂಡ ಸಾಮಾಜದ, ಹಿರಿಯ ಬುದ್ಧಿವಂತರ ದೂರದೃಷ್ಟಿ ಚಿಂತನೆಗಳು ಇತರರಗೆ ಮಾರ್ಗದರ್ಶನ ರೂಪದ ವಿಧಿ ನಿಯಮಗಳಾದವು ಸಮಾಜದ ಇತರ ಸದಸ್ಯರು ಅದನ್ನು ಒಪ್ಪಿ ಹಾಗೆಯೇ ಬದುಕಿನಲ್ಲಿ ಅನುಸರಣೆ ತಂದಾಗ ಅವು ಹಿರಿಕರು

ಮಾಡಿದ ಶಾಸ್ತ್ರ ಸಂಪ್ರದಾಯಗಳಾದವು ಆಯಾ ಸಮಾಜದ ಸಂಪ್ರದಾಯಗಳಾದವು (ಡಾ. ಟಿ. ಗೋವಿಂದರಾಜು, ೧೯೯೩-೧೭೮) ಆಧುನಿಕವಾಗಿ ವ್ಯಕ್ತಿ ವ್ಯಕ್ತಿಗಳೊಂದಿಗೆ ಸಂಬಂಧಗಳೆಲ್ಲಾ ಹೆಚ್ಚು ಹೆಚ್ಚು ಸಂಕೀರ್ಣವಾಗುತ್ತಾ ಹೋದಂತೆಲ್ಲ ಒಂದು ಬುಡಕಟ್ಟು ಅಥವಾ ಸಮುದಾಯವು ಬದಲಾವಣೆಯ ಪ್ರಕ್ರಿಯೆಗೆ ಒಳಗಾದಂತೆ ಕಂಡರು ಅದು ತನ್ನ ಮೂಲ ಸಂಸ್ಕೃತಿಯನ್ನು ಕಾಪಾಡಲು ನಿರಂತರ ಹೋರಾಟ ಮಾಡುತ್ತಿರುತ್ತದೆ. ಇದನ್ನು ಆ ಸಮುದಾಯ ಅಥವಾ ಬುಡಕಟ್ಟುಗಳ ಜೀವನಾವರ್ತನ ಆಚರಣೆಗಳು, ಹಬ್ಬ ಹರಿದಿನಗಳು ಮತ್ತು ಜಾತ್ರೆಗಳಲ್ಲಿ ಗಮನಿಸಬಹುದಾಗಿದೆ. ಇಂದಿನ ಉನ್ನತ ಮಟ್ಟದ ಜ್ಞಾನ ನಾಗರಿಕತೆ ಸಾಮಾನ್ಯ ಮನುಷ್ಯನ ಬದುಕಿನ ಮೇಲೆ ಆಲೋಚನಾ ಕ್ರಮದ ಮೇಲೆ ತೀವ್ರವಾದ ಪರಿಣಾಮ ಬೀರುತ್ತಿದ್ದರೂ ಧರ್ಮದ ಮೇಲಿನ ಆತನ ನಂಬಿಕೆ ಶಾಸ್ತ್ರ ಸಂಪ್ರದಾಯಗಳ ಮೇಲಿನ ಆತನ ಒಲವು ಭಯ ಗಣನೀಯವಾಗಿ ಏನೂ ಕುಗ್ಗಿಲ್ಲ ಎಂಬುದಕ್ಕೆ ನಮ್ಮ ವಿಜ್ಞಾನಿಗಳ ಬುದ್ಧಿ ಜೀವಿಗಳೆನಿಸಿದ ಅನೇಕ ಕರ ನಿದರ್ಶನ ನಮ್ಮ ಕಣ್ಣ ಮುಂದೆ ಇದೆ. ವಾಸ್ತವತೆ ಈ ರೀತಿ ಇರುವಾಗ ಶಿವಮೊಗ್ಗದ ಬೇಡರು ಅನೇಕ ಶಾಸ್ತ್ರ ಮತ್ತು ಸಂಪ್ರದಾಯ, ನಂಬಿಕೆ ಮತ್ತು ನಡವಳಿಕೆಗಳಿಗೆ ಪಕ್ಕಾ ಆಗಿರುವುದು ಆಶ್ಚರ್ಯವಲ್ಲ. ಇರುವಷ್ಟು ಸಂಪ್ರದಾಯ ಶಾಸ್ತ್ರಗಳಾದರು ತಮ್ಮ ನಿಜವಾದ ಅರ್ಥದಲ್ಲಿ ಆಚರಣೆಯಾಗುತ್ತಿವೆ ಎಂದರೆ ಖಂಡಿತವಾಗಿಯೂ ಇಲ್ಲವೆನ್ನಬಹುದು. ಅವುಗಳನ್ನು ಮೂಲ ರೂಪದಲ್ಲಿ ಉಳಿಸಿಕೊಳ್ಳುವುದು ಇದು ಅಸಾಧ್ಯವಾದರು ಜನ ಅವುಗಳ ಅರ್ಥ ಉದ್ದೇಶವನ್ನಾದರೂ ಅರಿತಿರುವುದು ಔಚಿತ್ಯವಾಗುತ್ತಿತ್ತು. ಆದರತೆ, ಬಹಳ ಜನರಿಗೆ ತಮ್ಮ ಆಚರಣಾ ವಿಧಿಗಳ ಅರ್ಥ ತಿಳಿದುಕೊಳ್ಳಬೇಕೆನ್ನುವುದರ ಅಗತ್ಯವೇ ಕಂಡುಬಂದಿತಲ್ಲ. ಹಿಂದಿನವರು ಮಾಡುತ್ತಿದ್ದರು, ನಾವು ಮಾಡಬೇಕು ಮಾಡಿದರೆ ಒಳ್ಳೆಯದು, ಮಾಡದಿದ್ದರೆ ಕೇಡಾಗುವುದು ಎಂಬ ಭಯ ಅವರನ್ನು ಈ ಶಾಸ್ತ್ರ ಸಂಪ್ರದಾಯಗಳಿಗೆ ಇನ್ನೂ ಬದ್ಧವಾಗಿರುವಂತೆ ಮಾಡಿರುವ ಹಾಗೇ ಕಾಣುತ್ತದೆ ಆದ್ದರಿಂದಲೇ ಇಲ್ಲಿ ಆಚರಣೆಗಳು ಕೇವಲ ಅನುಕರಣೆ, ಅನುಸರಣೆ ಅರ್ಥ ಗೊತ್ತಿಲ್ಲದ್ದರಿಂದ ಆಚರಣೆಗಳಲ್ಲಿ ಆಗುವ ವ್ಯತ್ಯಾಸಗಳ ಬಗ್ಗೆಯೂ ಅವರು ಚಿಂತಿಸುವುದಿಲ್ಲ ಹೀಗಾಗಿ ಅವು ಇಂದು ಪರಸ್ಪರ ಪ್ರಭಾವಕ್ಕೆ ಒಳಗಾಗಿ ಸಮ್ಮಿಶ್ರಗೊಂಡ ಕೆಲವು ಅಂಶಗಳು ಕ್ಷಯಿಸಿ ಹೋಗಿ ಪಳೆಯುಳಿಕೆಗಳಾದ ಒಟ್ಟಾರೆ ಅಂತಃಸತ್ವ ಕಳೆದುಕೊಂಡು 'ಶುಷ್ಕ ಆಚರಣೆಗಳಾಗಿ ಕಂಡು ಬರುತ್ತವೆ. ಆ ಕಾರಣಕ್ಕಾಗಿಯೇ ಇಂದಿನ ಅಧ್ಯಾಯನಕಾರರಿಗೆ ಅವು ಹಿಡಿಸಲಾರದ ಕಘಂಟು ಎದರು ನಿಲ್ಲುತ್ತವೆ. ಸಂಪ್ರದಾಯ, ಸಂಪ್ರದಾಯ ನಿಷ್ಟವಾದ ಬದುಕು ಜನನ ಪೂರ್ವದಿಂದ ಮರಣೋತ್ತರದಲ್ಲೂ ಅನೇಕ ಶಾಸ್ತ್ರ ಆಚಾರಗಳಿಂದ ಕೂಡಿರುತ್ತವೆ. ಇಂತಹ ಬದುಕಿನಲ್ಲಿ ವಿವಾಹ ಹಾಗೂ ಶವ ಸಂಸ್ಕಾರವನ್ನು ಪ್ರಮುಖ ಸಂಪ್ರದಾಯಗಳಾಗಿ ಪರಿಗಣಿಸಬಹುದು. ಇವು ಬದುಕಿನ ಎರಡು ಪ್ರಮುಖ ಆವಸ್ಥೆಗಳನ್ನು ಪ್ರತಿನಿಧಿಸುವುದರ ಜೊತೆಗೆ ಅನೇಕ ಇತರ ಶಾಸ್ತ್ರ ಆಚರಣೆಗಳಿಂದ ಕೂಡಿ ಸಂಕೀರ್ಣವಾಗಿರುತ್ತವೆ. ಒಬ್ಬನ ಜೀವನದಲ್ಲಿ ಧಾರ್ಮಿಕ ಅಥವಾ ಕೌಟುಂಬಿಕ ಕಾರಣದಿಂದಾಗಿ ಪರಂಪರೆಯಿಂದ ನಡೆಸಿಕೊಂಡು ಬರುವಂತಹವು ವಿಧಿಕ್ರಿಯೆಗಳು ಇವುಗಳನ್ನು ಪ್ರೆಂಚ್ ಭಾಷೆಯಲ್ಲಿ ದಿ ರೈಟ್ಸ್ ಆಫ್ ಟಾಜಿಸನ್

ಜೀವಿತದ ಸಂಕ್ರಮಣದ ಆವಸ್ಥೆಗೆ ಅನುಗುಣವಾಗಿ ಆಚರಿಸುವ ಸಂಸ್ಕಾರಗಳು ಎಂದು ಕರೆಯಲಾಗಿದೆ. ಇನ್ನು ಒಂದು ವಿಧವಾದ ರೈಟ್ಸ್ ವಿಧಿಗಳು ಬಹುಮಟ್ಟಿಗೆ ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದವು ಅವುಗಳನ್ನು ವಿಧಿ ಕ್ರೀಯೆಗಳು ರಿಚ್ಯೂವಲ್ಸ್ ಎಂದು ಕರೆಯಲಾಗುತ್ತದೆ. (ಡಾ. ಬಿ.ಬಿ.ಹೆಂಡಿ, ೧೯೯೮-೯೯) ಒಟ್ಟಾರೆಯಾಗಿ ಅನ್ಯ ಜಾತಿ ಸಂಸ್ಕೃತಿಗಳ ನಿರಂತರ ದಾಳಿಗಳ ಮಧ್ಯದಲ್ಲಿಯೂ ಸಹ ಶಿವಮೊಗ್ಗ ನಾಯಕ ಸಮಾಜವು ತನ್ನ ಮೂಲ ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದೆ. ಪ್ರಸ್ತುತ ಅಧ್ಯಯನದಲ್ಲಿ ಶಿವಮೊಗ್ಗ ಜಿಲ್ಲೆಯ ಬೇಡರ ಜೀವನಾವರ್ತನ ಮತ್ತು ವಾರ್ಷಿಕಾವರ್ತನದ ಆಚರಣೆಗಳನ್ನು ನೋಡಲಾಗಿದೆ.

**೨. ಜನನ ಮತ್ತು ನಾಮಕರಣ**

ವ್ಯಕ್ತಿಯ ಜೀವನದಲ್ಲಿ ಪ್ರಾಪ್ತವಾಗುವ ಮೊಟ್ಟ ಮೊದಲನೆಯ ಮಹತ್ವದ ಆವಸ್ಥೆ ಜನನ. ಬಹುಪಾಲು ಬುಡಕಟ್ಟುಗಳಲ್ಲಿ ಜನನ ಮತ್ತು ನಾಮಕರಣ ಪದ್ದತಿ ಇದೆ. ಆದರೆ ಇವುಗಳ ಆಚರಣೆಯ ವಿಧಿ-ವಿಧಾನಗಳು ಮಾತ್ರ ಭಿನ್ನವಾಗಿರುತ್ತವೆ. ಅಂತೆಯೇ ಶಿವಮೊಗ್ಗ ಜಿಲ್ಲೆಯ ಬೇಡ ಸಮುದಾಯದಲ್ಲಿಯೂ ಕೂಡ ಈ ಪದ್ಧತಿ ಇದೆ. ಇವರ ಜನನ ಮತ್ತು ನಾಮಕರಣದ ಆಚರಣೆ ಬಹಳ ವಿಶಿಷ್ಟತೆಯಿಂದ ಕೂಡಿರುತ್ತದೆ. ಗರ್ಭಿಣಿಯಾದ ಮಹಿಳೆಯ ಮೊದಲ ಹೆರಿಗೆ ನಡೆಯುವುದು ಆಕೆಯ ತವರುಮನೆಯಲ್ಲಿ ನಂತರದ ಹೆರಿಗೆಗಳು ಗಂಡನ ಮನೆಯಲ್ಲಿ ನಡೆಯುತ್ತವೆ. ಗರ್ಭಧಾರಣೆಯನ್ನು ತಿಂಗಳ ಮುಟ್ಟು ನಿಲ್ಲುವುದರ ಆಧಾರದ ಮೇಲೆ ನಿರ್ಧರಿಸಲಾಗುತ್ತದೆ. ಚೊಚ್ಚಲ ಬಸುರಿಗೂ ಕೂಡ ಹೆಚ್ಚು ಗಮನ ಕೊಡಲಾಗುತ್ತದೆ. ಈ ಜನಾಂಗದ ಹಿರಿಯ ಹೆಂಗಸು ಹೆರಿಗೆ ಮಾಡಿಸುತ್ತಾಳೆ. ಈಕೆಯನ್ನು 'ಸೂಲಗಿತ್ತಿ' ಎಂದು ಕರೆಯುತ್ತಾರೆ. ಬಸುರಿಯಾದ ಹೆಂಗಸಿಗೆ ಹೆರಿಗೆಯ ಸಮಯದಲ್ಲಿ ಸಹಾಯ ಮಾಡಲು ಗ್ರಾಮಕ್ಕೊಬ್ಬರಂತೆ ಸೂಲಗಿತ್ತಿಯರು ಇರುತ್ತಾರೆ.

ಅಲ್ಲಿ ತವರು ಮನೆಯವರು ಗರ್ಭಿಣಿಯಾದ ಹೆಂಗಸನ್ನು ಕರೆದುಕೊಂಡು ಹೋಗುವ ಮೊದಲು ಆಕೆಗೆ "ಸೀಮಂತ" ಕಾರ್ಯಕ್ರಮವನ್ನು ಮಾಡುತ್ತಾರೆ. ಗರ್ಭಿಣೆಯಾದ ಮಹಿಳೆಗೆ ಅರಿಶಿನ, ಕುಂಕುಮ, ಬಳೆ, ಹೊಸ ಸೀರೆ, ಹೊಸ ಕುಪ್ಪಸ, ಹೂವುಗಳಿಂದ ಅಲಂಕರಿಸಿ, ಗ್ರಾಮ ಆಥವಾ ತಾಲೂಕುಗಳಲ್ಲಿನ ದೇವರ ಮನೆಗೆ ಕರೆದುಕೊಂಡು ಹೋಗಿ ಬಂದರೆ ಸೀಮಂತ ಕಾರ್ಯಕ್ರಮ ಮುಗಿದಂತೆ. ಆದರೆ ಇತ್ತೀಚಿಗೆ ನಾಗರೀಕತೆ ಬೆಳದಂತೆಲ್ಲಾ, ಸೀಮಂತ ಕಾರ್ಯವನ್ನು ಮಾಡುವಾಗ ಗಂಡ-ಹೆಂಡತಿ ಇಬ್ಬರನ್ನು ಕೂರಿಸುತ್ತಾರೆ. ಕೂಡಿಸಿದ ಮೇಲೆ ಇಬ್ಬರಿಗೂ ಅಕ್ಷತೆಯನ್ನು ಹಾಕುತ್ತಾರೆ., ನಂತರ ಗರ್ಭಿಣಿಯಾದ ಮಹಿಳೆಯು ಹಿರಿಯರಿಗೆ ನಮಸ್ಕರಿಸುತ್ತಾಳೆ. ಆಕೆಯ ತವರುಮನೆಯಿಂದ ಸಿಹಿ ಅಡುಗೆಯನ್ನು ಸೀಮಂತ ಕಾರ್ಯಕ್ಕಾಗಿ ತರುವ ಸಂಪ್ರಾದಾಯ ಇತ್ತೀಚಿಗೆ ಬೆಳೆದು ಬಂದಿದೆ. ಅಲ್ಲದೇ ಆಕೆಯ ಗಂಡನ ಮನೆಯಲ್ಲಿ ಆಕೆಯ ಸಂಬಂಧಿಕರಿಗೆ ತಮ್ಮ ಸ್ವಂತ ಖರ್ಚಿನಿಂದ ಅಡಿಗೆ ಮಾಡಿಸುವ ಪದ್ಧತಿ ಇದೆ. ಅದಕ್ಕೂ ಮೊದಲು ಗರ್ಭಿಣಿಗೆ ಎರಡು ತಿಂಗಳು ತುಂಬುವ ಸಂದರ್ಭದಲ್ಲಿ ತವರು ಮನೆಯಿಂದ "ಬಯಕೆ ಬುತ್ತಿ" ತರುವ ಪದ್ಧತಿ ಇದೆ. ಆಕೆಯ

ಸೀಮಂತನದ ಕಾರ್ಯಕ್ಕೆ ಬೀಗರು-ಬಿಜ್ಜರು ಈ ಶುಭ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಾರೆ. ಸೀಮಂತನ ಕಾರ್ಯಕ್ರಮದಲ್ಲಿ ಗಂಡ-ಹೆಂಡತಿ ಇಬ್ಬರಿಗೂ ಮುಯ್ಯಿ ಮಾಡುತ್ತಾರೆ. ಗರ್ಭವತಿಯಾದ ಆಕೆಗೆ ಸೀರೆ ಕುಪ್ಪಸದ ಕಣವನ್ನು ಮುಯ್ಯಿ ಮಾಡಿದರೆ, ಆಕೆಯ ಗಂಡನಿಗೆ ಹೊಸ ಬಟ್ಟೆಗಳನ್ನು ಮುಯ್ಯಿ ಮಾಡುತ್ತಾರೆ. ಶಿವಮೊಗ್ಗ ಜಿಲ್ಲೆಯ ಬೇಡರಲ್ಲಿ ಹೆರಿಗೆಯು ಮನೆಯ ಒಳಗಡೆ ನಡೆಯುತ್ತದೆ. ಹೆರಿಗೆಗೆ ಪ್ರತ್ಯೇಕ ವ್ಯವಸ್ಥೆಯನ್ನು ಮಾಡದೆ ಪಡಸಾಲೆ ಅಥವಾ ನಡುಮನೆಯ ಒಂದು ಪಕ್ಕದಲ್ಲಿ ಬಟ್ಟೆಯ ಪರದೆಯಿಂದ ಭಾಗ ಮಾಡಿಕೊಂಡು ಆ ಪಕ್ಕದಲ್ಲಿ ಹೆರಿಗೆ ಮಾಡಿಸುತ್ತಾರೆ. ಹುಟ್ಟಿದ ಮಗುವಿಗೆ ಬಿಸಿ ನೀರಿನಿಂದ ಸ್ನಾನ ಮಾಡಿಸಲಾಗುತ್ತದೆ. ಆನಂತರದಲ್ಲಿ ಹಗ್ಗದ ತೊಟ್ಟಿಲ ಕಟ್ಟಿ ಅದರಲ್ಲಿ ಹಾಕುತ್ತಾರೆ. ಮಗು ಹುಟ್ಟಿದ ಸುದ್ಧಿಯನ್ನು ಗಂಡನ ಮನೆಗೆ (ಮಗುವಿನ ತಂದೆಯ ಮನೆಗೆ) ತವರು ಮನೆಯ ಸಂಬಂಧಿಕರೆ ಹೋಗಿ ಸುದ್ಧಿ ತಿಳಿಸಿ ಬರುತ್ತಾರೆ. ಹೆರಿಗೆಯಾದ ಸುದ್ಧಿ ತಿಳಿದು ಗಂಡನ ಮನೆಯವರು ಮಗುವನ್ನು ನೋಡಲು ಹೋಗುತ್ತಾರೆ. ಆದರೆ ಮಗುವಿನ ತಂದೆ ಮಾತ್ರ ಮಗುವನ್ನು ಹೋಗಿ ಮೊದಲು ನೋಡುವಂತಿಲ್ಲ ಜನಿಸಿದ ೫ನೆಯ ೯ನೆಯ ದಿನದಲ್ಲಿ ಹೋಗಿ ಮಗುವನ್ನು ನೋಡಬೇಕಾದ ಸಂಪ್ರದಾಯವಿದೆ. ಹಾಗೆಯೇ ಹೋಗುವಾಗ ಮಗು ಜನಿಸಿರುವುದರಿಂದ ಮಗುವಿಗೆ "ಬಂಗಾರದ ಉಂಗುರವನ್ನು ತೆಗೆದುಕೊಂಡು ಹೋಗಿ ಜನಿಸಿದ ಮಗುವಿನ ಬೆರಳಿಗೆ ತೊಡಿಸುವ ಸಂಪ್ರದಾಯವಿದೆ. ಮಗುವನ್ನು ನೋಡಲು ಹೋದ ಹೊಸತರಲ್ಲಿ ಆ ಮಗುವಿನ ತಂದೆಯು ಮಗುವನ್ನು ನೇರವಾಗಿ ನೋಡದೆ ಆ ಮಗುವಿನ ತಾಯಿಯನ್ನು ನೋಡಿದ ನಂತರ ನೋಡುವ ಪದ್ಧತಿ ಇದೆ. ಹಾಗೆ ಮಗುವಿಗೆ ಹೊಸ ಬಟ್ಟೆಯನ್ನು ಕುಲಾಯಿಯನ್ನು ತೆಗೆದುಕೊಂಡು ಹೋಗುತ್ತಾನೆ. ಮಗು ಜನಿಸಿದ ೩-೫ನೆಯ ದಿನಕ್ಕೆ ಗಂಡನ ಮನೆಯಿಂದ ಕಾರದ ಬುತ್ತಿಯೆಂದು ಕೊಬ್ಬರಿ, ಉತ್ತುತ್ತಿ, ತುಪ್ಪ, ಕಲ್ಲು ಸಕ್ಕರೆ, ದ್ರಾಕ್ಷಿ-ಗೊಡಂಬಿ ಇತ್ಯಾದಿ ತೆಗೆದುಕೊಂಡು ಹೋಗುತ್ತಾರೆ. ಮಗುವಿನ ನಾಮಕರಣ ನಡೆಯುವುದು ಆ ಮಗುವಿನ ತಂದೆಯ ಮನೆಯಲ್ಲಿ ಅಲ್ಲಿಯವರೆಗೆ ಆ ಮಗುವಿನ ತಾಯಿಯ ಆರೋಗ್ಯವನ್ನು ಚೆನ್ನಾಗಿ ನೋಡಿಕೊಳ್ಳುವ ಜವಾಬ್ದಾರಿಯನ್ನು ಆಕೆಯ ತವರುಮನೆಯವರದ್ದಾಗಿರುತ್ತದೆ. ಮುಂದುವರಿದು ಚಳಿಗೆ, ಮಳೆಗೆ ಏನೂ ಆಗಬಾರದೆಂದು, ಹಡೆದ ಬಾಣಂತಿ ಗಟ್ಟಿಮುಟ್ಟು ಆಗಲೆಂದು, ಮೈ ತಿಂಡಿ ನಿವಾರಣೆ ಆಗಲೆಂದು, ಅಜಿವಾನ, ಬಜ್ಜೆ, ಇಪ್ಲಿ, ಮೋಡಿ, ವಾಯುವಾಳಂಗ, ನಂಜಿನ ಚಕ್ಕೆ, ಕಟ್ಟಗರ ಓಣೆ, ಬೇವಿನ ತಪ್ಪಲು, ಅರಿಶಿಣ ಕೊಂಬು, ಔಡಲ ಎಣ್ಣೆ ಇವೆಲ್ಲ ಹಾಕಿ ಕುಚ್ಚುತ್ತಾರೆ. ಇದನ್ನೆಲ್ಲಾ ಕುದಿಸಿ ನಂತರ ಪುಡಿ ಮಾಡಿ, ೧೬ ದಿನಗಳವರೆಗೆ ಬಾಣಂತಿಗೆ ಹಚ್ಚಿಸಿ ಸ್ನಾನ ಮಾಡಿಸುತ್ತಾರೆ. ಹಾಗೆಯೇ, ಬಾಣಂತಿಗೆ ಶಕ್ತಿ ಬರಲೆಂದು ಕೊಬ್ಬರಿ, ಉತ್ತುತ್ತಿ, ಜಾಜುಕಾಯಿ, ಪತ್ರಿ, ಜಾಲಿ ಅಂಟು, ತುಪ್ಪ, ಮೆಣಸು, ಲವಂಗ, ವಾಯುವಾಳಂಗ ಇತ್ಯಾದಿಗಳನ್ನು ಹಾಕಿ ಪುಡಿ ಮಾಡಿ ದಿನಾಲು ಬೆಳಗ್ಗೆ ಮತ್ತು ಸಾಯಂಕಾಲ ತುಪ್ಪದಲ್ಲಿ ಹಾಕಿ ಬಾಣಂತಿಗೆ ಕೊಡುತ್ತಾರೆ. ಹಡೆದ ಬಾಣಂತಿಗೆ ನಿತ್ರಾಣ ಹೋಗಲೆಂದು ಶಿವಮೊಗ್ಗ ಜಿಲ್ಲೆಯ ಬೇಡರಲ್ಲಿ ಕೊಬ್ಬರಿ ಕಾರ ಕೊಡುವ ಪದ್ಧತಿ ಇದೆ. ಮಗು ಹಡೆದ ಮೂರು ದಿನದ

ಕೂಸಿಗೆ ನೀರ್ಲ್ಲಾ ಮಾಡುತ್ತಾರೆ. ನೀರ್ಲ್ಲಾ ಎಂದರೆ ಹರೆ ಪಲ್ಲೆ ಅಥವಾ ರಾಜಿಗಿರಿ ಪಲ್ಲೆ ಹಾಗೂ ಮೂರು ಬೊಗಸೆ ಹಕ್ಕಿ ಹಾಕಿ ಎಡೆ ಮಾಡಲಾಗುತ್ತದೆ ಕಾಯಿ ಬಜ್ಜಿಯನ್ನು ದಾರದಲ್ಲಿ ಕಟ್ಟಿ ೫ ಮಕ್ಕಳಿಗೆ ಕಟ್ಟಲಾಗುತ್ತದೆ. ಎಲೆ ತುಂಬನ್ನು ಸುಟ್ಟು ಕೂಸಿಗೆ ಮತ್ತು ಬಾಣಂತಿಗೆ (ಕಪ್ಪು) ಹಚ್ಚುತ್ತಾರೆ. ಗುಂಡುಕಲ್ಲು ಇಟ್ಟು ಪೂಜೆ ಮಾಡುತ್ತಾರೆ. ಆ ಸಮಯದಲ್ಲಿ ಬಾಣಂತಿ ತನ್ನ ಕೂಸನ್ನು ತೊಡೆಯ ಮೇಲೆ ಹಾಕಿಕೊಂಡಿರುತ್ತಾಳೆ ಮಾಡಿರುವ ಎಡೆಯನ್ನು ಹೊರಸಿನ ಕಾಲಿಗೆ ನಾಲ್ಕು ಮೂಲೆಗೆ ಮುಟ್ಟಿಗೆ ಮಾಡಿ ಇಡುತ್ತಾರೆ. ಪೂಜೆಯಾದ ನಂತರ ಸೂಲಗಿತ್ತಿ ಜೋಳವನ್ನು ಉಡಿಯಲ್ಲಿ ಕಟ್ಟಿಕೊಂಡು ಹೋಗುತ್ತಾಳೆ ಆ ಸಮಯದಲ್ಲಿ ಯಾರು ಮಾತನಾಡುವಂತಿಲ್ಲ. ಜೋಳವನ್ನು ಕಟ್ಟಿಕೊಂಡು ಹೋಗುವಾಗ ಮನೆಯಿಂದ ಒಳಗಿನಿಂದ ಹೊರಗಿನತನಕ ಜೋಳವನ್ನು ಉದುರಿಸಿಕೊಳ್ಳುತ್ತಾ ಹೋಗುತ್ತಾಳೆ. ಆಕೆಯಿಂದ ಒಬ್ಬರು ನೀರು ಹಂಚುತ್ತಾ ಹೋಗುತ್ತಾಳೆ. ಬ್ರಹ್ಮ ಆ ಕೂಸಿಗೆ ಹಣೆ ಬರಹವನ್ನು ಅಂದು ಬರೆಯುತ್ತಾನೆ ಎಂಬ ನಂಬಿಕೆ ಶಿವಮೊಗ್ಗ ಜಿಲ್ಲೆಯಾದ್ಯಂತ ಬೇಡರಲ್ಲಿ ಕಂಡು ಬರುತ್ತದೆ. ಯಾರಾದರೂ ಎದ್ದು ಗಲಾಟೆ ಮಾಡಿದರೆ ಅಥವಾ ಮಾತನಾಡಿದರೆ ಬ್ರಹ್ಮ ಅರ್ಧ ಹಣೆಬರಹ ಬರೆದನೆಂಬ ನಂಬಿಕೆ ಈ ಜನಾಂಗದಲ್ಲಿ ಇದೆ. ಇದಕ್ಕೂ ಮೊದಲು ಹಡೆದ ಬಾನಂತಿಯ ಹತ್ತಿರ ದೀಪವನ್ನು ಹಚ್ಚಿ ಇಟ್ಟಿರುತ್ತಾರೆ ಹಚ್ಚಿರುವ ದೀಪಾ ಹಾರಿದರೆ ಬ್ರಹ್ಮ ಹಣೆಬರಹವನ್ನು ಬರೆದನೆಂಬ ನಂಬಿಕೆ ಇವರಲ್ಲಿ ಇದೆ. ಕೂಸಿನ ಕಣ್ಣಿನ ರೆಪ್ಪೆಗೆ ಹಚ್ಚಿದ ಕಾಡಿಗೆಯನ್ನು (ಕಪ್ಪು) ತೆಗೆದುಕೊಂಡು ಬ್ರಹ್ಮ ಹಣೆಬರಹವನ್ನು ಬರೆಯುತ್ತಾನೆಂಬ ನಂಬಿಕೆಯೂ ಕೂಡ ಇವರಲ್ಲಿದೆ. ಆ ಕೂಸಿನ ಜವಳ ಮನೆ ದೇವರ ಗುಡಿಯಲ್ಲಿ ಇಳಿಸುತ್ತಾರೆ. ಆ ಮಗುವಿಗೆ ಕಿವಿ ಚುಚ್ಚುವ ಕಾರ್ಯವನ್ನು ೫ ತಿಂಗಳಲ್ಲಿ ನಡೆಸುತ್ತಾರೆ.

**ನಾಮಕರಣ**

ನಾಮಕರಣ ಮಾನವನ ಜೀವನದಲ್ಲಿ ಅವನಿಗೆ ಅಗತ್ಯವಾದ ಸಂಸ್ಕಾರಗಳಲ್ಲಿ ಪ್ರಮುಖವಾದದ್ದು ಆಗಿದೆ. ಹೊಸದಾಗಿ ಹುಟ್ಟಿದ ಮಗುವಿಗೆ ಹೆಸರಿಡುವುದು ಹಿರಿಯರಿಗೆ ಮಹತ್ವದ ವಿಷಯವಾಗಿದೆ ಶಿವಮೊಗ್ಗ ಜಿಲ್ಲೆಯ ಬೇಡ ಸಮುದಾಯದಲ್ಲಿ ತೊಟ್ಟಿಲ ಕಾರ್ಯ ಅನುಕೂಲವಾದ ಒಳ್ಳೆಯ ದಿನವನ್ನು ಗುರುತಿಸಿಕೊಂಡು ನಾಮಕರಣವನ್ನು ಮಾಡಲಾಗುತ್ತದೆ. ನಾಮಕರಣ ಕ್ರೀಯೆ ನಡೆಯುವುದು.ಮೊದಲ ಮಗು ಹುಟ್ಟಿದರೆ ತಾಯಿ ಮನೆಯಲ್ಲಿ ನಾಮಕರಣವನ್ನು ವಿಜೃಂಭಣೆಯಿಂದ ಮಾಡುತ್ತಾರೆ. ಒಂದು ತಿಂಗಳು ಅಥವಾ ೧೧ ದಿನಗಳಲ್ಲಿ ಅಥವಾ ಮೂರು ತಿಂಗಳುಗಳಲ್ಲಿ ನಾಮಕರಣವನ್ನು ಮಾಡುತ್ತಾರೆ. ಎರಡನೆಯ ಮಗು ಹುಟ್ಟಿದಾಗ ಗಂಡಿನ ಮನೆಯಲ್ಲಿ ನಾಮಕರಣವನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ಮಗುವಿನ ತಂದೆಯ ಮನೆಯಲ್ಲಿ ಇದು ಅನೇಕ ನಂಬಿಕೆ ಹಾಗೂ ಧಾರ್ಮಿಕ ವಿಧಗಳಿಂದ ಕೂಡಿರುವ ಪದ್ಧತಿಯಾಗಿದೆ. ಅಂದು ಇಡೀ ಮನೆಯನ್ನು ಸಾರಣೆ ಮಾಡಿರುತ್ತಾರೆ. ಗ್ರಾಮ ಅಥವಾ ತಾಲೂಕಿನಲ್ಲಿರುವ ಮುತ್ತೈದೆಯರು, ಸಂಬಂಧಿಕರು ಹಾಗೂ ಮಗುವಿನ ತಂದೆಯ ಬಂಧುಗಳೆಲ್ಲ ಸೇರುತ್ತಾರೆ. ನಾಮಕರಣದಂದು ತೊಟ್ಟಿಲನ್ನು ತವರು ಮನೆಯಿಂದ

ತರಲಾಗುತ್ತದೆ. ಅಂದು ಆ ಮಗುವಿನ ತಂದೆ ತೊಟ್ಟಿಲಕ್ಕೆ ಪೂಜೆ ಮಾಡಿಕೆಳಗಿಳಿಸುತ್ತಾನೆ. ತೊಟ್ಟಿಲನ್ನು ಹೊತ್ತ ಅಳಿಯನಿಗೆ ಹೊಸ ಬಟ್ಟೆಯನ್ನು ಕೊಡಲಾಗುತ್ತದೆ. ಕೇರಿಯ ಮುತ್ತೈದೆಯರು ತೊಟ್ಟಿಲನು ಕಟ್ಟಿ, ಅದರಲ್ಲಿ ಮಗುವನ್ನು ಹಾಕಿ ಜೋಗುಳವನ್ನು ಹಾಡುತ್ತಾರೆ.

ಉದಾ: ಅಂದಾಳ ಗೋಪಿ ಜೋ ಜೋ

ಅಂದಾಳ ಗೋಪಿ ಜೋ ಜೋ

ಬ್ಯಾನಿ ತಿನ್ನುತ್ತಾ, ಕೋಣೆಗೋಗುತಾ

ಜಾಣೆ, ಜಾಣೆಯರೆಲ್ಲ ಕೈಯಾ ಜಾಡಿಸುತಾ

ಇಂಥ ಮ್ಯಾಲೆ ಶ್ರೀರಾಮರ ಓದುವ ಹಲಗೆ ಜೋ ಜೋ ... ಎಂದು ಮುತ್ತೈದೆಯರು ಹಾಡುವರು. ಆ ಮಗುವಿನ ತಂದೆಯ ಅಕ್ಕ ಮಗುವಿಗೆ ಹೆಸರಿಡುತ್ತಾಳೆ. ಅದಕ್ಕಿಂತ ಮೊದಲು ತೊಟ್ಟಿಲ ಕೆಳಗೆ ಕಾಯಿ ಹೊಡೆದು ಪೂಜೆ ಮಾಡಲಾಗುತ್ತದೆ. ೫ ದಿನಸಿಯ ಗುಗ್ರಿಯನ್ನು ತೊಟ್ಟಿಲ ಕೆಳಗೆ ಎಡೆ ಹಾಕುತ್ತಾರೆ. ಆ ಕೂಸಿನ ತಂದೆಯ ಸಂಬಂಧಿಕರ ಆಪೇಕ್ಷೆಯಂತೆ ಮಗುವಿನ ನಾಮಕರಣ ನಡೆಯುತ್ತದೆ. ಬೇಡ ಜನಾಂಗದ ಪುರಾಣ ಪುರುಷರು ಸಾಂಸ್ಕೃತಿಕ ವೀರರು, ಕುಲ ದೇವತೆ, ಮನೆಯ ಹಿರಿಯರು ಹೆಸರುಗಳನ್ನು ಇಡುವುದು ಸಾಮಾನ್ಯವಾಗಿದೆ. ನಾಗರೀಕತೆಯ ಪ್ರಭಾವದಿಂದಾಗಿ ಇತ್ತೀಚಿನ ದಿನಗಳಲ್ಲಿ ಆಸ್ಪತ್ರೆಗಳಲ್ಲಿ ನಡೆಯುತ್ತದೆ. ಸಾಮಾನ್ಯವಾಗಿ ಮಗುವಿಗೆ ಮನೆಯ ದೇವರ ಅಥವಾ ಕುಲ ದೇವತೆಯ ಹೆಸರಲ್ಲದೆ ಪೂರ್ವಿಕರ ಹೆಸರುಗಳನ್ನು ಇಡುವುದು ವಾಡಿಕೆಯಲ್ಲಿದೆ. ಇತ್ತೀಚಿನ ದಿನಗಳಲ್ಲಿ ಈ ಕ್ರಮಗಳು ಬಹುಮಟ್ಟಿಗೆ ಬದಲಾಗುತ್ತಿದೆ.

**೩. ಪ್ರೌಢ ಸಂಸ್ಕಾರ**

ಹುಡುಗಿ ಕನ್ಯೆಯಾಗುವ ಪ್ರಕ್ರಿಯೆಯನ್ನ ಬುಡಕಟ್ಟು ಸಮುದಾಯಗಳು ಅತೀ ಸಂಭ್ರಮದಿಂದ ಆಚರಿಸುತ್ತಿವೆ. ಒಂದೊಂದು ಬುಡಕಟ್ಟು ಸಮುದಾಯಗಳಲ್ಲಿ ವಿಭಿನ್ನ ರೀತಿಯಲ್ಲಿ ಈ ಪ್ರೌಢ ಸಂಸ್ಕಾರ ನಡೆಯುತ್ತದೆ. ಶಿವಮೊಗ್ಗ ಜಿಲ್ಲೆಯ ಬೇಡರಲ್ಲಿ ಹುಡುಗಿ ಕನ್ಯೆಯಾಗುವ ಕ್ರಿಯೆ ಮಹಿಳೆಯರ ಬದುಕಿನ ಮಹತ್ವದ ಕ್ರಿಯೆಯಾಗಿರುತ್ತದೆ. ಹೆಣ್ಣು ಮಕ್ಕಳು ಮೈನೆರೆದಾಗ ಕೆಲವು ಸಂಪ್ರದಾಯಗಳನ್ನು ಅನುಸರಿಸುತ್ತಾರೆ. ಶಿವಮೊಗ್ಗ ಬೇಡರಲ್ಲಿ ಇದೊಂದು ವಿಶಿಷ್ಟ ಆಚರಣೆಯಾಗಿದೆ. ನೆಂಟರಿಷ್ಟರು ಆಕೆಗೆ ಬೇಕಾಗುವ ಪದಾರ್ಥಗಳನ್ನು ತಯಾರಿಸಿ ತಂದು ಕೊಡುವುದು ಉಂಟು. ಹುಡುಗಿ ಕೈಗೆ ಬಂದಿದ್ದಾಳೆ ಅಥವಾ ಕೈನೆರವಿಗೆ ಬಂದಿದ್ದಾಳೆ ಎಂದರೆ, ಮೈನೆರೆದಿದ್ದಾಳೆ ಎಂದು ಅರ್ಥ. ಹೆಣ್ಣಿಗೆ ಮನೆಯ ಒಳಗಡೆ ಸ್ನಾನ ಮಾಡಿಸುವುದಿಲ್ಲ. ಋತುವಾದ ಹೆಣ್ಣಿಗೆ ಸ್ನಾನ ಮಾಡಿಸಿದ ನಂತರ ನೆರೆ-ಹೊರೆಯವರು ಹೆಂಗಸರು ಆಕೆಗೆ ಆರತಿಯನ್ನು ಎತ್ತುವರು. ಒಂದು ಹುಡುಗಿ ಋತುಮತಿಯಾದರೆ ಶಿವಮೊಗ್ಗ ನಾಯಕರಲ್ಲಿ ಆಯಾ ಮನೆತನದಲ್ಲಿ ೧೬ ದಿನಗಳ ಕಾಲ ಹೊಲಿಮನೆ ಇರುತ್ತದೆ. ಅಂದರೆ, ಮೈಲಿಗೆಯಿರುತ್ತದೆ. ಪ್ರತಿದಿನ ಸುಮಂಗಲೆಯರು ಆಕೆಗೆ ಸ್ನಾನವನ್ನು ಮಾಡಿಸುತ್ತಾರೆ. ಹುಡುಗಿಯ ಸೋದರ ಮಾವ ಋತುಮತಿಯಾದ ಹುಡುಗಿಗೆ ಬೆಳ್ಳಿ-ಬಂಗಾರ, ರೇಷ್ಮೆ ಸೀರೆ,

ಕುಬುಸ, ಉಡಿಯಕ್ಕಿ, ಬೆಲ್ಲ, ಉತ್ತುತ್ತಿ, ಒಣಕೊಬರಿ, ಅಂಟು-ದ್ರಾಕ್ಷಿ, ಗೋಡಂಬಿ ತರುತ್ತಾನೆ. ೧೬ ದಿನಗಳವರೆಗೆ ಹುಡುಗಿಗೆ ಅಂಟಿನ ಹುಂಡಿ ಮತ್ತು ಎಳ್ಳಿನ ಹುಂಡಿಯನ್ನು ಕೊಡುತ್ತಾರೆ. ಋತುಮತಿಯಾದ ಸಮಯ, ಘಳಿಗೆ ಒಳ್ಳೆಯದಿದ್ದರೆ ಸಂತೋಷ ಪಡುತ್ತಾರೆ. ಒಂದು ವೇಳೆ ದೋಷ ಕಂಡುಬಂದರೆ, ಋತುಮತಿಯಾದ ಹುಡುಗಿಯಿಂದ ದೋಷ ನಿವಾರಣೆಗಾಗಿ ದಾನ ಮಾಡುತ್ತಾರೆ. ಈ ಸಮಯದಲ್ಲಿ ಅವಳು ಕೆಲಸವನ್ನು ಮಾಡುವಂತಿಲ್ಲ. ಹಾಗೂ ಬೇರೆಯವರ ಜೊತೆ ಸೇರುವ ಆಗಿಲ್ಲ. ಋತುಮತಿಯಾದ ನಂತರ ೧೬ ದಿನ ಪ್ರತ್ಯೇಕವಾಗಿಡುತ್ತಾರೆ. ಪ್ರತಿದಿನ ಹೆಂಗಸರು ಬಂದು ಆಕೆಯನ್ನು ವಿಚಾರಿಸುವರು. ಶಿವಮೊಗ್ಗ ಜಿಲ್ಲೆಯ ಬೇಡರ ಪ್ರೌಢ ವ್ಯವಸ್ಥೆಯ ಸಂಪ್ರದಾಯಗಳು ಹಿಂದಿನಿಂದ ಇಂದಿನವರೆಗೆ ನಿರಂತರವಾಗಿ ನಡೆದುಕೊಂಡು ಬಂದಿವೆ. ಹೀಗಾಗಿ ಆಧುನಿಕತೆಯ ಗಾಳಿಯು ಬೀಸುತ್ತಿರುವುದರಿಂದ ಪ್ರೌಢವಸ್ಥೆಯ ಕೆಲವು ಪದ್ಧತಿಗಳು ಬಿಟ್ಟು ಹೋಗುತ್ತಿವೆ. ಋತುಮತಿಯಾದ ಹುಡುಗಿಯನ್ನು ೧೬ ದಿನಗಳವರೆಗೆ ಕೂಡಿಸುತ್ತಾರೆ. ಕೊನೆಯ ದಿನ ಆ ಹುಡುಗಿಯನ್ನು ಕೂಡಿಸಿ ನಮ್ಮ ಹುಡುಗಿ ದೊಡ್ಡವಳಾಗಿದ್ದಾಳೆ ಎಬ್ಬಿಸುತ್ತೇವೆ ಎಂದು ಸಂಬಂಧಿಕರನ್ನು ಕರೆಯುತ್ತಾರೆ. ಆಂದಿನಿಂದ ಆ ಹುಡುಗಿಗೆ ದೊಡ್ಡವಳು ಎಂದು ಕರೆಯುತ್ತಾಳೆ. ಅವಿವಾಹಿತೆಯಾದಲ್ಲಿ ಋತುಮತಿಯಲ್ಲ ಆರು ತಿಂಗಳಲ್ಲಿ ಅಥವಾ ಒಂದು ವರ್ಷದೊಳಗೆ ವಿವಾಹ ಕಾರ್ಯವನ್ನು ನೆರವೇರಿಸುತ್ತಾರೆ. ಒಂದು ವೇಳೆ ಮದುವೆಯಾಗಿದ್ದರೆ ದೊಡ್ಡವಳಾದ ದಿನ ಆಕೆಯ ಗಂಡನ ಅತ್ತಿಗೆ ಬಣ್ಣವನ್ನು ಹಚ್ಚುವ ಪದ್ಧತಿ ಇದೆ. ಅಂಗಿಗೆ ಬಣ್ಣವನ್ನು ಹಚ್ಚಿದರೆ ಆತನ ಹೆಂಡತಿ ದೊಡ್ಡವಳಾಗಿದ್ದಾಳೆ ಎಂದು ಅರ್ಥ. ದೊಡ್ಡವಳಾದ ೧೬ನೆಯ ದಿನಕ್ಕೆ ಗಂಡಿನವರು ಬರಬಹುದು ದೊಡ್ಡವಳಾದ ಹುಡುಗಿಯ ಪಕ್ಕದಲ್ಲಿ ಚಿಕ್ಕ ಹುಡುಗಿಯನ್ನು ಕೂರಿಸುತ್ತಾರೆ. ಆಕೆಗೆ ಮದುಗುಡುಮ ಎಂದು ಕರೆಯುತ್ತಾರೆ. ದೃಷ್ಟಿ ನೇರವಾಗಿ ದೊಡ್ಡವಳಾದ ಹುಡುಗಿಗೆ ತಾಗದಿರಲೆಂದು ಈ ವ್ಯವಸ್ಥೆಯನ್ನು ಮಾಡಿರುತ್ತಾರೆ. ಋತುಮತಿಯಾದ ಹುಡುಗಿಯನ್ನು ಕೂಡಿಸಿದಾಗಿನಿಂದ ಎಬ್ಬಿಸುವವರೆಗೆ ಆ ಹುಡುಗಿಯ ಸಂಬಂಧಿಕರು ಯಾವ ದೇವಸ್ಥಾನಗಳಿಗೂ, ಶುಭ ಕಾರ್ಯಗಳಿಗೆ ಹೋಗುವುದಿಲ್ಲ. ಹೊಲಿ ಮನೆ ಎಂದು ಬಿಡುತ್ತಾರೆ. ೧೬ ದಿನಗಳವರೆ ದೇವರಿಗೆ ಪೂಜೆ ಪುನಸ್ಕಾರಗಳಿಲ್ಲ. ಮೈನೆರೆತ ಹುಡುಗಿಯನ್ನು ೧೬ ದಿನಗಳವರೆಗೆ ರಾತ್ರಿ ಸಮಯದಲ್ಲಿ ಕೂಡಿಸುವ ಪದ್ಧತಿ ಇದೆ. ನಾಗರೀಕತೆಯ ಪ್ರಭಾವದಿಂದಾಗಿ ಈ ಜನಾಂಗದಲ್ಲಿಯೂ ಇತರೆ ಜನಾಂಗದವರ ಪದ್ಧತಿಯನ್ನು ಅನುಸರಿಸುವುದನ್ನು ಕಾಣಬಹುದಾಗಿದೆ. ಮನೆಯವರನ್ನ ಕರೆದು ಕುಂಕುಮ, ಅರಿಶಿಣ, ಅಡಿಕೆ ಮತ್ತು ಎಲೆಯನ್ನು ಕೊಟ್ಟು ಕಳುಹಿಸುವರು. ದಿನಾಲೂ ಶೋಭನಾಗಿತ್ತಿಯರು ಸೋಭಾನಾ ಪದಗಳನ್ನು ಹಾಡುತ್ತಾರೆ. ದಿನಾಲು ಪ್ರತಿಯೊಂದು ಮನೆಯ ಸಂಬಂಧಿಕರು ಬರುತ್ತಿರುತ್ತಾರೆ. ಬಂದಂತಹ ಎಲ್ಲರಿಗೂ ಅಡಿಕೆ ಮತ್ತು ಎಲೆಯನ್ನು ಕೊಟ್ಟು ಕಳುಹಿಸುತ್ತಾರೆ. ಅಲ್ಲದೇ, ಮುತ್ತೈದೆ ಮಹಿಳೆಯರು ಕಳಸವನ್ನು ಬೆಳಗುತ್ತಾರೆ. ಬೆಳಗುವಾಗ ಕಳಸದ ಕೆಳಗೆ ಇಟ್ಟಿರುವ ಮಣೆಯನ್ನು ತೆಗೆದು ಒಗಟು ಹೇಳಲು ಬಯಸುತ್ತಾರೆ. ಕಳಸ ಬೆಳಗಿದ ಮುತ್ತೈದೆಯರು ಗಂಡನ ಮೇಲೆ ಒಗಟುಗಳನ್ನು ಹೇಳುತ್ತಾರೆ.

ಉದಾ: ಅತ್ತೆ ಹತ್ತಿ ಹೂವ
ಮಾವ ಮಲ್ಲಿಗೆ ಹೂವ
ನಾನು ಸಾವಂತಿಗೆ ಹೂವ

ಸಾವಂತಿಗೆಯ ಹೂವಿನ ಮೇಲೆ ಸುಳಿದಾಡಿಕೊಂತಾ ಬರುತ್ತಾನೆ.. ಎಂದು ತಮ್ಮ ತಮ್ಮ ಗಂಡನ ಮೇಲೆ ಹೇಳುತ್ತಾರೆ. ಹೆಣ್ಣು ಮಗಳು ಮೈನೆರೆದ ಸಂದರ್ಭದಲ್ಲಿ ಐದು ಜನ ಮುತ್ತೈದೆಯರು ಆ ದಿನ ಎಣ್ಣೆ ನೀರು ಹಾಕಿ ಸ್ನಾನ ಮಾಡಿಸುತ್ತಾರೆ. ಅಗಸರು ಮಡಿ ಮಾಡಿ ತಂದು ಕೊಟ್ಟ ಬಟ್ಟೆಗಳನ್ನು ಉಡಲು ಕೊಡುತ್ತಾರೆ. ಸ್ನಾನದ ನಂತರ ಆಕೆ ದಿನನಿತ್ಯದ ಸೀರೆ ಉಡಬಹುದು. ೫ ದಿನಕ್ಕೆ ಮಡಿವಾಳರಿಗೆ ಸೇರು ಅಕ್ಕಿ, ಅಚ್ಚುಬೆಲ್ಲ, ರವಿಕೆ, ಕಣ, ಕೊಬ್ಬರಿ ಇತ್ಯಾದಿಗಳನ್ನು ಮಡಿವಾಳರಿಗೆ ಕೊಡುತ್ತಾರೆ. ಮೈನೆರೆದ ಹುಡುಗಿಗೆ ಉತ್ತುತ್ತಿ, ಕಡಲೆಪುಡಿ, ದ್ರಾಕ್ಷಿ, ಬಾಳೆಹಣ್ಣು, ಕೊಬ್ಬರಿ, ಕಡಲೆ, ಹೂವು, ಹಣ್ಣು ಇವುಗಳನ್ನು ಮುತ್ತೈದೆಯರು ಉಡಿ ತುಂಬುತ್ತಾರೆ. ಮೈನೆರೆದರೆ ೧೬ ದಿನದಲ್ಲಿ ಸಂಬಂಧಿಕರೆಲ್ಲರಿಗೂ ಊಟ ಮಾಡಿಸಲಾಗುತ್ತದೆ. ಋತುಮತಿಯಾದ ಹುಡುಗಿ ಮದುವೆಯಾಗಿದ್ದರೆ, ಈ ವಿಷಯವನ್ನು ಸಾಮಾನ್ಯವಾಗಿ ಆಳಿನ ಮೂಲಕ ಗಂಡನ ಮನೆಗೆ ಸುದ್ಧಿಯನ್ನು ತಿಳಿಸುತ್ತಾರೆ. ಹೆಣ್ಣಾದ ಹುಡುಗಿಗೆ ೧೬ ದಿನ ಪ್ರತಿ ದಿನ ಎಳ್ಳು, ಕೊಬ್ಬರಿ, ತಂಬಿಟ್ಟು ಮೊದಲಾದ ತಿನಿಸುಗಳನ್ನೇ ಹೆಚ್ಚಾಗಿ ಕೊಡುತ್ತಾರೆ. ಕೆಲ ದಿನ ಬರೀ ಅನ್ನ ತುಪ್ಪವನ್ನು ಉಣಿಸುತ್ತಾರೆ. ಅದು ಆ ಸಂದರ್ಭದಲ್ಲಿ ಆಕೆಯ ಶರೀರದ ಬೆಳವಣಿಗೆಗಾಗಿ ಹಾಗೂ ನಡುವು ಭದ್ರತೆಗೆ ಸಹಾಯಕವೆಂದು ಭಾವಿಸುತ್ತಾರೆ.

**೪. ಮದುವೆ**

ಭಾರತೀಯರಲ್ಲಿ ಮದುವೆ ಪವಿತ್ರವಾದ ಬಂಧನ. ಮದುವೆ ಎನ್ನುವುದು ಕೇವಲ ಲೈಂಗಿಕ ಕ್ರಿಯೆಗೆ ಮಾತ್ರ ಸೀಮಿತವಾಗಿಲ್ಲ. ಅದು ತನ್ನ ಇಡೀ ಸಮುದಾಯವನ್ನು ಭವಿಷ್ಯದ ಗಮನಕ್ಕೆ ಒಯ್ಯುವ ಮಹತ್ವದ ಬಂಧವೂ ಆಗಿರುತ್ತದೆ. "ವಿವಾಹ ವ್ಯಕ್ತಿಗೆ ಸಾಮಾಜಿಕವಾಗಿ ಹಾಗೂ ಧಾರ್ಮಿಕವಾಗಿ ಹಲವು ಜವಾಬ್ದಾರಿ, ವಿಶೇಷ ಸ್ಥಾನಮಾನಗಳನ್ನು ಗಳಿಸಿ ಕೊಡುತ್ತದೆ. ಮದುವೆ ಶಾಸ್ತ್ರದಲ್ಲಿ ನೇರ ಭಾಗವಹಿಸುವವರಿಗೆ ಸ್ವತಃ ಕ್ರಮಬದ್ಧ ವಿವಾಹವಾಗಿರಬೇಕು. ಆಸ್ತಿ ಪರಿಕಲ್ಪನೆಯ ಹಿನ್ನೆಲೆಯಲ್ಲೂ ಕ್ರಮಬದ್ಧ ವಿವಾಹಕ್ಕೆ ಹೆಚ್ಚಿನ ಮನ್ನಣೆ ಉಂಟು. ಹೀಗೆ ವ್ಯಕ್ತಿಯ ಬಾಳಿನಲ್ಲಿ ಒಂದು ಪ್ರಮುಖ ಘಟ್ಟವಾದ ವಿವಾಹ ಪ್ರಾರಂಭಕ್ಕೆ ಒಂದು ಸಂಸ್ಕಾರವೇ ಆಗಿದ್ದರೂ, ಬರಬರುತ್ತಾ ಅದರಲ್ಲಿ ಅನೇಕ ನಂಬಿಕೆ, ಉದ್ದೇಶ, ಆಚರಣೆಗಳು ಸೇರಿ ಇಂದಿಗೂ ಅದೊಂದು ಸಂಪ್ರದಾಯ, ಪದ್ಧತಿಯಾಗಿ ಕಟ್ಟುಪಾಡು ಆಗಿ ಮಾರ್ಪಟ್ಟಿದೆ"(ಡಾ. ಟಿ. ಗೋವಿಂದರಾಜು, ೧೯೯೩-೯೬).

ಸಾಮಾನ್ಯವಾಗಿ ಬುಡಕಟ್ಟು ಸಮುದಾಯಗಳು ತಮ್ಮ ವಂಶದ ಮುಂದುವರಿಕೆಗಾಗಿ ಹೆಚ್ಚುದಿನ ಮಹತ್ವವನ್ನು ಕೊಡುತ್ತವೆ. ಇದಕ್ಕೆ ಶಿವಮೊಗ್ಗ ಬೇಡ ಸಮುದಾಯ ಹೊರತಾಗಿಲ್ಲ. ಶಿವಮೊಗ್ಗ ಬೇಡರ ಸಂಸ್ಕೃತಿಯ ಮೌಲಿಕ ಅಂಶಗಳಲ್ಲಿ ಮದುವೆ ಸಂಪ್ರದಾಯ ತುಂಬಾ ಪ್ರಮುಖವಾಗಿದೆ. ಏಕೆಂದರೆ, ಅವರ ಮದುವೆಯ ವಿಧಿ ವಿಧಾನಗಳು, ಆಚರಣೆಗಳು ಇನ್ನುಳಿದವರಿಗಿಂತ ತುಂಬಾ

ವಿಶಿಷ್ಟವಾಗಿವೆ. ಬುಡಕಟ್ಟಿನ ಬೇಡರು ಶತಮಾನಗಳಿಂದ ತಮ್ಮ ಸಂಪ್ರದಾಯ, ಆಚರಣೆಗಳನ್ನು ಉಳಿಸಿಕೊಂಡು ಬಂದಿರುವುದು ಅವರ ಸಂರಕ್ಷಣೆಯ ಸಂಕೇತವೆಂದೇ ಹೇಳಬೇಕಾಗುತ್ತದೆ. ಮದುವೆಗೆ ಸಂಬಂಧಿಸಿದಂತೆ ಶಿವಮೊಗ್ಗ ಬೇಡರಲ್ಲಿ ತುಂಬಾ ವಿಶಿಷ್ಟ ಆಚರಣೆಗಳು ಇವೆ. ಇವರ ಮದುವೆ ಇನ್ನುಳಿದವರಂತೆ ಒಂದೇ ದಿನದಲ್ಲಿ ಮುಗಿದು ಹೋಗುವ ಸಮಾರಂಭವಲ್ಲ. ಪೂರ್ವದಲ್ಲಿ ಅವರಲ್ಲಿ ೫ ದಿನಗಟ್ಟಲೇ ಈ ಸಮಾರಂಭ ನಡೆಯುತ್ತಿತ್ತು. ಈಗ ಒಂದೆರೆಡು ದಿನಗಳಲ್ಲಿ ನೆಡೆಯುತ್ತಿದೆ. ಮದುವೆ ಎಂದರೆ ಈ ಜನರಿಗೆ ಒಂದು ಬಗೆಯ ಎಲ್ಲಿಲ್ಲದ ಉತ್ಸಾಹ, ಸಂಭ್ರಮ ಒಂದು ಕಾಲಕ್ಕೆ ವಧು-ವರರ ತಂದೆ ತಾಯಿಗಳು ಮದುವೆಯನ್ನು ನಿರ್ಧರಿಸುತ್ತಿದ್ದರು. ಮದುವೆಯ ಪೂರ್ವದಲ್ಲಿ ವಧುವರರ ಪರಸ್ಪರ ನೋಡುವುದು, ಭೇಟಿಯಾಗುದು ಕೂಡ ನಿಷಿದ್ಧವಿತ್ತು. ಇನ್ನೂ ದೂರದ ಊರಗಳೆಂದರೆ. ದಾವಣಗೆರೆ ಹರಿಹರಗಳಲ್ಲಿ ಮದುವೆಗೆ ಸಂಬಂಧ ಬೆಳೆಸಿರುವುದು ಕಂಡು ಬರುತ್ತದೆ. ಆದರೂ ಹೆಚ್ಚಾಗಿ ಮದುವೆಯ ಸಂಬಂಧಗಳು ಕಂಡು ಬರುವುದು ಶಿವಮೊಗ್ಗ ತಾಲೂಕಿನ ಸುತ್ತ ಮುತ್ತಲಿನ ಹಳ್ಳಿಗಳಲ್ಲಿ ಮಾತ್ರ, ದಿಬ್ಬಣೆಗರನ್ನು ಸಂಭ್ರಮದಿಂದ ಸ್ವಾಗತಿಸುವ, ಎದರುಗೊಳ್ಳುವ ಕ್ರೀಯೆಯಿಂದ ಪ್ರಾರಂಭವಾಗಿ ಒಳಕಲ್ಲು ಪೊಜೆ, ಬೀಸುವ ಕಲ್ಲು ಪೊಜೆ, ಹಸೆ ಬರೆಯುವುದು,, ಕಳಸ ತುಂಬುವುದು, ಅರಿಶಿನ ಶಾಸ್ತ್ರ, ಸುರಗಿ, ಸುತ್ತುವುದು, ಧಾರೆಶಾಸ್ತ್ರ, ಲಗ್ನ ಪತ್ರಿಕೆಕಟ್ಟುವ ಕ್ರಿಯೆ ವಿವಿಧ ಆಚರಣೆಗಳಿದ್ದು, ಪ್ರತಿಯೊಂದು ಸಂದರ್ಭದಲ್ಲಿ ಹಾಡುಗಳಂಟು. ಇವುಗಳನ್ನು ಸೋಬಾನೆ ಪದಗಳೆಂದು ಕರೆಯುವರು. ನಾಯಕ ಜನಾಂಗದಲ್ಲಿ ಹಲವಾರು ಬೆಡಗುಗಳಿವೆ  ಗಂಡು ಮತ್ತು ಹೆಣ್ಣು ಒಂದೇ ಬೆಡಗು ಹೊಂದಿದ್ದರೆ ಮದುವೆ ಮಾಡುವಂತಿಲ್ಲ. ಅಣ್ಣ-ತಂಗಿಯರಾಗುತ್ತಾರೆ. ಅದಕ್ಕಾಗಿ ಹೆಣ್ಣು ಗಂಡಿನ ಬೆಡಗುಗಳು ಬೇರೆ ಬೇರೆಯಾಗಿರುತ್ತವೆ. ಆಗಿದ್ದರೆ ಮಾತ್ರ ಮದುವೆಯ ಸಂಬಂಧ ಬೆಳೆಯುತ್ತದೆ. ಶಿವಮೊಗ್ಗ ಜಿಲ್ಲೆಯ ಬೇಡ ಬೇಡರ ಬೆಡಗುಗಳಲ್ಲಿ  ಉದಾಹರಣೆ : ೧.ಅತ್ತಿಕಂಕಣ ೨. ಅನಾಲರು ೩. ಅಂಕೆಲರು ೪. ಅನ್ಯಾವರು ೫. ಅಕ್ಕಲೂರು ಬುಟಕ ಲವರು ೬. ಅಗಸ್ತ್ಯ ೭. ಅಜ್ಜಮುತ್ತಿಯವರು ೮. ಅಜ್ಜಡ್ಲೋರು ೯. ಅಜ್ಜ ಪಲ್ಲೋರು ೧೦. ಅಂದರದವರು ೧೧. ಅರಕೋರು ೧೨. ಅನಂದರು ೧೩. ಅಲಕತ್ತು ಬುಟಕಲವರು ೧೪. ಅಂಗುಮೋಲರು ೧೫. ಅವುಲೋರ್ಲು ೧೬. ಅಚರ್ಲವರು ೧೭. ಇಮ್ಮಳ್ಳು ೧೮. ಈರಗಾರ ೧೯. ಈಟಿಯವರು ೨೦. ಉರಿಶಿಂಗರು ೨೧. ಉದ್ದಲೋರು ೨೨. ಎನುಮಲವರು ೨೩. ಎಕ್ರಪೋತಲೋರು ೨೪.ಎಮ್ಮೋಲವರು ೨೫. ಎಕ್ಕೇಲರು ೨೬. ಎರ್ರಿಸ್ವಾಮಿ ೨೭. ಏಳುಬೆಟ್ಟದವರು ೨೮. ಓತಲವರು ೨೯. ಓಬನಾಯಕ ೩೦. ಕುರ್ತೀರ್ ೩೧. ಮಳಲರು ೩೨. ಗೋಸಲರು  ಶಿವಮೊಗ್ಗ ಬೇಡರಲ್ಲಿ ಹೊಸದಾಗಿ ಮದುವೆ ಸಂಬಂಧವನ್ನು ಬೆಳೆಸುವ ಎರಡು ಕುಟುಂಬಗಳು ಪರಸ್ಪರ ಹೆಣ್ಣು ಕೊಟ್ಟುಕೊಳ್ಳಬಹುದು. ಈ ಪದ್ಧತಿಗೆ ಹೆಣ್ಣು ಕೊಟ್ಟು ಹೆಣ್ಣು ತರುವುದು ಎನ್ನುವರು. ಮೊದಲನೆಯ ಹೆಂಡತಿ ಮರಣ ಹೊಂದಿದರೆ ಅವಳ ತಂಗಿಯನ್ನು ಮದುವೆಯಾಗಬಹುದು. ಹೆಣ್ಣು ಮಕ್ಕಳನ್ನು ಋತುಮತಿಯಾಗುವ ಅಥವಾ ಮದುವೆ ಮಾಡುವುದು ನಿಧಾನವಾಗುತ್ತದೆ. ಬಹುಪತ್ನಿತ್ವಕ್ಕೆ ಅವಕಾಶವಿರುವುದಿಲ್ಲ ವರನಾದವನು

ತನ್ನ ಅಕ್ಕನ ಮಗಳನ್ನು ಮದುವೆಯಾಗಬಹುದು. ಹಿರಿಯ ಅಣ್ಣನ ಹೆಂಡತಿಯನ್ನು ತಾಯಿಯ ಸಮವೆಂದು ಗೌರವಿಸುತ್ತಾರೆ. ಮದುವೆಯ ಮಾತುಕತೆಯನ್ನು ಹೆಣ್ಣಿನ ಮನೆಯಲ್ಲಿ ಮಾಡಲಾಗುತ್ತದೆ. ಪುರೋಹಿತರು ಅಥವಾ ಜಂಗಮರಲ್ಲಿಗೆ ಹೋಗಿ ವಧು ವರರ ಹೆಸರಿನ ಮೇಲೆ ಸಾಲವಳಿ ಕೇಳಿ ಸಾಲವಳಿ ಕೂಡಿ ಬಂದರೆ ಮದುವೆಗೆ ಒಪ್ಪಿಕೊಳ್ಳುತ್ತಾರೆ. ಮನೆಯ ಹಿರಿಯ ಮಗನಿಗೆ ಮೊದಲು ಮದುವೆ ಮಾಡುವ ಪರಂಪರೆಯನ್ನು ನಾಯಕರಲ್ಲಿ ಕಾಣುತ್ತೇವೆ. ಒಂದು ವೇಳೆ ಕಿರಿಯ ಮಗನಿದ್ದಾಗ ಅವನನ್ನು ಹಾಗೆಯೇ ಬಿಟ್ಟು ಹಿರಿಯ ಮಗನ ಮದುವೆ ಮಾಡುವಂತಿಲ್ಲ. ಸುರುಗಿಯಲ್ಲಿ ಕಿರಿಯ ಮಗನನ್ನು ಕೂಡಿಸಿ ಅರಿಶಿಣ ಹಚ್ಚಿ ಇತ್ಯಾದಿ ಸಂಪ್ರದಾಯದ ಪ್ರಕಾರ ಸುರಿಗಿ ನೀರನ್ನು ಮೈಗೆ ಹಾಕಿದ ನಂತರ ಹಿರಿಯ ಮಗನು ಉಳಿದ ಮದುವೆ ಕೆಲಸ ಕಾರ್ಯಗಳಲ್ಲಿ ನಿರತನಾಗಬಹುದು. ಏಕೆಂದರೆ, ಕಿರಿಯ ಮಗ ಕೊನೆ ಆದಂತೆ ಎಂಬ ನಂಬಿಕೆ ಕೂಡ ಅವರಲ್ಲಿ ಇದೆ. ಮದುವೆಯಾಗುವ ವ್ಯಕ್ತಿ ಇಲ್ಲಿಯ ಬೇಡ ಜನಾಂಗದ ಸಂಪ್ರದಾಯದ ಪ್ರಕಾರ ಮುದ್ರೆಯಾಕಿಸಿಕೊಂಡಿರಬೇಕು. ಮುದ್ರೆಯಾಕಿಸಿಕೊಂಡ ನಂತರವೇ ಮದುವೆಯಾಗಬೇಕೆಂಬ ಸಂಪ್ರದಾಯ ಮೊದಲಿನಿಂದಲೂ ಇದೆ. ಮುದ್ರೆಯನ್ನು ಹೆಚ್ಚಾಗಿ ಗಂಡು ದೇವರ ಗುಡಿಯಲ್ಲಿ ಹಾಕಿಸುತ್ತಾರೆ. ಅದು ಆಂಜನೇಯನ ಗುಡಿಯಲ್ಲಿ ತಮ್ಮ ತಮ್ಮ ಮನೆತನದ ಮನೆದೇವರ ಗುಡಿಗಳಲ್ಲಿಯೂ ಕೂಡ ಮುದ್ರೆಯನ್ನು ಹಾಕಿಸುವ ಪದ್ಧತಿಯೂ ಇದೆ. ಹೆಚ್ಚಾಗಿ ಶಿವಮೊಗ್ಗ ಬೇಡ ಜನಾಂಗದ ಮನೆ ದೇವರೆಂದರೆ ಆಂಜನೇಯ. ಆಂಜನೇಯ ಸ್ವಾಮಿ ಗುಡಿಯಲ್ಲಿ ಮುದ್ರೆಯನ್ನು ಹಾಕಿಸುತ್ತಾರೆ. ಎರಡು ಕೈಗಳಿಗೆ ಮುದ್ರೆಯನ್ನು ಹಾಕಿಸಿದ ನಂತರವೇ ಮದುವೆಯ ಶಾಸ್ತ್ರಕ್ಕೆ ಸಿದ್ಧರಾಗುತ್ತಾರೆ. ಮುದ್ರೆ ಹಾಕಿಸದೆ ಇದ್ದರೆ ಅಂತಹವರು ಮದುವೆ ಶಾಸ್ತ್ರಕ್ಕೆ ಒಳಪಡುವುದಿಲ್ಲ. ಒಂದು ಕೈಗೆ ಶಂಖ ಇನ್ನೊಂದು ಕೈಗೆ ಜಾಗಟೆ (ಚಕ್ರ)ಇವು ಮುದ್ರೆ ಗುರ್ತುಗಳು ಈ ಮದ್ರೆಯನ್ನು ಚಿಕ್ಕ ವಯಸ್ಸಿನಲ್ಲಿಯೂ ಕೂಡ ಹಾಕಬಹುದು. ಅಥವಾ ಒಂದು ವೇಳೆ ಚಿಕ್ಕ ವಯಸ್ಸಿನಲ್ಲಿ ಆಗದೆ ಹೋದರೆ ಮದುವೆ ಸಂದರ್ಭ ಹತ್ತಿರ ಬಂದಾಗ ಮುದ್ರೆಯನ್ನು ಹಾಕಿಸುತ್ತಾರೆ. ಈ ಸಂಪ್ರದಾಯ ಶಿವಮೊಗ್ಗ ಬೇಡರಲ್ಲಿ ಇಂದಿಗೂ ಜೀವಂತವಾಗಿದೆ. ಮೊದಮೊದಲು ಬೇಡರ ಮದುವೆ ಪದ್ಧತಿ ಸರಳವಾಗಿದ್ದು ಕ್ರಮೇಣ ಕೆಲ ಆಚರಣೆಗಳನ್ನು ರೂಢಿಸಿಕೊಂಡು ಬೆಳದಿದೆ. ಕಾಲಾಂತರದಲ್ಲಿ ನಾಗರೀಕತೆಯ ಪ್ರಭಾವಕ್ಕೆ ಒಳಗಾಗಿರುವುದನ್ನು ಕಾಣುತ್ತೇವೆ. ಹೆಣ್ಣಿನ ಮನೆಗೆ ಹೋದ ಸಂದರ್ಭದಲ್ಲಿ ಆತೀಥ್ಯ ನಡೆಯುತ್ತದೆ. ನಿಶ್ಚಿತಾರ್ಥ ಆಗುವವರೆಗೆ ಅಲ್ಲಿ ಊಟವನ್ನು ಮಾಡುವಂತಿಲ್ಲ. ವಿವಾಹದ ನಿರ್ದಿಷ್ಟ ಕ್ರಿಯೆ ಉಡಿ ತುಂಬುವ ಕಾರ್ಯದಿಂದ ಆರಂಭವಾಗುತ್ತದೆ. ಹೆಣ್ಣನ್ನು ತಮ್ಮದೆಂದು ನಿಶ್ಚಯ ಮಾಡಿಕೊಳ್ಳುತ್ತಾರೆ. ಗಂಡಿನ ಮನೆಯವರು ನಿಶಿತಾರ್ಥಕ್ಕಾಗಿ ಹೆಣ್ಣಿನ ಮನೆಗೆ ಹೋಗುವ ಪದ್ಧತಿ ಇದೆ. ಇಳೆವು ಎಂಬ ಶಾಸ್ತ್ರ ದೇವರ ಗುಡಿಯ ಮುಂದೆ ನಡೆಯುತ್ತದೆ. ದಾಸಯ್ಯನು ಗಂಡು ಮತ್ತು ಹೆಣ್ಣಿನ ಯಜಮಾನರ ಸಮ್ಮುಖದಲ್ಲಿ ಇಳಿವು ಒಡೆಯುತ್ತಾನೆ. ಇಂತಹವರ ಮಗ ಮನೆತನಕ್ಕೆ ಕೊಡಲಾಗಿದೆ ಎಂದು ಹೇಳುವನು. ನಂತರ ಶಂಖವನ್ನು ಊದಿ ಜಾಗಟೆ ಭಾರಿಸುತ್ತಾನೆ. ಮದುವೆ ಹೂಡಿದ್ದೇವೆ ಎಂಬುದಕ್ಕೆ

ವಳ್ಳಕ್ಕಿ ಪಾಡುವುದು ಎಂದು ಕರೆಯುತ್ತಾರೆಎ. ಈ ವಳ್ಳಕ್ಕಿ ಪಾಡುವ ಪದ್ಧತಿ ಶಿವಮೊಗ್ಗ ಜಿಲ್ಲೆಯ ಬೇಡರಲ್ಲಿ ಬಳಕೆಯಲ್ಲಿದೆ. ಮದುವೆಯನ್ನು ೯ ಅಥವಾ ೧೫ ದಿನ ಇದೆ ಎಂದಾಗ ದೇವರ ಗುಡಿಯಲ್ಲಿ ವಳ್ಳಕ್ಕಿಯನ್ನು ಪಾಡುತ್ತಾರೆ. ವಳ್ಳಕ್ಕಿ ಪಾಡುವುದು ಎಂದರೆ ಬೀಸುವ ಕಲ್ಲಿನ ಪೂಜೆ, ವಳ್ಳು ಹಾಗೂ ಒನಕೆಯ ಪೂಜೆ ಮಾಡಿದ ನಂತರ ಸುಮಾರು ೫ ಕೆ.ಜಿ. ಭತ್ತವನ್ನು ವಳ್ಳಿನಲ್ಲಿ ಹಾಕಿ ೫ ಜನ ಐಲುಗಿತ್ತಿಯರು ಒನಕೆಯಿಂದ ಕುಟ್ಟುತ್ತಾರೆ ಈ ಪದ್ಧತಿಗೆ ವಳ್ಳಕ್ಕಿ ಪಾಡುವುದು ಎಂದು ಕರೆಯುತ್ತಾರೆ. ಐಲುಗಿತ್ತಿಯರು ಮದುವೆ ಕಾರ್ಯವನ್ನು ನಡೆಸುವರು. ವಳ್ಳಕ್ಕಿ ಪಾಡುವ ಸಂದರ್ಭದಲ್ಲಿ ಮನೆಗೊಬ್ಬರಂತೆ ಯಜಮಾನರು ಉಪಸ್ಥಿತರಿರುತ್ತಾರೆ. ವಳ್ಳಕ್ಕಿ ಪಾಡಿದ ಅಕ್ಕಿಯನ್ನೇ ಅರಿಶಿಣ ಕುಂಕುಮ ಹಚ್ಚಿ ತಾಳಿಯ ಸಂದರ್ಭದಲ್ಲಿ ಅಕ್ಷತೆಗೆ ಕೊಡುತ್ತಾರೆ. ಮದುವೆ ಬಟ್ಟೆ ಕೊಳ್ಳಲು ಹೆಣ್ಣಿನ ಕಡೆಯವರಿಗೆ ಹೇಳಿ ಕಳುಹಿಸುವ ಪದ್ಧತಿ ಇದೆ. ಅವರು ಬಟ್ಟೆ ಕೊಳ್ಳಲು ಬರುವರು. ಗಂಡಿನ ಕಡೆಯವರು ತಮ್ಮ ಯಜಮಾನರನ್ನು ಕರೆದುಕೊಂಡು ಮದುವೆ ಬಟ್ಟೆ ಕೊಳ್ಳುವ ಪದ್ಧತಿ ಇದೆ. ಮನೆಗೊಬ್ಬರಂತೆ ಯಜಮಾನರು ಮತ್ತು ಹಿರಿಯರು ಬಟ್ಟೆ ಕೊಳ್ಳುವ ಕಾರ್ಯಕ್ರಮಕ್ಕೆ ಹೋರಡುತ್ತಾರೆ. ತದನಂತರ ಹೆಣ್ಣಿನ ಕಡೆಯವರು ಮದುಮಗಳಿಗೆ ತಾಳಿ ಸೀರೆಯನ್ನು ಹುಡುಕಲು ಶುರು ಮಾಡುತ್ತಾರೆ. ಇದೇ ಸಂದರ್ಭದಲ್ಲಿ ಬಂಧು ಬಳಗದವರಿಗೆ ಬಟ್ಟೆಗಳನ್ನು ಖರಿದಿಸುವ ಪದ್ಧತಿ ಇಂದಿಗೂ ರೂಢಿಯಲ್ಲಿದೆ. ಶಿವಮೊಗ್ಗ ಬೇಡರಲ್ಲಿ ಗಂಡಿನ ಕಡೆಯವರು ಮೊದಲು ಹೆಣ್ಣನ್ನು ನೋಡಲು ಹೋಗುವ ಪದ್ಧತಿ ಇದೆ. ಹೆಣ್ಣು ಒಪ್ಪಿಗೆಯಾಗಬೇಕು ವರನ ತಂದೆ ತಾಯಿ ಬಂಧು ಬಳಗದವರು, ಸಂಬಂಧಿಕರು ಹೆಣ್ಣನ್ನು ಒಪ್ಪಿಕೊಂಡ ಮೇಲೆ ಹೆಣ್ಣಿನ ಕಡೆಯವರು ವರನ ಮನೆಯನ್ನು ನೋಡಲು ಬರುವ ಸಂಪ್ರದಾಯವಿದೆ. ಇದಕ್ಕೆ ಮನೆ ನೋಡುವ ಪದ್ಧತಿಯೆಂತಲು ಕರೆಯುತ್ತಾರೆ. ವರನ ಮನೆ ಒಪ್ಪಿಗೆಯಾದಲ್ಲಿ ವರನ ಮನೆಯಲ್ಲಿ ಮದುವೆಯ ಮಾತುಕತೆ ನಡೆಯುತ್ತದೆ. ವರನ ಮನೆ ನೋಡಲು ಬರುವವರಿಗೆ ಸಿಹಿ ಊಟವನ್ನು ಮಾಡಿಸಲಾಗುತ್ತದೆ. ವರನ ಕಡೆಯವರು ಹೆಣ್ಣಿಗೆ ಬೆಂಡಾಲಿ, ಉಂಗುರ, ಕಾಲುಂಗುರ,ಮೂಗುತಿ, ಚೈನ್‌ಸರ ಇತ್ಯಾದಿ ಹಾಕುವ ಹಾಗೂ ವರನಿಗೆ ವಾಚು, ಉಂಗುರ, ಬಂಗಾರದ ಸರ, ಬಟ್ಟೆ ಇತ್ಯಾದಿ ಹಾಕಬೇಕು ಎಂದು ಅವರವರ ಅಂತಸ್ತಿಗೆ ತಕ್ಕಂತೆ ಮಾತುಕತೆ ನಡೆಯುತ್ತದೆ. ಒಂದು ತಾಳಿಯನ್ನು ವರನ ಕಡೆಯವರು ಇನ್ನೊಂದು ತಾಳಿಯನ್ನು ಹೆಣ್ಣಿನ ಕಡೆಯವರು ಮಾಡಿಸುವ ಪದ್ಧತಿ ಇದೆ. ಒಂದು ಒಪ್ಪಂದದ ಪ್ರಕಾರ ಎರಡು ತಾಳಿಗಳು ಸಿದ್ಧವಾಗುತ್ತವೆ. ಒಂದು ವೇಳೆ ವರನ ಕಡೆಯವರು ಎರಡು ತಾಳಿಗಳನ್ನು ಮಾಡಿಸಿದರೆ ಹೆಣ್ಣಿನ ಕಡೆಯವರು ಒಂದು ತಾಳಿಯ ದುಡ್ಡನ್ನು ಕೊಡಬೇಕಾಗುತ್ತದೆ. ಲಗ್ನ ಪತ್ರಿಕೆಯನ್ನು ಮದುವೆ ಹಮ್ಮಿಕೊಂಡು ೫ ದಿನದಲ್ಲಿ ಅಥವಾ ೯ ದಿನದಲ್ಲಿ ಕಟ್ಟಿಸುವ ಪದ್ಧತಿ ಇದೆ. ಲಗ್ನ ಪತ್ರಿಕೆಯನ್ನು ತಮ್ಮ ಊರಲ್ಲಿರುವ ದೇವರ ಗುಡಿಗಳ ಮುಂದೆ ಕಟ್ಟಿಸುವರು ಲಗ್ನ ಪತ್ರಿಕೆಯನ್ನು ಕಟ್ಟಿಸುವಾಗ ಹಿರಿಯರು ಭಾಗವಹಿಸುತ್ತಾರೆ. ಈ ಲಗ್ನ ಪತ್ರಿಕೆಯನ್ನು ಕೆಲವು ಸಂದರ್ಭದಲ್ಲಿ ಕಟ್ಟಿಸುವ ಸಂಪ್ರದಾಯವಿದೆ.

ಶಾಸ್ತ್ರೋಕ್ತವಾಗಿ ಕಟ್ಟಿಸುವ ಸಲುವಾಗಿ ದೇವರ ಗುಡಿಗೆ ಸಾಯಂಕಾಲ ೫ ಗಂಟೆಗೆ ಪುರೋಹಿತರನ್ನು ಕರೆ ತಂದು ಅವರಿಂದ ಲಗ್ನ ಪತ್ರಿಕೆಯನ್ನು ಕಟ್ಟಿಸಲಾಗುತ್ತದೆ. ಕಂಬಳಿಯನ್ನು ಹಾಸಿ ಕಂಬಳಿಯ ಮೇಲೆ ಲಗ್ನ ಪತ್ರಿಕೆಯನ್ನು ಇಟ್ಟು ಪೂಜೆ ಮಾಡಿ ಮುತ್ತೈದೆಯರಿಂದ ಕಳಸ ಬೆಳಗಿಸಲಾಗುತ್ತದೆ. ಪುರೋಹಿತನಿಗೆ ಈ ಸಮಯದಲ್ಲಿ ಬೇಳೆ, ಬೆಲ್ಲ, ಹೋಳಿಗೆ ಹಿಟ್ಟು, ಕೊಬ್ಬರಿ, ಬೆಟ್ಟಡಿಕೆ ಇವುಗಳನ್ನು ಕೊಡುವರು. ಪುರೋಹಿತನು ಲಗ್ನ ಪತ್ರಿಕೆಯಲ್ಲಿ ವರ ಮತ್ತು ಕನ್ಯೆಯ ಹೆಸರು ಅವರ ತಂದೆ ತಾಯಿಯ ವಿವರ, ವಿದ್ಯಾಭ್ಯಾಸ, ಬೆಡಗು, ವಯಸ್ಸು, ಮದುವೆ ಮೂಹೂರ್ತ, ಕಲ್ಯಾಣ ಮಂಟಪ, ತಾಳಿದಿನಾಂಕ ಇತ್ಯಾದಿಯನ್ನು ಬರೆಯುವವನು. ನಂತರ ಎಲ್ಲರೂ ಅಕ್ಷತೆಯನ್ನು ಹಾಕುವರು. ಮದು ಮಕ್ಕಳನ್ನು ಮಾಡುವ ಮೊದಲೇ ಐರಣಿ ಗಡಿಗೆ ಅಥವಾ ಐರಣಿ ದೀಪವನ್ನು ದೇವರ ಮನೆಯಲ್ಲಿ ಹಚ್ಚುತ್ತಾರೆ. ಎರೆಡೆರಡು ಕಡಗೆ ೪ ಗಡಿಗೆಗಳನ್ನು ಜೋಳದ ಮೇಲೆ ಇಟ್ಟು ಗಡಿಗೆ ಒಳಗೆ ೫ ದಿನಸಿನ  ಧಾನ್ಯಗಳನ್ನು ಹಾಕಿ ಒಂದು ರೂಪಾಯಿ ನಾಣ್ಯವನ್ನು ಹಾಕಿ ಗಡಿಗೆಯ ಮೇಲೆ ಮುಚ್ಚಳವನ್ನು ಇಟ್ಟು ದೀಪವನ್ನು ಹಚ್ಚುತ್ತಾರೆ. ಇದಕ್ಕೆ ಐರಣಿ ದೀಪ ಅಥವಾ ಐರಣಿಶಾಸ್ತ್ರವೆಂದು ಕರೆಯುತ್ತಾರೆ. ಹಚ್ಚಿರುವ ದೀಪ ವರ ತಾಳಿ ಕಟ್ಟುವ ತನಕ ಉರಿಯಬೇಕು. ಅದಕ್ಕಾಗಿ ದೇವರಗುಡಿಯ ಪೂಜಾರರು ಅದನ್ನು ನೋಡಿಕೊಳ್ಳುತ್ತಾ ಇರುತ್ತಾರೆ. ಈ ಸಂದರ್ಭದಲ್ಲಿ ಅವರ ಜವಾಬ್ದಾರಿ ಹೆಚ್ಚಾಗಿ ಇರುತ್ತದೆ.

ದೇವರ ಗುಡಿಯ ಮುಂದೆ ವರನನ್ನು ಕೂಡಿಸಿ ಅರಿಶಿಣ ಹಚ್ಚಿ ಬಿಸಿ ನೀರಿನಿಂದ ಸ್ನಾನವನ್ನು ಮಾಡಿಸಿ ಅಕ್ಷತೆಯನ್ನು ಹಾಕುವ ಮೂಲಕ ಮದುಮಗನನ್ನು ಮಾಡುವ ಪದ್ಧತಿ ರೂಢಿಯಲ್ಲಿದೆ. ವರನ ಮೈಗೆ ಅರಿಶಿಣ ಹಚ್ಚುವುದು, ಕಳಸ ಬೆಳಗುವುದು ಹಾಗೂ ನೀರು ಹಾಕುವುದನ್ನು ಐಲುಗಿತ್ತಿಯರು ಮಾಡುತ್ತಾರೆ. ಬೆಳ್ಳಿ, ಅಕ್ಕಿ ಉಂಗುರವನ್ನು ಮದುಮಗನ ಕೈ ಬೆರಳಿಗೆ ತೊಡಿಸಲಾಗುತ್ತದೆ. ಹೊಸ ಬಟ್ಟೆಗಳನ್ನು ಈ ಸಂದರ್ಭದಲ್ಲಿ ಉಡಿಸಲಾಗುತ್ತದೆ. ಹಾಗೆಯೇ ಮುಂದುವರಿದು, ನಾಲ್ಕು ಚರಿಗೆಗಳನ್ನು ತೆಗೆದುಕೊಂಡು ಅವುಗಳಿಗೆ ನೀರನ್ನು ತುಂಬಿಸಲಾಗುತ್ತದೆ. ನಂತರ ಚರಿಗೆಗಳಿಗೆ ಕಂಕಣವನ್ನು ಕಟ್ಟಲಾಗುತ್ತದೆ. ಸುರಿಗೆಯ ಒಳಗೆ ಮದುಮಕ್ಕಳನ್ನು ಕೂಡಿಸಿ ನೀರು ಹಾಕುವ ಸಲುವಾಗಿ ನಾಲ್ಕು ಮೂಲೆಗಳಲ್ಲಿ ಚರಿಗೆಗಳನ್ನು ಇಟ್ಟು ಐದು ಸುತ್ತು ದಾರವನ್ನು ಚರಿಗಿಗಳಿಗೆ ಸುತ್ತಲಾಗುತ್ತದೆ. ಆ ಸುರಿಗೆಯೊಳಗೆ ಒನಕೆಯನ್ನು ಇಟ್ಟು ಸುರಿಗೆಗೆ ಕೈ ಮುಗಿದು ಮದುಮಕ್ಕಳನ್ನು ಒನಕೆ ಅಥವಾ ಮಣೆ ಮೇಲೆ ಕೂಡಿಸಿ ಅರಿಶಿಣ ನೀರು ಹಾಕಲಾಗುತ್ತದೆ. ಮಂದಿ ಕಣ್ಣಿನಿಂದ ಮದು ಮಕ್ಕಳಿಗೆ ದೃಷ್ಟಿ ಬಿಳದಿರಲೆಂದು ನಿಳೇವು ತೆಗೆಯಲಾಗುತ್ತದೆ. ಮದುಮಕ್ಕಳ ಮೇಲೆ ಕಂಚಿನ ತಟ್ಟೆಗೆ ಎಲೆಯನ್ನು ಹಿಡಿದು ನೀರು ಬಿಡಲಾಗುತ್ತದೆ. ಇದಕ್ಕೆ ಸುರಿಗಿ ನೀರು ಎಂದು ಕರೆಯುತ್ತಾರೆ. ಶಿವಮೊಗ್ಗ ಬೇಡರು ಸುರಿಗಿಗೆ ಬಹಳ ಮಹತ್ವವನ್ನು ಕೊಡುತ್ತಾರೆ ಸುರಿಗಿ ಬಗ್ಗೆ ಅವರಿಗೆ ಪೂಜ್ಯ ಭಾವನೆಯಿದೆ. ಅದನ್ನು ಯಾರು ಕೂಡ ದಾಟುವಂತಿಲ್ಲ. ಅದಕ್ಕಾಗಿ ಹಿರಿಯರು ಸುರಿಗಿ ಚರಿಗೆಯನ್ನು

ಹಿಡಿದು ಕೂತಿರುತ್ತಾರೆ. ಗಂಗೆ ಪೂಜೆಯ ನಂತರವೇ ಸುರಗಿ ನೀರನ್ನು ಮದುಮಕ್ಕಳಿಗೆ ಹಾಕಲಾಗುತ್ತದೆ. ನಂತರ ಬಾಸಿಂಗವನ್ನು ಕಟ್ಟಲಾಗುತ್ತದೆ. ಸುರಿಗಿ ನೀರನ್ನು ಹಾಕುವಾಗ ಅನುಭವಸ್ಥ ಐಲುಗಿತ್ತಿಯರು ಎಲ್ಲಾ ಕೆಲಸ ಕಾರ್ಯಗಳನ್ನು ಮಾಡುವರು.

ಬಾಸಿಂಗವಿಲ್ಲದೆ ಮದುವೆ ಮಾಡಲಿಕ್ಕೆ ಆಗದು ಎಂದು ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ಅನುಭವಸ್ಥ ಹಿರಿಯರು ಹೇಳಿದರು. ಅಂದರೆ, ಇವರಲ್ಲಿ ಮದುಮಕ್ಕಳಿಗೆ ಬಾಸಿಂಗವನ್ನು ಕಟ್ಟುವ ಪದ್ಧತಿ ಮೊದಲಿನಿಂದಲೂ ಇದೆ. ಬಾಸಿಂಗದಲ್ಲಿ ಹಲವು ವಿಧವಿದೆ. ಒಂದು ನಾಮದ ಬಾಸಿಂಗ, ಮೂರು ನಾಮದ ಬಾಸಿಂಗ, ಡುಬುರಿ, ತೇರು ಇತ್ಯಾದಿ ನಮೂನೆಗಳಲ್ಲಿ ಬಾಸಿಂಗಗಳಿರುತ್ತವೆ. ಶಿವಮೊಗ್ಗ ಬೇಡರಿಗೆ ಆಂಜನೇಯ ಮನೆಯ ದೇವರು ಆಗಿರುವುದರಿಂದ ಮೂರು ನಾಮದ ಬಾಸಿಂಗವನ್ನು ಧರಿಸುತ್ತಾರೆ. ಬಾಸಿಂಗವನ್ನು ಮದುಮಗನಿಗೆ ಮಾತ್ರ ಹಣೆಗೆ ಕಟ್ಟಲಾಗುತ್ತದೆ. ಇಲ್ಲಿಯವರೆಗೆ ಆಗಿರುವ ಮದುವೆಗಳಲ್ಲಿ ಬಾಸಿಂಗವಿಲ್ಲದೆ ಮದುವೆಗಳೆ ನಡೆದಿಲ್ಲ. ತಾಳಿ ಕಟ್ಟುವ ಸಂದರ್ಭದಲ್ಲಿ ಮಾತ್ರ ಬಾಸಿಂಗವನ್ನು ಇವರು ಬಳಸುತ್ತಾರೆ. ಬಾಸಿಂಗಗಳ ಬಗ್ಗೆ ಶಿವಮೊಗ್ಗ ಬೇಡರಿಗೆ ಪೂಜ್ಯ ಭಾವನೆಯಿದೆ. ಬಾಸಿಂಗವು ಮುರಿಯದಂತೆ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಾರೆ. ಮದುವೆ ಕಾರ್ಯ ಮುಗಿದ ನಂತರ ಬಾಸಿಂಗವನ್ನು ಗಂಗೆಗೆ ಬಿಡಲಾಗುತ್ತದೆ. ಅಂತೆಯೇ, ಶಿವಮೊಗ್ಗ ಬೇಡರ ಮದುವೆ ಆಚರಣೆಗಳಲ್ಲಿ ಮೇಲ್ವರ್ಗದವರ ಆಚರಣೆಗಳು ಹೀಗೀಗಾ ಸೇರಿಕೊಂಡಿರುವುದನ್ನು ಕಾಣಬಹುದಾಗಿದೆ. ಮದುಮಗನನ್ನು ಮಾಡಿದ ದಿನ, ರಾತ್ರಿ ಸಮಯದಲ್ಲಿ ಮದುವೆಗೆ ಸಂಬಂಧಿಸಿದಂತೆ, ಹಿರೇ ಇಳೇವು ನಡೆಯುತ್ತದೆ.. ಆ ಸಮಯದಲ್ಲಿ ವರ ಮತ್ತು ಹೆಣ್ಣಿನ ಹಿರಿಯರ ಸಮಕ್ಷಮದಲ್ಲಿ ಹಿರೇ ಇಳೇವು ನಡೆಯುತ್ತದೆ. ಪುರೋಹಿತರು ಹೇಳಿದ ಸಮಯದಲ್ಲಿ ತಾಳಿ ಮುಹೂರ್ತ ನಡೆಯುತ್ತದೆ. ಅಕ್ಷತೆ, ಅಡಕೆ, ಎಲೆ, ಎರಡು ಕೊಬ್ಬರಿ ಬಟ್ಟಲುಗಳ ಮೇಲೆ ಮಾಂಗಲ್ಯವನ್ನು ಇಟ್ಟು ಅವುಗಳಿಗೆ ಅರಿಶಿಣ ಕುಂಕುಮ ಹಚ್ಚಿ ೫ ಮುತ್ತೈದೆಯರಿಗೆ ನಮಸ್ಕರಿಸಲು ಪುರೋಹಿತನು ತಿಳಿಸುತ್ತಾನೆ. ಅವರಲ್ಲಿ ತಾಳಿಗೆ ನಮಸ್ಕರಿಸಿದ ಮೇಲೆ ತಾಳಿಯನ್ನು ಮದುಮಗ ಸರಿಯಾದ ಮುಹೂರ್ತಕ್ಕೆ ಮದುಮಗಳಿಗೆ ಕಟ್ಟುತ್ತಾನೆ. ಈ ಸಂದರ್ಭದಲ್ಲಿ ಹೆಣ್ಣಿನವರ ಕಡೆಯವರು ಹಾಲು ಉಣಿಸಿ ಬೆಳೆಸಿ ನಿಮಗೆ ಕೊಡುತ್ತೇವೆ. ಇಲ್ಲಿಗೆ ನಮ್ಮ ದಾರಿ ಮುಗಿಯಿತು ಎಂದು ದಾರಿ ಎರೆದು ಕೊಡುತ್ತಾರೆ. ಇದಕ್ಕೆ ದಾರಿ ಎರೆದು ಕೊಡುವ ಪದ್ಧತಿಯೆಂದು ಕರೆಯುತ್ತಾರೆ. ಕೈತೊಳೆದುಕೊಂಡ ಹಾಲಿನಲ್ಲಿ ಮೂಗುತಿಯನ್ನು ಹಾಕಿ ಕನ್ಯೆ ಮತ್ತು ವರ ಇಬ್ಬರು ಹುಡುಕುವಂತೆ ಪುರೋಹಿತರು ಹೇಳುತ್ತಾರೆ. ವರ ಮತ್ತು ಕನ್ಯೆ ಇಬ್ಬರಿಗೂ ಹಿಂದೆ ಮೇಲು ಮುಸುಕು ಎಂದು ಒಟ್ಟಿಗೆ ಗಂಟು ಹಾಕುತ್ತಾರೆ. ಹೆಣ್ಣಿನ ತಂದೆ ತಾಯಿಯರು ಗಂಡನ ಮನೆಗೆ ಹೋಗುವ ಮಗಳಿಗೆ ಪಾತ್ರೆ ಸಾಮಾನುಗಳನ್ನು ಕೊಡುವ ಪದ್ದತಿ ಇದೆ. ಇದಕ್ಕೆ ಸಾಮಾನು ಒಪ್ಪಿಸುವ ಪದ್ದತಿಯೆಂದು ಕರೆಯುತ್ತಾರೆ. ವಾದ್ಯಗಳ ಮೂಲಕ ಸಾಮಾನುಗಳನ್ನು ತೆಗೆದುಕೊಂಡು ಗಂಡನ ಮನೆಯವರಿಗೆ ಒಪ್ಪಿಸುತ್ತಾರೆ. ವರನು

ತುಂಬಿದ ಕೊಡಕ್ಕೆ ಸೀರೆ, ಕಣವನ್ನು ಹಾಕಿ ಕೊಡವನ್ನು ಇಳಿಸಿಕೊಳ್ಳುತ್ತಾನೆ ಬೀಗರು ಸಾಮಾನುಗಳನ್ನು ಒಪ್ಪಿಸುವ ಪದ್ಧತಿ ನಿಜಕ್ಕೂ ಸಾಂಸ್ಕೃತಿಕ ಪ್ರತೀಕವಾಗಿದೆ.

**೫. ಮರಣ ಮತ್ತು ನಂತರದ ಆಚರಣೆಗಳು**

ಹುಟ್ಟು ಸಾವು ಪ್ರತಿಯೊಂದು ಜೀವಿಯ ಎರಡು ಕೊನೆಗಳು ಹುಟ್ಟು ನಿರೀಕ್ಷಿತ ಹಾಗೂ ಸಂತಸ ಸಂಭ್ರಮದ ಸಂದರ್ಭವಾದರೆ ಸಾವು ಅನಿರೀಕ್ಷಿತ ಹಾಗೂ ಶೋಕ ತರುವಂತಹದು, ಹಿರಿಯರಾಗಲಿ ಕಿರಿಯರಾಗಲಿ, ಪುರುಷರಾಗಲಿ, ಸ್ತ್ರೀಯರಾಗಲಿ, ಮರಣ ಹೊಂದಿದ್ದಾಗ ಮನೆಯವರೆಲ್ಲರೂ ಆಘಾತವನ್ನು ಎದರಿಸಬೇಕಾಗುತ್ತೆ. ಇಂತಹ ಸಂದರ್ಭದಲ್ಲಿ ಪ್ರತಿಯೊಂದು ಸಮಾಜ ತನ್ನದೇ ಆದ ಹಲವಾರು ವಿಧಿ ವಿಧಾನಗಳನ್ನು ಆಚರಿಸುತ್ತದೆ. ಹಾಗೆಯೇ ಶಿವಮೊಗ್ಗ ಬೇಡರಲ್ಲಿ ಸಾವು ಸಂಭವಿಸಿದಾಗ ತಮ್ಮ ನೆಂಟರಿಷ್ಟರಿಗೆ, ಸಂಬಂಧಿಕರಿಗೆ ಸಾವಿನ ಸುದ್ದಿಯನ್ನು ಹೇಳಿ ಕಳುಹಿಸಲಾಗುತ್ತದೆ. ಹೆಣಕ್ಕೆ ಹೊಸ ಬಟ್ಟೆಯನ್ನು ಧರಿಸುತ್ತಾರೆ. ಮರಣವು ಮನುಷ್ಯ ಜೀವನದಲ್ಲಿಯಾ ಕೊನೆಯ ಅವಸ್ಥೆ ಈ ಅವಸ್ಥೆಗೆ ಸಂಬಂಧಿಸಿದಂತೆ ವ್ಯಕ್ತಿ ಸಾಯುವಾಗ ಮತ್ತು ಆತನ ಮರಣ ನಂತರ ಆತನ ಸಂಬಂಧಗಳು ಆಚರಿಸುವ ಹಲವಾರು ನಿಯಮಗಳು ಜಾಗತಿಕ ಸಂಸ್ಕೃತಿಗಳಲೆಲ್ಲಾ ಕೆಲಮಟ್ಟಿಗೆ ಸಮಾನವಾಗಿರುವಂತೆ ಇನ್ನೂ ಹಲವು ಆಯಾ ಮತಧರ್ಮಗಳಿಗೆ ವಿಶಿಷ್ಟವಾದವುಗಳಿವೆ. ಮೃತನ ವಸ್ತುಗಳನ್ನು ಅಥವಾ ಆತನ ಮೃತ ಶರೀರವನ್ನು ಮುಟ್ಟಿದ ಸಂಬಂಧಿಕರು ಸಮಾಜದ ವ್ಯಕ್ತಿಗಳು ಅಂತ್ಯ ಸಂಸ್ಕಾರವಾದ ನಂತರ ತಮ್ಮ ಸರಳ ಸಮಾಜಿಕ ಕೆಲಸ ಕಾರ್ಯಗಳಲ್ಲಿ ಪ್ರವೇಶಿಸುವ ಮೊದಲು ಶುದ್ಧಿಕರಣಕ್ಕೆ ಒಳಗಾಗಬೇಕಾಗುತ್ತದೆ. ಹಲವು ಮತ ಸಮಾಜಗಳಲ್ಲಿ ಈ ಶುದ್ಧಿಕರಣ ಸರಳವಾಗಿದೆ. ಉದಾಹರಣೆ ಅಂತ್ಯ ಸಂಸ್ಕಾರದ ನಂತರ ಅದರಲ್ಲಿ ಭಾಗವಹಿಸಿದವರು ಸ್ನಾನಮಾಡಿ ಮಡಿ ಬಟ್ಟೆಯನ್ನು ಹಾಕಿಕೊಳ್ಳುವರು. ಸತ್ತ ಮನುಷ್ಯರು ಮಲಗಿದ್ದ ಅಥವಾ ಆತನ ಶರೀರವನ್ನು ಇಡಲಾದ ಮನೆಯ ನೆಲವನ್ನು ಸಾರಣೆ ಮಾಡುವರು ಅಥವಾ ತೊಳೆಯುವರು ಅದಕ್ಕೆ ಗುಡಿಯ ತೀರ್ಥಜಲವನ್ನಾಗಲಿ, ಪಾದಕವನ್ನಾಗಲಿ ತಂದು ಸಿಂಪಡಿಸುವರು. ಜಗುಲಿಯ ಮೇಲೆ ಒಂದು ತುಂಬಿದ ತಂಬಿಗೆ ಇಟ್ಟು ದೇವರುಗಳ ಪೂಜೆ ಮಾಡಿ ದೀಪ ಹಚ್ಚುವರು." (ಡಾ. ಬಿ.ಬಿ. ಹೆಂಡಿ, ೧೯೯–೧೦೧)

ಶಿವಮೊಗ್ಗ ಬೇಡರ ಜನನ ಮತ್ತು ವಿವಾಹಗಳಂತಹ ಆಚರಣೆಯಗಳಲ್ಲಿ ಕೆಲವೊಂದು ಸಂದರ್ಭಗಳಲ್ಲಿ ಪರೋಕ್ಷವಾಗಿ ಪ್ರಾದೇಶಿಕ ಪ್ರಭಾವಗಳು ಆಗುವುದುಂಟು. ಅಂತೆಯೇ ಸಾವಿನ ಸಂದರ್ಭದಲ್ಲಿಯೂ ಇಂತಹ ಪ್ರಭಾವಗಳು ಆಗಿರುವುದನ್ನು ನೋಡಬಹುದಾಗಿದೆ. ಅಂತಯೇ ಶಿವಮೊಗ್ಗ ಬೇಡರಲ್ಲಿ ಭವಿಷ್ಯ ಕೇಳಿಸಿ ಸತ್ತ ವ್ಯಕ್ತಿಯ ದೋಷವನ್ನು ಹುಡುಕುವ ಪದ್ಧತಿ ಇದೆ. ಒಂದು ವೇಳೆ ದೋಷ ಬಂದರೆ ನಿರಾತಂಕವಾಗಿ ಮನೆಯನ್ನು ಬಿಡುತ್ತಾರೆ. ಇತ್ತೀಚಿಗೆ ವ್ಯಕ್ತಿಯು ಸತ್ತದ್ದು ದೋಷವೆಂದು ಕಂಡು ಬಂದರೆ ಕೆಲವು ದಿನಗಳವರೆಗೆ ಮನೆಯನ್ನು ಬಿಟ್ಟು, ನಂತರ ಮನೆ ತೊಳೆಸಿ ಪ್ರವೇಶಿಸುವ ಸಂಪ್ರದಾಯ ಬೆಳೆದು ಬಂದಿದೆ. ಶಿವಮೊಗ್ಗ ಜಿಲ್ಲೆಯ ಬೇಡ ಬೇಡರಲ್ಲಿ

ಮರಣ ಹೊಂದಿದ ವ್ಯಕ್ತಿಯನ್ನು ಅತವಾ ಮರಣ ಹೊಂದಿದ ಮಹಿಳೆಯನ್ನು ಮಣ್ಣು ಮಾಡುವುದಕ್ಕಿಂತ ಸುಡುವುದೇ ಹೆಚ್ಚು. ವ್ಯಕ್ತಿ ಸತ್ತ ೩ನೇ ದಿನಕ್ಕೆ ಮಡಿಕೆಗೆ ತುಪ್ಪ, ಹಾಲು, ಅಕ್ಕಿ ಹಾಕಿ ಬೆಂಕಿಯಿಂದ ಬೇಯಿಸುತ್ತಾರೆ. ಹಾಲು ಊರು ಕಡೆಗೆ ಉಕ್ಕಿದರೆ ಆಸೆ ಇತ್ತು, ಸ್ಮಶಾನದ ಕಡೆಗೆ ಉಕ್ಕಿದರೆ ಅವನಿಗೆ ಆಸೆ ಇಲ್ಲವೆಂದು ಭಾವಿಸುತ್ತಾರೆ. ಸತ್ತ ವ್ಯಕ್ತಿಯ ಬೂದಿಯನ್ನು ತೆಗೆದುಕೊಂಡು ಹೋಗಿ ತುಂಗಭದ್ರಾ ನದಿಯಲ್ಲಿ ವಿಸರ್ಜನೆ ಮಾಡುತ್ತಾರೆ. ತಲೆಮಂಡಿ ಕೊಟ್ಟ ವ್ಯಕ್ತಿ ೧೧ ದಿನಗಳವರೆಗೆ ಮನೆಯಿಂದ ಹೊರಕ್ಕೆ ಹೋಗುವಂತಿಲ್ಲ. ದೇವರ ದೀಪವನ್ನು ನೋಡುವಂತಿಲ್ಲ. ಹೂಳುವ ಕ್ರೀಯೆಯನ್ನು ಆರಿಸಿ ಕೊಂಡಿದ್ದಾರೆ. ವಿವಾಹ ಪೂರ್ವ ಹಾಗೂ ವಿವಾಹದ ನಂತರ ಸತ್ತವರನ್ನು ಹೂಳುತ್ತಾರೆ. ಕುಷ್ಠರೋಗಿ, ಗರ್ಭಿಣಿ ಹೆಂಗಸು ಸತ್ತರೆ ಇವರನ್ನು ಸುಡುತ್ತಾರೆ. ಶಿವಮೊಗ್ಗ ಬೇಡರ ಶವ ಸಂಸ್ಕಾರ ಪದ್ದತಿಯು ವೈಶಿಷ್ಟ್ಯ ಪೂರ್ಣವಾಗಿದೆ. ಯಾವುದಾದರೂ ರೋಗದಿಂದ ಬಳಲುತ್ತಿರುವವರನ್ನು ಅಥವಾ ಮತ್ತಾವುದೋ ಕಾರಣದಿಂದ ಸಾವಿನಂಚಿನಲ್ಲಿರುವ ವ್ಯಕ್ತಿಯನ್ನು ಚಾಪೆಯ ಮೇಲೆ ಅಥವಾ ಹಾಸಿಗೆಯ ಮೇಲೆ ಮನೆಯ ಹೊರಭಾಗಕ್ಕೆ ತಂದು ಮಲಗಿಸುತ್ತಾರೆ. ಜೀವ ಹೋಗುವಾಗ ಕುಟುಂಬದವರು ಸಂಬಂಧಿಕರು ಆ ವ್ಯಕ್ತಿಗೆ ನೀರು ಬಿಡುತ್ತಾರೆ. ಜೀವ ಹೋದ ತಕ್ಷಣ ಓಣಿಯ ಹಿರಿಯರೆಲ್ಲ ಸೇರಿ ಮುಂದಿನ ಕಾರ್ಯದ ವ್ಯವಸ್ಥೆಯನ್ನು ಮಾಡುತ್ತಾರೆ. ಈ ನಡುವೆ ಬಂಧು ಬಳಗದವರು ಗೋಳಾಡುವುದು, ಗೋಳಾಡುವವರನ್ನು ಸಂತೈಸುವುದು ಆ ವ್ಯಕ್ತಿಯ ಗುಣಗಾನ ಮಾಡುತ್ತಾ ವ್ಯಕ್ತ ಮಾಡುವುದರೊಂದಿಗೆ ಅನುಭವಿಕರು ಮುಂದೆ ನಿಂತು ಮುಂದಿನ ವ್ಯವಸ್ಥೆಗೆ ಅಂದರೆ ಶವ ಹೂಳಲು ಬೇಕಾದ ಕುಣಿ ತೋಡಿಸುವುದು, ಚಟ್ಟ ಕಟ್ಟುವುದು ಇತ್ಯಾದಿ ಕಾರ್ಯಗಳಲ್ಲಿ ಮಗ್ನರಾಗುತ್ತಾರೆ. ಹಲಗೆ ಬಡಿಯಲು ಹರಿಜನರು ಬರುತ್ತಾರೆ.

ಶವವನ್ನು ಸ್ವಲ್ಪ ದೂರ ಹೊತ್ತುಕೊಂಡು ಹೋದ ಮೇಲೆ ಸ್ಮಶಾನದ ಸಮೀಪಕಟ್ಟೆಯ ಮೇಲೆ ಇಳಿಸಿ ಶವದ ಬಾಯಿಗೆ ಶವಯಾತ್ರೆಯಲ್ಲಿರುವವರು ನೀರು ಬಿಡುವರು, ಹಾಗೂ ಹಣವನ್ನು ಬಾಯಲ್ಲಿ ಹಾಕುವುದು. ಇದಕ್ಕೆ "ನಡುಗಡ" ಎಂದು ಕರೆಯುತ್ತಾರೆ. ಹೆಣವನ್ನು ಕುಣಿಯ ಹತ್ತಿರ ತಂದಾಗ ಹೆಣವನ್ನು ಮಲಗಿಸಿ ಮೂರು ಹಿಡಿ ಮಣ್ಣುನ್ನು ಸಂಬಂಧಿಕರೆಲ್ಲಾ ಹೆಣದ ಮೇಲೆ ಹಾಕುವರು. ಶವ ಸಂಸ್ಕಾರದಲ್ಲಿ ಪಾಲ್ಗೊಂಡವರೆಲ್ಲರೂ ಸ್ನಾನ ಮಾಡಿ ಮನೆಯನ್ನು ಸೇರುತ್ತಾರೆ. ಶುಚಿ ಕಾರ್ಯದ ದಿನ ಮನೆಯನ್ನೆಲ್ಲಾ ತೊಳೆದು ಸಗಣೆಯಿಂದ ನೆಲವನ್ನು ಸಾರಿಸುತ್ತಾರೆ. ಒಂದು ವೇಳೆ ಒಬ್ಬ ವ್ಯಕ್ತಿಯ ಪ್ರಾಣ ರಾತ್ರಿ ಹೋದರೆ ಮಾರನೆಯ ದಿನ ಬೆಳಗ್ಗೆ ಹೆಣವನ್ನು ಮಣ್ಣು ಮಾಡುತ್ತಾರೆ. ಬಿದಿರಿನಿಂದ ಮಾಡಿದ ಸಿದಿಗೆಯಿಂದ ಹೆಣವನ್ನು ಮಲಗಿಸಿಕೊಂಡು ಸ್ಮಶಾನಕ್ಕೆ ಹೋಯ್ಯುತ್ತಾರೆ. ಸತ್ತ ವ್ಯಕ್ತಿಯ ಹೆಂಡತಿಯೂ ಶವದ ಹಿಂದೆ ಹೋಗುತ್ತಾಳೆ ತಲೆಮುಡಿ ಕೊಡುವ ಅಂದರೆ ಋಣವನ್ನು ಕೊಡುವ ವ್ಯಕ್ತಿ ಅಥವಾ ಸತ್ತ ವ್ಯಕ್ತಿಯ ಹಿರಿಯ ಮಗ ಒಂದು ಗಡಿಗೆಯ ತುಂಬಾ ನೀರನ್ನು ತುಂಬಿ ಹೆಗಲ ಮೇಲಿಟ್ಟುಕೊಂಡು ಸಮಾಧಿ ಸುತ್ತ ಮೂರು ಸುತ್ತು ಸುತ್ತುತ್ತಾನೆ. ಒಬ್ಬ ವ್ಯಕ್ತಿ ಪಿಕಾಸಿಯನ್ನು ಕೈಯಲ್ಲಿ ಹಿಡಿದುಕೊಂಡು ಗಡಿಗೆಗೆ ಪಿಕಾಸಿಯಿಂದ ಒಂದು ತೂತು

ಮಾಡುತ್ತಾನೆ. ಋಣವನ್ನು ಕೊಡುವ ವ್ಯಕ್ತಿ ಹೆಣದ ಸುತ್ತ ಮೂರು ಸುತ್ತು ತಿರುಗಿ ಆ ಗಡಿಗೆಯನ್ನು ಕೆಳಕ್ಕೆ ಎಸೆಯುತ್ತಾನೆ. ಕಂಬಳಿಯನ್ನು ಹೆಗಲ ಮೇಲೆ ಹಾಕಿಕೊಂಡು ಹಿಂತಿರುಗಿ ನೋಡದೇ ಮನೆಗೆ ಬಂದು ಸೇರುತ್ತಾನೆ. ಹೆಣವನ್ನು ಸ್ಮಾಶಾನಕ್ಕೆ ಸಾಗಿಸುವಾಗ ಪುಣ್ಯದ ಕೆಲಸವೆಂದು ಮನೆಗೊಬ್ಬರಂತೆ ಜನರು ಸ್ಮಶಾನಕ್ಕೆ ಹೋಗುವರು. ಸತ್ತ ವಕ್ತಿಯ ಸಂಬಂಧಿಕರು ಅಂದು ಒಲೆಗೆ ಬೆಂಕಿಯನ್ನು ಹಾಕುವುದಿಲ್ಲ. ಹೆಣವನ್ನು ಮಣ್ಣು ಮಾಡುವವರೆಗೆ ಅಡುಗೆಯನ್ನು ಮಾಡುವುದಿಲ್ಲ. ನೀರಿನ ಪಾತ್ರೆಗಳನ್ನು ಸಹ ಹೊರಗಡೆ ಇಟ್ಟಿರುತ್ತಾರೆ. ಹೆಣವನ್ನು ಹೋರುವವರು ಬೀಗರಾಗಿರಬೇಕು. ಸತ್ತ ವ್ಯಕ್ತಿಯ ಅಣ್ಣ ತಮ್ಮ ಇತ್ಯಾದಿ ಯಾರು ಹೆಣವನ್ನು ಹೊರುವುದಿಲ್ಲ. ಹೊಸ ಮಡಿಕೆಯಲ್ಲಿ ನೀರು ಕಾಸಿ ಹೆಣವನ್ನು ಹಗ್ಗದಿಂದ ನೇಯ್ದ ಹೊರಸಿನ ಮೇಲೆ ಮಲಗಿಸಿ ಅದರ ಮುಖವನ್ನು ತೊಳೆಯುತ್ತಾರೆ. ಹೊಸ ಬಿಳಿ ಅರಿವೆಯನ್ನು ಹೆಣಕ್ಕೆ ಸುತ್ತುತ್ತಾರೆ. ಹೂವಿನ ಹಾರ ಹಾಕಿ, ಊದಿನ ಕಡ್ಡಿಯನ್ನು ಹಚ್ಚಿ, ಗಂಧದ ಎಣ್ಣೆಯನ್ನು ಹಾಕಿ, ಕುಂಕುಮ ಹಚ್ಚಿ ಶೃಂಗರಿಸುತ್ತಾರೆ. ಬಂಧು ಬಳಗದವರು ಹೆಣಕ್ಕೆ ನಮಸ್ಕರಿಸುವರು. ಮಹಿಳೆಯರನ್ನೊಳಗೊಂಡಂತೆ ಮಕ್ಕಳು ಕೂಡ ಸ್ಮಶಾನಕ್ಕೆ ಹೋಗುವರು. ಹೆಣವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋದ ಮೇಲೆ ವೃದ್ಧೆಯೊಬ್ಬಳು ಅಂಗಳದ ಕಸವನ್ನು ಹೊಡೆಯುವಳು. ಇದೇ ಸಮಯದಲ್ಲಿ ವ್ಯಕ್ತಿ ಸತ್ತ ಜಾಗದಲ್ಲಿ ದೀಪವನ್ನಿಡುತ್ತಾರೆ. ಶವ ಸಂಸ್ಕಾರ ಮುಗಿಸಿಕೊಂಡು ಬಂದವರು ಆ ದೀಪವನ್ನು ನೋಡುವ ಪದ್ಧತಿ ಇದೆ. ಸ್ಮಶಾನಕ್ಕೆ ಹೋಗಿ ಬರುವ ಪುರುಷರಿಗೆ ಮತ್ತು ಮಹಿಳೆಯರಿಗೆ ಉಪ್ಪು ನೀರು ಕೊಡಲಾಗುತ್ತದೆ. ಮೊದಲು ಉಪ್ಪು ನೀರು ಹಾಕಿಕೊಂಡು ಬಾಯಿಯನ್ನು ಪುಕ್ಕಳಿಸಿದ ಮೇಲೆ ನೀರಿನಿಂದ ಮತ್ತೊಮ್ಮೆ ಪುಕ್ಕುಳಿಸುತ್ತಾರೆ. ಇದಕ್ಕೆ 'ಇಸದ ಬಾಯಿಯನ್ನು ತೊಳೆದುಕೊಳ್ಳುವುದು ಎಂದು ಕರೆಯುತ್ತಾರೆ.' ತಲೆಮುಡಿ ಕೊಡುವ ವ್ಯಕ್ತಿ ಮೂರು ದಿನ ಎಲ್ಲಿಗೂ ಹೋಗುವಂತಿಲ್ಲ. ಮನೆಯಲ್ಲಿಯೇ ಇರಬೇಕು. ಸತ್ತ ವ್ಯಕ್ತಿಯ ಮನೆಗೆ ಬಂಧೂ ಬಳಗದವರೆಲ್ಲ ತಮ್ಮ ತಮ್ಮ ಮನೆಗಳಿಂದ ಮಾಡಿದ ಅಡುಗೆಯನ್ನು ತಂದು ಕೊಡುತ್ತಾರೆ. ಹಜಾಮನು ಮೂರು ದಿನದಲ್ಲಿ ತಲೆ ಮುಡಿಕೊಡುವ ವ್ಯಕ್ತಿಯ ತಲೆಯನ್ನು ಬೋಳಿಸುವನು. ಸತ್ತ ವ್ಯಕ್ತಿ ದೆವ್ವ ಆಗಬಾರದೆಂದು ಸಮಾಧಿಯ ಮೇಲೆ ನವಣೆಯನ್ನು ಬಿತ್ತುತ್ತಾರೆ. ನವಣೆ ಬಿತ್ತಿದರೆ ಸತ್ತ ವ್ಯಕ್ತಿ ದೆವ್ವ ಆಗುವುದಿಲ್ಲ ಎಂಬ ನಂಬಿಕೆ ಶಿವಮೊಗ್ಗ ಬೇಡ ರಲ್ಲಿ ಇದೆ.

ಶಿವಮೊಗ್ಗ ಬೇಡರಲ್ಲಿ ಒಬ್ಬ ವ್ಯಕ್ತಿ ಸತ್ತ ಮೂರು ದಿನದಲ್ಲಿ ಮೂರು ದಿನಗಳ ಕಾರ್ಯ ಮಾಡಲಾಗುತ್ತದೆ. ಇದಕ್ಕೆ ಮೂರು ಕೂಳು ಶಾಸ್ತ್ರ ಎಂದು ಕರೆಯುತ್ತಾರೆ. ಬೆಳಿಗ್ಗೆ ಮನೆಯ ನೆಲವನ್ನು ಸಾರಿಸುತ್ತಾರೆ. ಆ ವೇಳೆಗೆ ಸಂಸ್ಕಾರ ಮಾಡುವ ವ್ಯಕ್ತಿ ಪೂರ್ಣ ಕ್ಷೌರ ಮಾಡಿಸಿಕೊಂಡು ಸ್ನಾನ ಮಾಡಬೇಕು. ಹೆಣವಿಟ್ಟ ಸಮಾಧಿ ಮೇಲಿನ ಹಳೆಯ ಹೂ ಇತ್ಯಾದಿ ತೆಗೆದು, ನೀರು ಚಳೇವು ಕೊಟ್ಟು ಅರಿಶಿನ ಕುಂಕುಮ ಹಚ್ಚುತ್ತಾರೆ. ಸಮಾಧಿಯ ತಲೆಯ ಭಾಗದಲ್ಲಿ ಎಡೆ ಹಾಕುತ್ತಾರೆ. ಸಮಾಧಿಯ ಮೂರು ಮೂಲೆಗೆ ಸಿಹಿ ತಿಂಡಿಗಳನ್ನು ಇಡುತ್ತಾರೆ. ಎಲ್ಲರೂ ಧೂಪ ಹಾಕಿ ನಮಸ್ಕರಿಸುತ್ತಾರೆ. ಸಮಾಧಿಯ ಮೇಲೆ ಮೂರು ಕೂಳನ್ನು ಕಾಗೆ ಮುಟ್ಟಬೇಕೆಂದು ಕಾಯುತ್ತಾರೆ.

ಸತ್ತ ವ್ಯಕ್ತಿ ಕಾಗೆಯ ರೂಪದಲ್ಲಿ ಬಂದು ಎಡೆ ಮುಟ್ಟುವನು ಎಂಬ ನಂಬಿಕೆ ಶಿವಮೊಗ್ಗ ಬೇಡರಲ್ಲಿ ಇದೆ. ಎಡೆಯನ್ನು ಕಾಗೆ ಮುಟ್ಟಿದ ಮೇಲೆಮನೆಗೆ ಹೊರಡುತ್ತಾರೆ. ನಂತರ ಜನರನ್ನು ಕರೆದು ಊಟ ಮಾಡಿಸುವ ಪದ್ಧತಿ ಇದೆ. ೫ ನೆಯಾ ದಿನ ಮನೆಯನ್ನು ತೊಳೆದುಕೊಳ್ಳುವರು ೯ನೆಯಾ ದಿನದಲ್ಲಿ ಸತ್ತ ವ್ಯಕ್ತಿಯ ಜಾಗದಲ್ಲಿ ಕುರಿಯನ್ನು ಬಲಿಕೊಡಲಾಗುತ್ತದೆ. ಈ ಕೆಲಸವನ್ನು ತಲೆ ಮುಡಿಕೊಟ್ಟಿರುವನು ಮಾಡುತ್ತಾನೆ.

**೬. ಹಬ್ಬ, ಹರಿದಿನ ಮತ್ತು ಜಾತ್ರೆ ಉತ್ಸವಗಳು**

ಶಿವಮೊಗ್ಗ ಬೇಡ ಸಮುದಾಯವು ಇತರ ಬುಡಕಟ್ಟುಗಳು ಆಚರಿಸುವಂತೆ ತಮ್ಮದೇ ಆದ ಕೆಲವು ವೈಶಿಷ್ಟ್ಯ ಪೂರ್ಣ ಹಬ್ಬಗಳನ್ನು ಆಚರಿಸುತ್ತಾರೆ. ಇವುಗಳಲ್ಲಿ ಪ್ರಮುಖವಾದ ಕೆಲವು ಹಬ್ಬಗಳನ್ನು ಗಮನಿಸಬಹುದು. ಈ ಜನಾಂಗಕ್ಕೆ ವಿಶಿಷ್ಟವಾದ ಹಬ್ಬಗಳೆಂದರೆ, ದಸರಾ ಹಾಗೂ ಯುಗಾದಿ, ಅಮವಾಸ್ಯೆಹಾಗೂ ಹುಣ್ಣಿಮೆಗಳನ್ನು ಸಹ ವಿಶೇಷವಾಗಿ ಆಚರಿಸುತ್ತಾರೆ. ಹತ್ತಿರದ ದೇವರನ್ನು ಮತ್ತು ಚೌಡಿಯನ್ನು ಪೂಜಿಸುತ್ತಾರೆ. ಸಂಕ್ರಾತಿ ಹಬ್ಬದ ದಿವಸ ಶಿವಮೊಗ್ಗ ಬೇಡ 'ಹೊಸ್ತಿಲು' ಪೂಜೆ ಮಾಡಿ ತೆಂಗಿನಕಾಯಿಯನ್ನು ಒಡೆಯುತ್ತಾರೆ. ಹಬ್ಬಗಳಲ್ಲಿ ಇವರು ಸ್ನಾನವನ್ನು ಮಾಡಿ ಒಗೆದ ಬಟ್ಟೆಗಳನ್ನು ಧರಿಸಿ ದೇವರಿಗೆ ಹಣ್ಣು ಕಾಯಿಯನ್ನು ಮಾಡಿಸುತ್ತಾರೆ. ತಮ್ಮ ಕೈಲಾದ ಅಡುಗೆ ಮಾಡಿ ದೇವರಿಗೆ ಎಡೆ ಹಾಕಿ ಊಟ ಮಾಡುತ್ತಾರೆ. 'ಹಬ್ಬ' ಶಬ್ದವೇ ಭಾರತೀಯರ ಮೈ-ಮನಸ್ಸುಗಳನ್ನು ಪುಳಕಿಸುವಂತಹದ್ದು. ಇಂದೊಂದು ಸಂಸ್ಕೃತಿಯ ಪ್ರತೀಕವಾಗಿ ಬೆಳೆದುಬಂದಿದೆ. ಹಾಗಾಗಿ ವರ್ಷವಿಡೀ ಯಾವುದಾದರೂ ಹಬ್ಬದ ಆಚರಣೆಯಲ್ಲಿ ಭಾರತೀಯ ತೊಡಗಿರುತ್ತಾನೆ. ಹಳ್ಳಿಗಾಡಿನ ಜನರಂತೂ ಉತ್ಸಾಹದಿಂದ ಹಬ್ಬದ ದಿನಗಳನ್ನು ನಿರೀಕ್ಷಿಸುತ್ತಾರೆ, ಆಚರಿಸುತ್ತಾರೆ. ವಸಂತ ಋತು, ಗ್ರೀಷ್ಮಋತು, ಶರದೃತು, ಶಿಶಿರಋತು ಹೀಗೆ ವರ್ಷದುದ್ದಕ್ಕೂ ಸಂದರ್ಭಾನುಸಾರವಾಗಿ ವಿಜಯೋತ್ಸವ, ಸೇವೆ, ಹರಕೆಯ ಹಿನ್ನೆಲೆಯಾಗಿ ಹಬ್ಬಗಳು ನಡೆಯುತ್ತಿದ್ದು, ಕರ್ನಾಟಕದಲ್ಲೂ ವಿಶೇಷವಾಗಿ ಆಚರಣೆಯಲ್ಲಿರುವುದನ್ನು ಗಮನಿಸಬಹುದು.

'ಕಾವಡಿಗಾರನಂತೆ ಪಲ್ಲಂ ಸುಲಿವರಂತೆ 'ಮುನ್ನಿನ ದರ್ಶನಮುಂ ನಿಶಂಕೆಯು ಮೆಂಬೆರಡುಮಮ ಲೇಸು ಮಾಡುವುದು' ಎಂಬ 'ಧರ್ಮಾಮೃತ' ದ ನಯಸೇನನನ್ನು ಒಳಗೊಂಡು ಅನೇಕರು ಈ ಆಚರಣೆಯ ಕುರಿತು ಪ್ರಸ್ಥಾಪಿಸಿದ್ದಾರೆಂಬುದರಿಂದ ಈ ಆಚರಣೆಗೆ ಸನಾತನ ಇತಿಹಾಸವಿದೆಯೆಂಬುದು ಸ್ಪಷ್ಟವಾಗುತ್ತದೆ.

ಭಾರತೀಯ ಜನಪದದ ಸಂಸ್ಕೃತಿಯು ವಿವಿಧ ವೈರುಧ್ಯಗಳ ತತ್ವಗಳನ್ನು ಆಚರಣೆಗಳ ಸಾಲಿನಲ್ಲಿ ತೆರೆದು ತೋರಿಸುತ್ತದೆ. ಆಚರಣೆಗಳ ಪರಿಕಲ್ಪನೆಯೇ ಮೂಲ ಕೇಂದ್ರವಾಗಿ ಗ್ರಾಮೀಣ ಜನಪದರು ಒಬ್ಬ ದೇವತೆಯನ್ನಾದರೂ ಗುರುತಿಸಿಕೊಂಡು, ದೇವತೆಯ ವಾಸ ಗೃಹವಾದ ದೇವಾಲಯ ಅಥವಾ ಇನ್ನಿತರ ಸ್ಥಾನಗಳಲ್ಲಿ ಸಾಮೂಹಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಕಾರ್ಯಕ್ರಮಗಳನ್ನು ಏರ್ಪಡಿಸಿ ಆಚರಿಸುತ್ತಾರೆ. ದೇವಾಲಯ ಅಥವಾ ದೇವರ ಸ್ವರೂಪವನ್ನು ಜನಪದರು ಹೀಗೆ

ಇರಬೇಕೆಂದು ಚಿಂತಿಸುವುದಿಲ್ಲ. ಅವರವರ ಪ್ರಕೃತಿಯ ಕಲ್ಪನೆಯಲ್ಲಿ ಪ್ರತಿಯೊಂದು ಸಂಸ್ಕೃತಿಯ ಜನರ ಅವರ ದೈವವನ್ನು ಕಲ್ಪಿಸಿಕೊಂಡು ರೂಪಿಸಿರುತ್ತಾರೆ. ಈ ದೇವಾಲಯದ ವತಿಯಿಂದ ವಿವಾಹಗಳು, ಹಬ್ಬ ಹರಿದಿನಗಳು, ಜಾತ್ರೆ ಉತ್ಸಾಹಗಳು, ನಡೆಯುತ್ತವೆ. ಹರಿ ಸೇವೆ, ಹರ ಸೇವೆ, ಬ್ರಹ್ಮ ಸೇವೆಯ ಹೆಸರಿನಲ್ಲಿ ಭಕ್ತಾದಿಗಳಿಗೆ, ಶರಣ ಶರಣೀಯರಿಗೆ ದೈಹಿಕ ಉಲ್ಲಾಸದೊಂದಿಗೆ ಮಾನಸಿಕ ನೆಮ್ಮದಿ ದೊರೆಯುತ್ತದೆ. ದೇವಾಲಯವು ಪರಂಪರಾಗತ ಸಂಸ್ಕೃತಿ, ಸಾಹಿತ್ಯ, ಕಲೆ, ಶಿಕ್ಷಣ ಮೊದಲಾದ ವಿಷಯಗಳಿಗೆ ಪೋಷಕವಾಗಿ ಸೇವೆ ಸಲ್ಲಿಸುತ್ತಾ ಬಂದಿರುವಂತಹದ್ದು ಗಮನೀಯ. ಪ್ರಾಚೀನ ಭಾರತೀಯ ಗ್ರಾಮ ಸಂಸ್ಕೃತಿಯಲ್ಲಿ ದೈವದ ಅಡಿಯಲ್ಲಿ ಮನುಷ್ಯ ಜೀವನಕ್ಕೆ ಸಂಬಂಧಿಸಿದ ಪ್ರತಿಯೊಂದು ಅಂಶಗಳು ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ನಿರ್ಧಾರಗೊಳ್ಳುತ್ತಿತ್ತು. ಗ್ರಾಮೀಣ ಪರಿಸರದಲ್ಲಿ ದೇವತೆಯ ಹಿನ್ನೆಲೆಯಲ್ಲಿಯೇ ಧರ್ಮವು ಸಹ ಶೃಷ್ಠಿಯಾಗುತ್ತಿತ್ತು ಅಥವಾ ಧರ್ಮದ ಹೆಸರಿನಲ್ಲಿ ದೇವರ ರೂಪ ಪಡೆಯಬಹುದಾಗಿತ್ತು. ದೇವರೇ ಧರ್ಮವಾಗಿ ಧರ್ಮವೇ ದೇವರಾಗುವ ಅದ್ವೈತದ ನೆಲೆಯನ್ನು ಭಾರತೀಯ ಸಾಂಸ್ಕೃತಿಕ ಇತಿಹಾಸದಲ್ಲಿ ಗುರುತಿಸಬಹುದಾಗಿದೆ. ಭಾರತೀಯ ಸಾಂಸ್ಕೃತಿಕ ವಿಕಾಸದ ಸ್ವರೂಪವನ್ನು ಅರ್ಥ ಮಾಡಿಕೊಳ್ಳಲು ಆ ಸಂಸ್ಕೃತಿಯ ಬೇರುಗಳನ್ನು ಹಿಡಿದಿರುವ ಧರ್ಮದ ಸೂಕ್ಷ್ಮದ ಎಳೆಯಗಳನ್ನು ಅರ್ಥೈಸಿಕೊಳ್ಳಬೇಕು.

ಭಾರತೀಯ ಹಬ್ಬಗಳು ಅನೇಕ ಉದ್ದೇಶಗಳಿಗೆ, ಅನೇಕ ರೀತಿಯಲ್ಲಿ ಆಚರಿಸಲ್ಪಡುತ್ತದೆ. ಈ ಹಬ್ಬಗಳು ತಮ್ಮದೇ ಆದ ವೈಶಿಷ್ಟ್ಯ ಚೌಕಟ್ಟನ್ನು ಪಡೆದುಕೊಂಡು ಒಂದೊಂದೂ ಬೇರೆ-ಬೇರೆ ಹಿನ್ನೆಲೆಯಲ್ಲಿ ಬೆಳೆದು ಬಂದಿವೆ. ಭಾರತದಲ್ಲಿನ ಜನರ ವಿವಿಧ ಜೀವನ ವಿಧಾನಗಳನ್ನು ಅಭಿವ್ಯಕ್ತಿಸುವ ಹಬ್ಬಗಳು ಸಂಪ್ರದಾಯವಾಗಿ ವರ್ಷ ವರ್ಷವು ಅಥವಾ ಇಂತಿಷ್ಟು ವರ್ಷಗಳಿಗೊಮ್ಮೆ ಆಚರಿಸುವ ರೂಢಿ ಪದ್ಧತಿಗಳಾಗಿ ಸಂಪ್ರದಾಯಳಾಗಿಯೂ ನಡೆದು ಬರುತ್ತಿವೆ.

ಹುಟ್ಟು, ಸಾವು, ಸ್ವಾತಂತ್ರ್ಯ ವ್ಯಕ್ತಿ ಸ್ಮರಣೆ, ನಾಡು ನುಡಿ, ದೇವರು, ದೆವ್ವಗಳ ಹೆಸರನಲ್ಲಿ ಹಬ್ಬಗಳನ್ನು ಆಚರಿಸಲಾಗುತ್ತದೆ. ಹಬ್ಬಗಳನ್ನು ಮಾಡುವ ಸಂದರ್ಭಕ್ಕೆ ಆಧೂನಿಕ ಭಾರತೀಯ ಸಂಸ್ಕೃತಿಯಲ್ಲಿ ನಿರ್ದಿಷ್ಟ ಉದ್ದೇಶ ಇರಲೇಬೇಕೆಂಬ ನಿಯಮವಿಲ್ಲದ್ದಂತಾಗಿದೆ. ಯಾವುದೋ ಒಂದು ಸಂತೋಷ ಸಂದರ್ಭವನ್ನು ಸಹ ಹಬ್ಬವೆಂದು, ಪಾರ್ಟಿ ಎಂಬ ಹೆಸರಿನಲ್ಲಿ ಸರಳವಾಗಿ ಆಚರಿಸುವುದುಂಟು. ಆದರೆ ಭಾರತೀಯ ಧಾರ್ಮಿಕ ಪ್ರಾಚೀನ ಪರಂಪರೆಯ ಹಬ್ಬಗಳು, ಅದರಲ್ಲಿರುವ ಸಂಸ್ಕೃತಿಯ ಮುಖ ಛಾಯೆಯಾಗಿ ಪೌರಾಣಿಕ ಚೌಕಟ್ಟನ್ನು ಪಡೆದುಕೊಂಡಿದೆ. ಇಂತಹ ಹಬ್ಬಗಳು ಒಂದು ದಿನದಿಂದ ಒಂದು ತಿಂಗಳವರೆಗೂ ತನ್ನ ಬೆಳವಣಿಗೆಯನ್ನು ಅಥವಾ ಅಂತಹ ತಿಂಗಳಲ್ಲಿ ಒಂದು ನಿರ್ದಿಷ್ಟ ದಿನದಂದು ಆಚರಿಸುವ ಪದ್ಧತಿಯವರೆಗೂ ವಿಸ್ತರಿಸುತ್ತದೆ. ನಿರ್ದಿಷ್ಟ ವರ್ಷ, ತಿಂಗಳು, ದಿನಗಳಲ್ಲಿ, ತಿಥಿ, ನಕ್ಷತ್ರಗಳ ಹೆಸರಿನಲ್ಲಿ ವಿವಿಧ ಕ್ರಿಯಾ ವಿಧಿಗಳ ಮೂಲಕ ಹಬ್ಬಗಳು ನಡೆಯುತ್ತವೆ. ಹಬ್ಬಗಳ ಹೆಸರಿನಲ್ಲಿ ಹರ್ಷದಿಂದ ನಲಿದು ಉತ್ಸಾಹದೊಂದಿಗೆ ಬೆರೆಯುವ ಸಮಾರಂಭಗಳು ಬೆಳಕಿಗೆ ಬಂದಿವೆ. ಹಬ್ಬಗಳು ಬೆಳೆದಂತೆ ಭಾರತದಲ್ಲಿ ಜಾತ್ರೆಯಾಗುವುದುಂಟು.

"ಹಬ್ಬದೂಟ ಜಾತ್ರೆ ನೋಟ" ನಾಣ್ನುಡಿ ಇದನ್ನು ಪ್ರತಿಪಾದಿಸುತ್ತದೆ. ಹಬ್ಬ ಜಾತ್ರೆಗಳು ಸಾಂಸ್ಕೃತಿಕ ಪರಂಪರೆಗಳ ಕೊಡುಗೆಗಳಾಗಿ ಪ್ರಗತಿ ದ್ಯೋತಕಗಳಾಗಿವೆ. ಭಾರತೀಯ ಸಾಂಸ್ಕೃತಿಕ ಇತಿಹಾಸದಲ್ಲಿ ಹಬ್ಬಗಳ ಅಧ್ಯಯನ ಅಲ್ಲಿನ ಜನ ಜೀವನದ ಅಧ್ಯಯನವಾಗುತ್ತದೆ.

ಹಬ್ಬಗಳು ಎಂದರೆ ಪರ್ವಕಾಲದ ಆಚರಣೆಗಳು. ಇವು ಪ್ರತಿವರ್ಷವೂ ವಿಶೇಷ ಸಂದರ್ಭದಲ್ಲಿ ಸಾಮಾಜಿಕ ಕ್ಷೇಮಕ್ಕಾಗಿ ಆಚರಿಸಲ್ಪಡುತ್ತವೆ. ಬಂಧು ಬಳಗವು ಸೇರುವ ಸಂದರ್ಭ. ಊರು ಕೇರಿಗಳನ್ನು ಹತ್ತಿರ ತರುವ ಸಂದರ್ಭ, ಪುಣ್ಯದ ಸಂದರ್ಭ, ಸಂತೋಷದ ಸಂದರ್ಭ ಎಂದು ನಿರ್ದಿಷ್ಟ ಪಡಿಸಿದ ದಿನಗಳಲ್ಲಿ ಆಚರಿಸುವ ಶುಭ ಕಾರ್ಯದ ಸಂಕೇತವಾಗಿ ಹಬ್ಬಗಳು ಮಾನ್ಯವಾಗಿವೇ. ಹಬ್ಬಗಳು ಮನೆಯೊಳಗೆ ಆಚರಿಸುವಂತಹವು. ಅವು ಊರ ಜನರೆಲ್ಲರಿಗೂ ಶುಭ ಕೋರುತ್ತವೆ. ಕೆಲವು ಹಬ್ಬಗಳು ಊರಿನ ಪ್ರತಿಯೊಂದು ಕೋಮಿನವರನ್ನು ಆಚರಿಸುವಂತೆ ಮಾಡುತ್ತದೆ. ಹಬ್ಬದಲ್ಲಿ ಊಟವೇ ಬಹಳ ಮುಖ್ಯ. ಅದಕ್ಕೆಂದೆ ಪ್ರಶಾಸ್ತ್ಯವಾದ ಊಟವನ್ನು "ಹಬ್ಬದೂಟ ಎಂಬ" ನಾಣ್ನುಡಿ ಬಳಸಿ ಕರೆಯುತ್ತಾರೆ. ಆದರೆ ಕೇವಲ ಉಂಡು, ಹುಟ್ಟು, ತೇಗಿ ನಲಿದಾಡುವದಷ್ಟೆ ಹಬ್ಬಗಳಲ್ಲ. ವ್ರತ ನಿಯಮಗಳನ್ನು ಎಲ್ಲಾ ದಿನಗಳಲ್ಲಿ ಅಲದಿದ್ದರೂ, ಕೆಲವೊಂದು ವಿಶೇಷ ದಿನಗಳಲ್ಲಾದರೂ ಪಾಲಿಸಿ ಖಡ್ಡಾಯವಾಗಿ ದೇಹ ದಂಡನೆಯ ಮೂಲಕ ಅಥವಾ ಹಬ್ಬಕ್ಕೆ ಕಾರಣವಾದ ಸಂಗತಿಯ ಬಗ್ಗೆ ಗೌರವ ಭಾವನೆಯನ್ನು ವ್ಯಕ್ತಪಡಿಸಿ ತನಗೆ ತಾನೆ ಆತ್ಮ ಸಂಗಾತಿಯಾಗುವ ನಿಯಮಗಳನ್ನು ಕಲ್ಪಿಸಿಕೊಡುವಂತಹ ಆಚರಣೆಗಳೇ ಹಬ್ಬಗಳು. ಸ್ನಾನ, ವಂದನೆ, ಜಪ, ತಪ, ಪೂಜೆ ಇತ್ಯಾದಿಗಳೊಂದಿಗೆ ಬಾಹ್ಯ ಹಾಗೂ ಅತಃ ಶುದ್ಧಿಗೊಳ್ಳುವ ಕ್ರಮಗಳನ್ನು ಹಬ್ಬಗಳು ಅರ್ಥೈಸಿಕೊಳ್ಳುತ್ತವೆ.

ಹಬ್ಬ ಎಂಬ ಪದವು ಸಂಸ್ಕೃತದ "ಪರ್ವನ್" ಎಂಬ ಪದದಿಂದ ಆಧಾರಿವಾಗಿದೆ. ಪರ್ವನ್ ಅಥವಾ ಪರ್ವ ಪದದ ತದ್ಭವ ರೂಪ ಹಬ್ಬ ಎಂಬುದಾಗಿದೆ. ಹಬ್ಬ, ಪರ್ವ ಎಂದರೆ ಕಾಲವಿಭಜನೆ. ತಿಂಗಳ ಮೊದಲ ಅರ್ಧಾವಧಿಯಲ್ಲಿ ಸೂರ್ಯ ಚಂದ್ರರಲ್ಲಿ ಉಂಟಾಗುವ ಬದಲಾವಣೆಯ ಕಾಲ. ಇದು ಮಾನವನ ಬಯಕೆಯ ಸಂಕಲ್ಪ ಅಥವಾ ವ್ರತ ಕೈಗೊಳ್ಳುವ ಕಾಲ, ಉತ್ಸವ, ಪುಣ್ಯಕಾಲ, ಸಂಕ್ರಮಣ ಕಾಲ, ಸಂತೋಷದ ಕಾಲ, ಆನಂದದ ಹಂಚಿಕೆಯ ಸಂದರ್ಭ, ಮೊದಲಾದ ಪದ ಸಮುಚ್ಚಯದ ಅರ್ಥಗಳನ್ನು ಕೊಡುತ್ತದೆ. ಒಂದು ನಾಡಿನ ಸಂಸ್ಕೃತಿಯನ್ನು ಪರಿಚಯಿಸಿ, ಬೆಳಗಿಸುವ ಹಬ್ಬಗಳು ಸಂತೋಷದ ಸಮಾರಂಭವನ್ನು ಸೂಚಿಸುತ್ತದೆ. ಭಕ್ತಿ, ಧರ್ಮ, ಮತ, ದಿನಾಚರಣೆ, ವ್ರತಾಚರಣೆ, ಜಯಂತಿಗಳಿಗೆ ಸಂಬಂಧಿಸಿದ ಸಂತೋಷದ ಆಚರಣೆ ಹಬ್ಬವಾಗಿದೆ. ಯಾವುದಾರೂ ಒಂದು ಸಮೂಹದಲ್ಲಿ ಮಹತ್ವದ ದಿನವಾಗಿಯೂ ಇದು ಕಾಣುವುದು.

ಹಬ್ಬದ ಶುಭದಿನದಲ್ಲಿನ ಆಚರಣೆ, ಆ ಸಮೂಹದ ಸದಸ್ಯರೆಲ್ಲರೂ ಸಂತೊಷವನ್ನು ಹಂಚಿಕೊಂಡು ಆ ಒಂದು ದಿನದ ಮಹತ್ವವನ್ನು ಸ್ಮರಿಸಿಕೊಳ್ಳುತ್ತಾ ಅದನ್ನು ಅಭಿವ್ಯಕ್ತಿಸುತ್ತಾರೆ. ಅಂದು ಹಾಡಿ ಕುಣಿದು ವಿವಿಧ ಆಚರಣೆಗಳಿಂದ ಹಬ್ಬಕ್ಕೆ ಕಾರಣವಾದ ಪ್ರಕೃತಿ, ದೈವ, ಋಷಿ ಇಲ್ಲವೇ ಮಾತಾ ಪಿತೃಗಳ ಋಣವನ್ನು ತೀರಿಸುವ ಸಲುವಾಗಿ ಉತ್ಸಕರಾಗಿರುತ್ತಾರೆ. ಹಬ್ಬಗಳು

ಜನ್ಮತಾಳಿದಿರುವದೇ ಇಂತಹ ಕಾರಣಗಳಿಂದಾಗಿ ಎನ್ನ ಬಹುದಾಗಿದೆ. ಹಬ್ಬಗಳು ಹರಿದಿನಗಳಾಗಿ, ದೇವರನ್ನು ನೆನೆಯುವ ಕಾಲವಾಗಿದೆ. ಅದಕ್ಕೆಂದೇ ಜನಪದ ನಾಣ್ನುಡಿಯಲ್ಲಿ ಜೋಡಿ ಪದವನ್ನು ಬಳಸಿದ್ದಾರೆ. ಅದೇನೆಂದರೆ, ಹಬ್ಬ-ಹರಿದಿನ. ಹಬ್ಬದಲ್ಲಿ ಸಂತೋಷವನ್ನು ಹಂಚಿಕೊಂಡು ತಮ್ಮ ಇಷ್ಟ ದೈವದ ಕೃಪೆಯನ್ನು ಸಂಪಾದಿಸಿಕೊಳ್ಳಲು ಅಥವಾ ಸಂಪಾದಿಸಿಕೊಂಡಿದ್ದೇವೆ. ಎಂಬ ಸಂತೊಷದಲ್ಲಿ ಬೀಗುವ ಸನ್ನಿವೇಶಗಳೇ ಹೆಚ್ಚು. ಈ ದಿನಗಳಲ್ಲಿ ಜನಪದರು ಚೇತೋಹಾರಿಗಳಾಗಿರುತ್ತಾರೆ. ತಮ್ಮ ಮನೆಗಳನ್ನು ದೇವಸ್ಥಾನಗಳೆಂದು ಭಾವಿಸುತ್ತಾರೆ. ಮನೆಯನ್ನು ಶುಚಿಯಾಗಿ, ಶುಭ್ರಗೊಳಿಸಿ ಕುಟುಂಬದ ಸದಸ್ಯರು ಸ್ನಾನಾದಿಗಳೊಂದಿಗೆ ಹೊಸ ಬಟ್ಟೆಯನ್ನು ಧರಿಸುತ್ತಾರೆ. ದೇವರ ಪೂಜೆ, ಭಜನೆ, ಹರಿಕಥೆ, ಶಿವಕಥೆಗಳು, ಮಂಗಳಾರತಿ ಈ ಸಂದರ್ಭದಲ್ಲಿ ನಡೆಯುತ್ತವೆ.

ಬಂಧು ಮಿತ್ರರ ಆಗಮನದೊಂದಿಗೆ, ಸಂತೋಷವನ್ನು ಹಂಚಿಕೊಂಡು, ದೇವಸ್ಥಾನಗಳಿಗೆ ಹೋಗಿ ಹಣ್ಣು ಕಾಯೊಇ ಅರ್ಪಿಸಿ ಭಗವಂತನ ಅನುಗ್ರಹಕ್ಕೆ ಪಾತ್ರರಾಗುವ ಜನಪದರು, ತಾವು ಆಚರಿಸುವ ಹಬ್ಬಗಳಂದು ತಮ್ಮ ಸಂಪ್ರದಾಯಿಕ ಪರಂಪರೆಯನ್ನು ಅನುಸರಿಸುತ್ತಾರೆ. ಮಹಮ್ಮದೀಯರು ಮಸೀದಿಗಳೀಗೂ, ಕ್ರೈಸ್ತರು ಚರ್ಚುಗಳಿಗೂ, ಶಿಖ್‌ರು ಗುರುದ್ವಾರಗಳಿಗೂ, ಹಿಂದುಗಳು ಅವರ ಇಷ್ಟ ದೇವಾಲಯಗಳಿಗೂ ತಮ್ಮ ಹೇರಾಸೆಗಳೊಂದಿಗೆ ಇಷ್ಟ ಸಿದ್ಧಿಗಳನ್ನು ಪಡೆಯುವ ತುಂಬು ನಂಬುಗೆಯಲ್ಲಿ ಸಂತೋಷಗೊಳ್ಳುತ್ತಾರೆ. ದೇವರ ಕೃಪೆ ತಮ್ಮ ಮೇಲೆ ಸದಾ ಇರಲಿ ಎಂಬುದಾಗಿ ಅವರು ಆಶಿಸುತ್ತಾರೆ. ಹಬ್ಬಗಳು ದೈಹಿಕ ಮತ್ತು ಮಾನಸಿಕ ತೃಪ್ತಿಯನ್ನು ನೀಡುತ್ತವೆ. ಇದೇ ಆಶಾಭಾವನೆಗಳಲ್ಲಿ ಜನಪದ ಹಬ್ಬಗಳು ಪ್ರತಿಯೊಂದು ಜನಾಂಗಗಳಲ್ಲಿಯೂ ಕಂಡುಬರುತ್ತವೆ. ಅವರೆಲ್ಲರ ಹಬ್ಬಗಳು ಒಂದೇ ರೀತಿಯಲ್ಲಿ ಆಚರಿಸಲ್ಪಡುತ್ತವೆ ಎಂದು ಹೇಳಲು ಸಾಧ್ಯವಿಲ್ಲ. ಲೋಕೋಭಿನ್ನರುಚಿ ಎಂಬ ಜನವಾಣಿಯ ಅಡಿಪಾಯದಲ್ಲಿ ಸಂಪ್ರದಾಯಗಳು ಹಬ್ಬಗಳಾಗಿ ರೂಪಿತವಾಗಿರುತ್ತವೆ.

ಹಬ್ಬಗಳ ಉದ್ದೇಶ, ಸ್ವರೂಪ ಮತ್ತು ಅದರ ಅಧ್ಯಯನ ವಿಶೇಷವನ್ನು ತಿಳಿಸುವ ವಿದ್ವಾಂಸರು, ಹಬ್ಬಗಳಿಗೆ ವ್ಯಾಖ್ಯಾನವನ್ನು ಹಲವು ರೀತಿಯಲ್ಲಿ ನೀಡಿದ್ದಾರೆ. ವಿವಿಧ ಹಲವು ವ್ಯಾಖ್ಯಾನಗಳಿಲು ಹಲವು ವಿಷಯಗಳನ್ನೊಳಗೊಡಂತೆ ವಿಭಿನ್ನವಾಗಿವೆ. "ಬಹುಶಃ ಹಬ್ಬಗಳು ಮೂಲತಃ ವಿಜಯೋತ್ಸವಗಳಾಗಿರಬೇಕು. ದುಷ್ಟಶಕ್ತಿಯನ್ನು ದಮನ ಮಾಡಿದ್ದುದರ ಜ್ಞಾಪಕಾರ್ಥವಾಗಿ ಇವು ಆಚರಣೆಯಲ್ಲಿ ಬಂದಿರಬೇಕು. ಮಾನವ ತನ್ನ ಬದುಕಿನ ಏಕತಾನತೆಯನ್ನು ಹೋಗಲಾಡಿಸಿ ಕೊಳ್ಳುವುದಕ್ಕಾಗಿ, ಆತ್ಮೀಯರನ್ನು ಕೂಡಿಸಿಕೊಳ್ಳುವುದ್ದಕ್ಕಾಗಿ, ಸುಖ ಸಂತೋಷ ಹೊಂದುವುದಕ್ಕಾಗಿ, ಕೆಲವು ದಿನಗಳನ್ನು ಗೊತ್ತು ಮಾಡಿಕೊಂಡು ಅದನ್ನು ಹಬ್ಬ ಹರಿದಿನಗಳೆಂದು ಕರೆದುಕೊಂಡಿರಬೇಕು. ಗದ್ದೆ, ತೋಟ, ಮನೆ ಮಾರುಗಳ ಕ್ಷೇಮ ಸಾಧನೆಗೆ ಅಡ್ಡಿ ಆತಂಕಗಳನ್ನೊಡ್ಡುವ ದುಷ್ಟಶಕ್ತಿಗಳನ್ನು ನಿವಾರಿಸಿ, ತನ್ನನ್ನು ರಕ್ಷಿಸುವ ದೈವವನ್ನು ಸಂಪ್ರೀತಿಗೊಳಿಸುವ ಉದ್ದೇಶಕ್ಕಾಗಿ ಪ್ರಾರ್ಥನೆ ಸಂಪ್ರದಾಯ ಆಚರಣೆಗಳಿಂದ ಫಲವತ್ತತೆಯನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಮಾನವ ಹಬ್ಬಗಳನ್ನು ಆಚರಣೆಯಲ್ಲಿ

ತಂದುಕೊಂಡಿರಬಹುದು. ಹಬ್ಬಗಳೂ ಸಾಮಾನ್ಯವಾಗಿ ಜೀವನದ ಏಕತಾನವನ್ನು ತಡೆದು ಸಂಭ್ರಮವನ್ನು ತರುತ್ತದೆ. ಹಬ್ಬಗಳ ದಿನಗಳಲ್ಲಿ ಮಾಮೂಲು ಜೀವನದಿಂದ ಬೇರೆ ರೀತಿಯ ದಿನವನ್ನು ಕಳೆಯುತ್ತೇವೆ.

ಹಬ್ಬ ಧಾರ್ಮಿಕ ಚೌಕಟ್ಟಿನಲ್ಲಿಯೇ ಹೆಚ್ಚಾಗಿ ಬೆಳೆದು ಬಂದಿದೆ. ಒಂದು ನಿರ್ದಿಷ್ಟ ಆರಾಧನೆ ದೈವದ ಶ್ರೇಷ್ಠತೆಯನ್ನು ಪುನರ್ ಪ್ರಕಟಣೆಗೊಳಿಸುವುದು. ದೈವದ ಸ್ಥಿರೀಕರಣವನ್ನು ಪ್ರಕ್ರಿಯೆಯಾಗಿ ಮುಂದುವರಿಸುವುದು ಇದರ ಪ್ರಧಾನ ಉದ್ದೇಶಗಳಲ್ಲಿ ಕಂಡು ಬರುತ್ತದೆ. ಈ ಹಬ್ಬಗಳು ಜನರ ಧಾರ್ಮಿಕ ಮನೋಭಾವನೆಯನ್ನು ಉದ್ಧಿಪನಗೊಳಿಸುವಂತೆ ಮಾಡಿ ತನ್ಮೂಲಕ ಪ್ರಚೋಧಿತಗೊಂಡು ಭಕ್ತಿಯ ಭಾವಾವೇಷಗಳು ಪ್ರಕಟಗೊಳ್ಳುವ ವೇದಿಕೆಗಳಾಗಿವೆ. ಇದರ ಜೊತೆಗೆ ಜಾತ್ರೆಗಳು ಹಬ್ಬಗಳಿಗೆ ಹೊಸ ಮೆರಗನ್ನು ತಂದುಕೊಂಟ್ಟಿವೆ. ಕೆಲವು ಹಬ್ಬಗಳು ಜಾತ್ರೆಗಳಾಗಿ ಪರಿವರ್ತನೆಗೊಳ್ಳುವ ಪ್ರಕ್ರಿಯೆಯೂ ಇದೆ. ಆದ್ದರಿಂದಲೇ ಹಬ್ಬ ಜಾತ್ರೆಗಳು ಕೆಲವೊಂದು ಸಂದರ್ಭದಲ್ಲಿ ಬೆಸೆದುಕೊಂಡು ಒಂದೇ ದ್ಯೇಯೋದ್ದೇಶವನ್ನು ವ್ಯಕ್ತಪಡಿಸುತ್ತವೆ. ಹಬ್ಬಗಳು ಧಾರ್ಮಿಕ ಮತ್ತು ಸಾಂಸ್ಕೃತಿ ಕಾರಣಗಳಿಗಾಗಿ ಜರುಗುತ್ತವೆ ಆದರೂ ಅದರಲ್ಲಿ ಅನೇಕ ರೀತಯ ಉದ್ದೇಶಗಳಿವೆ. ಕೃಷಿನಿರತ ಜನರು ವರ್ಷಕ್ಕೊಮ್ಮೆ ಅಥವಾ ನಿರ್ದಿಷ್ಟ ದಿನದಂದು ಹಬ್ಬ ಆಚರಣೆ ಮಾಡಿದಾಗ ಅವರ ಪ್ರಥಾಮಿಕ ಅಗತ್ಯತೆಯನ್ನು ಪುರ್ನಜಿವನಗೊಳಿಸುತ್ತಾರೆ. ವರ್ಷವಡೀ ಧೂಳು ತುಂಬಿದ ಅವರ ಮನೆ ಹಾಗೂ ಮನೆಯ ಸುತ್ತಮುತ್ತಿಲಿನ ಪ್ರದೇಶಗಳನ್ನು ಸ್ವಚ್ಛಗೊಳಿಸಿ ಉಪವಾಸ ಸ್ನಾನಧಿಗಳೊಂದಿಗೆ ಹೊಸ ಜೀವನಕ್ಕೆ ಅಣಿಯಾಗುತ್ತಾರೆ. ಇಂತಹ ಗ್ರಾಮೀಣ ಜನರ ಹಬ್ಬಗಳಲ್ಲಿ ನಿರ್ದಿಷ್ಟ ಕುಲ ಜನ ಸಮೂಹ, ಪ್ರಾದೇಶಿಕ ವಿಭಾಗಕ್ಕೆ ಸಂಬಂಧಿಸಿ ಹಬ್ಬಗಳು ಇವೆ. ಆದರೂ ಪರಸ್ಪರ ಸಹಕಾರ, ಹೊಂದಾಣಿಕೆ ನೆಲೆಯನ್ನು ರೂಪಿಸಿಕೊಂಡು ಅವರು ಇತರ ಜನಾಂಗದ ಜನರ ಹಬ್ಬಗಳಲ್ಲಿಯೂ ಸಕ್ರಿಯವಾಗಿಯೂ ಪಾಲ್ಗೊಗೀಳ್ಳುತ್ತಾರೆ. ಜಾತಿ ಮತಗಳ ತಾರತಮ್ಯವನ್ನು ತೋರಿಸದೆ ಅನ್ಯರ ದೈವವನ್ನು ತಮ್ಮದೆಂದು ತಿಳಿದು ಭಕ್ತಿಯಿಂದ ಗ್ರಾಮೀಣರಲ್ಲಿ ಸಾಮಾಜಿಕ ಐಕ್ಯತೆಯನ್ನು ಕೂಡಿಬರುವುದರಲ್ಲಿ ಮಹತ್ವವಾದ ಬೆಳವಣಿಗೆಯಾಗಿ ಕಂಡು ಬರುತ್ತವೆ.

ಪ್ರಾಚೀನ ಕಾಲದಿಂದಲೂ ಜನಪದರು ಬದುಕಿನ ಏಕತಾನತೆಯನ್ನು ಹೋಗಲಾಡಿಸಿಕೊಳ್ಳಲು ಹಬ್ಬ ಜಾತ್ರೆಗಳನ್ನು ನಡೆಸಿಕೊಂಡು ಬರುತ್ತಾರೆ. ಹಬ್ಬಗಳು ಅವರ ದುಡುಮೆಯ ಶ್ರಮವನ್ನು ಮರೆಸಿ ಅವರ ಮನಸ್ಸಿಗೆ ನೆಮ್ಮದಿ, ಶಾಂತಿ, ಸಮಾಧಾನಗಳನ್ನು ತಂದುಕೊಟ್ಟಿದೆ. ನೇಮ ನಿಷ್ಠೆಯನ್ನು ಜೀವಂತಗೊಳಿಸುವುದರ ಮೂಲಕ ಶಿಲವರ್ತನೆಗಳನ್ನು ಕಲಿಸಿಕೊಡುವ ಹಬ್ಬಗಳು ಕುಟುಂಬಗಳ, ನಡುವೆ ಸೌಹಾರ್ಧ ಸಂಬಂಧವನ್ನು ಗಳಿಸಿಕೊಳ್ಳಲು, ಸಮಾಜದಲ್ಲಿ ಭಾವೈಕ್ಯತಾ ಭಾವನೆಯನ್ನು ಮೂಡಿಸಿಕೊಳ್ಳಲು ಸಹಾಯಕವಾಗಿದೆ. ಅದರಲ್ಲೂ ಪರಸ್ಪರ ಕಷ್ಟ ಸಂಕಷ್ಟಗಳನ್ನು ತೋಡಿಕೊಳ್ಳಲು ಹಬ್ಬಗಳು ಗ್ರಾಮೀಣ ಸಂವಹನ ಮಾದ್ಯಮಗಳೆ ಸರಿ.

ಹಬ್ಬಗಳು ಸಾಮೂಹಿಕ ಸಮಾನತೆಯನ್ನು ತಾತ್ಕಲಿಕವಾಗಿಯಾದರೂ ಪ್ರತಿಬಿಂಬಿಸುತ್ತದೆ. ಎಂಬ ವಿಚಾರವು ಗ್ರಾಮೀಣಮಟ್ಟದಲ್ಲಿ ಹೆಚ್ಚು ಮಹತ್ವವಾದ ಬೆಳವಣಿಗೆ. ಹಬ್ಬಗಳ ಸಂದರ್ಭದಲ್ಲಿ

ಜಾತಿಯ ಸಂಕೀರ್ಣತೆಯನ್ನು ಮೀರಿ ಅದರ ಕಟ್ಟಳೆಗಳನ್ನು ಸಡೀಲಗೊಳಿಸುವಂತಹ ಗ್ರಾಮ ಸಮುದಾಯದ ಚಟುವಟಿಕೆಗಳಿಂದ ಇದು ಅರ್ಥವಾಗುತ್ತದೆ. ಇಲ್ಲಿ ಮುಖ್ಯವಾಗಿ ಗಮನಿಸುವಂತಹ ವಿಚಾರವೆಂದರೆ ಹಬ್ಬಗಳಲ್ಲಿ ಮಾನವೀಯ ನೆಲೆಗಳನ್ನು ಹುಡುಕುವಂತಹ ಪ್ರಕ್ರೀಯೆಯ ಮುನ್ನೋಟ ಕಂಡುಬರುತ್ತದೆ. ಉದಾಹರಣೆಗೆ ಪರಸ್ಥಳದಿಂದ ಬಂದ ವ್ಯಕ್ತಿಗಳ ಮತ್ತು ಕೆಳಸ್ಥರದ ವ್ಯಕ್ತಿಗಳಿಗೂ ಹಬ್ಬದ ಸಂದರ್ಭದಲ್ಲಿ ಹಬ್ಬದೂಟವನ್ನು ಉಣಬಡಿಸಿ ಅವರನ್ನು ಸಂತೋಷಪಡಿಸಿದಾಗ ಅವರಲ್ಲಿನ ಪರಸ್ಪರ ವಿಶ್ವಾಸದ ಸಂಬಂಧಗಳನ್ನು ಬೆಸೆದುಕೊಳ್ಳುತ್ತದೆ. ಎಷ್ಟೋ ವರ್ಷಗಳಿಂದ ತುಳಿಯಲ್ಪಟ್ಟ ಜನರಿಗೆ ಹಬ್ಬದ ಹೆಸರಿನಲ್ಲಿ ಊಟ ಬಟ್ಟೆಗಳನ್ನು ಕೊಟ್ಟು ಆಧಾರಿಸಿದಾಗ ನಿಜಕ್ಕೂ ಅವರು ಹೆಮ್ಮೆಪಟ್ಟು ಕೊಳ್ಳುತ್ತಾರೆ. ಸಮಾಜದಲ್ಲಿ ತಮ್ಮ ಇರುವಿಕೆಗೂ ಸಂತೋಷ ಪಡುತ್ತಾರೆ. ಬೇರೆ ಯಾವ ದಿನಗಳಲ್ಲಿಯೂ ಈ ಕೆಳವರ್ಗದ ಜನರು ಮೇಲ್ವರ್ಗದವರ ಹಟ್ಟಿಗೆ ಹೋಗಲು ಹಿಂಜರಿಯುತ್ತಿದ್ದ ಸಂದರ್ಭಗಳಲ್ಲಿ ಹಬ್ಬದ ಅವಕಾಶವು ಅವರ ಬದುಕಿಗೆ ಹೊಸ ಸ್ವಾತಂತ್ರ್ಯ ಬಂದಂತೆಯೇ ಭಾವಿಸುತ್ತಾರೆ.

ಶಿಷ್ಟ ಪರಂಪರೆಯ ಸನಾತನ ಧರ್ಮದ ಜೀವನ ಶೈಲಿಯನ್ನು ರೂಪಿಸಿಕೊಳ್ಳಲು ಜನಪದರಿಗೆ ಸಾಧ್ಯವಿಲ್ಲ. ಏಕೆಂದರೆ ಅವರಿಗೆ ನಿತ್ಯ ಸಂಧ್ಯಾವಂದನೆ, ಜಪ, ತಪ, ಪ್ರಾರ್ಥನೆಗಳಲ್ಲಿ ತೊಡಗಲು ಅಸಾಧ್ಯವಾಗುತ್ತದೆ. ತಾರ್ಕಿಕ ಬದುಕಿನಿಂದ ಆ ತಾರ್ಕಿಕ ಜೀವನದತ್ತಾ ಮನಸ್ಸನ್ನು ವಿಶ್ರಾಂತಿಯ ಮೆಟ್ಟಿಲುಗಳಾಗಿ ರೂಪಿಸಲು ಈ ಗ್ರಾಮೀಣರು ಒಂದು ನಿರ್ದಿಷ್ಟ ಕಾಲಾವಧಿಯಲ್ಲಿ ಆಚರಿಸುತ್ತಾ ಬರುವ ಹಬ್ಬಗಳು ಯಶಸ್ವಿ ಪ್ರಯೋಗಲಾಯಗಳಾಗಿವೆ. ಯಾವುದೇ ದೇಶ, ಪ್ರದೇಶಕ್ಕೆ ಸೀಮಿತವಲ್ಲದ ಈ ಹಬ್ಬಗಳು ವಿಶ್ವ ವ್ಯಾಪವಾಗಿವೆ. ಜನಪದರು ನೆಮ್ಮದಿ ಜೀವನ, ನೆಡೆಸಬೇಕಾದರೆ ಇಂತಹ ಹಬ್ಬಗಳನ್ನು ಸಾಲ ಮಾಡಿಯಾದರೂ ಆಚರಿಸುತ್ತಾರೆ. ಹಬ್ಬಗಳು ಚೈತನ್ಯಪೂರ್ಣವಾಗಿಯೂ, ಜನಪದರ ಮನಸ್ಸುಗಳಿಗೆ ಮುದವನ್ನು ನೀಡುತ್ತವೆ. ದುಡಿಯುವ ಗ್ರಾಮೀಣ ಮನಸ್ಸಿಗೆ ಕ್ಷಣ ಕಾಲ ನೆಮ್ಮದಿ ದೊರೆತರೆ ಅದೇ ಅವರಿಗೆ ಚೈತನ್ಯ. ಅಂತಹ ಚೈತನ್ಯಯುಕ್ತ ಹಬ್ಬಗಳನ್ನು ಮಾಡುವುದರ ಮೂಲಕ ಜನಪದರು ನೆಮ್ಮದಿಯನ್ನು ಕಂಡುಕೊಂಡಿದ್ದಾರೆ.

ಗ್ರಾಮೀಣ ಸಾಮಾಜದಲ್ಲಿ ನೆಡೆಯುವ ಹಬ್ಬಗಳಲ್ಲಿ ವ್ಯವಸಾಯಗಾರರ ನೇರ ಪ್ರಭಾವ ಮತ್ತು ನಂಬಿಕೆಗಳು ಮುಖ್ಯವಾಗುತ್ತವೆ. ಏಕೆಂದರೆ ಇವರು ವರ್ಷದ ಕೆಲವೇ ಕೆಲವು ದಿನಗಳಲ್ಲಿ ಮಾತ್ರ ಎಲ್ಲಾ ಕೆಲಸಗಳಿಂದ ಮುಕ್ತರಾಗಿರುತ್ತಾರೆ. ನಿರ್ದಿಷ್ಟ ಹಬ್ಬದ ದಿನ ಇಡೀ ಗ್ರಾಮ ಸಮಾಜದ ಜನರೆಲ್ಲರೂ ತಮ್ಮ ಮನೆಗಳನ್ನು ದುರಸ್ತಿ ಮಾಡಿ, ಸಾರಿಸಿ, ಮನೆಗುಡಿಸಿ, ಬೀದಿಗಳನ್ನು ಶುಚಿಗೊಳಿಸುತ್ತಾರೆ. ಮನೆ ಗುಡಿಗೋಪುರಗಳಿಗೆ ಸುಣ್ಣ ಬಣ್ಣವನ್ನು ತುಂಬುತ್ತಾರೆ. ಇಂತಹ ಸಾಮೂಹಿಕ ಶುಚಿತ್ವದ ಹಿಂದೆ ವೈಜ್ಞಾನಿಕ ಅರ್ಥವು ಕೂಡಿಕೊಂಡಿದೆ. ಇಲಿ, ಹೆಗ್ಗಣ, ಕ್ರಿಮಿಕೀಟ, ತಿಗಣೆ, ಉಳು–ಉಪ್ಪಟಗಳು ಮೊದಲಾದ ಕೆಡಕು ನೀಡುವ ಪ್ರಾಣಿಗಳಿಂದ ರಕ್ಷಣೆ ದೊರೆಯುತ್ತದೆ. ಜೊತೆಗೆ ಮನೆಯನ್ನು ಶುಭ್ರಗೊಳಿಸುವ ಕೆಲಸ ನಡೆಯುವುದರಿಮದ ಮಳೆಗಾಲದಿಂದ ಎದರಾಗುವ ಸಮಸ್ಯೆಗಳು ದೂರುವಾಗುತ್ತವೆ. ಹಬ್ಬ ಹರಿದಿನಗಳಲ್ಲಿ ಹಳೆಯ ಬಟ್ಟೆಗಳಿಗೆ ಬದಲಾಗಿ ಹೊಸ ಗ್ರಾಮ ಬಟ್ಟೆ

ಇಡುವುದು, ಮಡಿ ಮಾಡುವುದು ಕಂಡುಬರುತ್ತದೆ. ಇಂತಹ ಕಾರ್ಯಗಳಿಂದ ಜನಪದರು ತಲೆ, ಮೈಮೇಲಿನ ಕೊಳೆಯನ್ನು ತೊಳೆದು ಶುದ್ಧರಾಗುತ್ತಾರೆ. ಆರೋಗ್ಯಕ್ಕೆ ಇಂದೊಂದು ಸುಲಭೋಪಾಯ ಮಾರ್ಗವಾಗಿದೆ. ಅವರಿಗೆ ಆಯಾಸವು ಪರಿಹಾರವಾಗುತ್ತದೆ. ಗ್ರಾಮೀಣ ಮತ್ತು ಬುಡಕಟ್ಟು ನೆಲೆಗಳಲ್ಲಿ ಅವರ ಜೀವನ ವಿಡೀ ಹೊಟ್ಟೆಯನ್ನು ಸುಧಾರಿಸುವ ಮತ್ತು ಬಟ್ಟೆಗಳಿಗೆ ಪರದಾಡುವ ಸನ್ನಿವೇಶಗಳೇ ಹೆಚ್ಚಾಗಿರುವ ಕಾರಣ ಅವರ ದುಡುಮೆಗೆ ಕೆಲ ಕಾಲದ ಬಿಡುವು ಹಬ್ಬಗಳಿಂದ ಸಿಗುತ್ತದೆ. ಹಬ್ಬಗಳು ಅವರ ಬದುಕಿಗೆ ಹೊಸ ಉಲ್ಲಾಸವನ್ನು ನೀಡುತ್ತವೆ.

ಪ್ರಾಚೀನ ಕಾಲದ ಜನರ ಬದುಕಿನಲ್ಲಿ ಅನೇಕ ಅಂಟು ಜಾಡ್ಯಗಳು ಕಾಣಿಸಿಕೊಂಡು ಬಹುತೇಕ ಸಾಮೂಹಿಕ ಮರಣಗಳಿಗೆ ತುತ್ತಾಗುತ್ತಿದ್ದರು. ಇದಕ್ಕೆ ಪ್ರಾಕೃತಿಕ ಕಾರಣಗಳನ್ನು ಅರಿಯಲು ವಿಫಲರಾದ ಮುಗ್ದ ಜನರು ಮಾರಿದೇವಿಯ ಕೋಪ, ಪಿಲಾಕೆ (ಪ್ಲೇಗು) ಕಾಲರ ಅಮ್ಮನ ಕೋಪ ಎಂದು, ಅನೇಕ ರೀತಿಯ ಶಾಂತಿಗಳನ್ನು ವೈಜ್ಞಾನಿಕ ಅಲ್ಲದ ಆಚರಣೆಗಳನ್ನು ಮಾಡುತ್ತಾ ಮೂಢನಂಬಿಕೆಯಲ್ಲಿ ಮುಳುಗಿದ್ದರು. ಅವರಲ್ಲಿನ ಕೆಲವರು ಬುದ್ಧಿವಂತರು ಈ ಸಾಂಕ್ರಮಿಕ ರೋಗಗಳಿಗೆ ಕಾರಣಗಳನ್ನು ಗ್ರಹಿಸಿ ಸಾಮೂಹಿಕ ಶುಚಿತ್ವವನ್ನು ಕೈಗೂಡಿಸಿಕೊಳ್ಳಲು ದೇವರ ಹೆಸರಿನಲ್ಲಿ ಹರಕೆ ಹೊತ್ತು ಹಬ್ಬ ಮಾಡುವುದರ ಮೂಲಕ ಗ್ರಾಮದ ಶುಚಿತ್ವವನ್ನು ಕಾಪಾಡಿಕೊಂಡರು. ಮನುಷ್ಯನ ಶಕ್ತಿಗಿಂತ ದೇವರು ಬಲಾಢ್ಯವೆಂದು ನಂಬುವ ಜನರು ಶ್ರದ್ಧೆಯನ್ನು ದೈವ ಕಾರ್ಯದ ನೆಪದಲ್ಲಿ ಹಬ್ಬಗಳನ್ನು ಆಚರಿಸುತ್ತಿದ್ದರು. ಜನಪದ ಸಂಸ್ಕೃತಿಯಲ್ಲಿ ಈ ಹಬ್ಬಗಳು ವೈಜ್ಞಾನಿಕ ಆಚರಣೆಗಳೂ ಹೌದು.

ಹಬ್ಬಗಳು ಬಾಂಧವ್ಯ ಸೇತುವೆಗಳಾಗಿಯೂ ಕಾರ್ಯನಿರ್ವಹಿಸುತ್ತವೆ. ಗ್ರಾಮೀಣ ಜನರುವರ್ಷದ ಹೆಚ್ಚು ಕಾಲ ವ್ಯವಸಾಯದಲ್ಲಿ ನಿರತರಾಗಿರುವುದರಿಂದ ಅವರ ಸಂಬಂಧಿಗಳ ಜೊತೆ ಹೆಚ್ಚು ಸಂಪರ್ಕ ಹೊಂದಲು ಸಾಧ್ಯವಿಲ್ಲ. ಹಬ್ಬಗಳಂತಹ ಸಂದರ್ಭಗಳನ್ನು ಬಳಸಿಕೊಂಡು ತಮ್ಮ ಬೇಕು–ಬೇಡಗಳನ್ನು ಪೂರೈಸಿಕೊಂಡು ಜೀವನಕ್ಕೆ ಶುಭಾಷಯಗಳನ್ನು ವಿನಿಮಯ ಮಾಡಿಕೊಳ್ಳುವ ಸಮಯ ಹಬ್ಬಗಳ ವೈಶಿಷ್ಟ್ಯಗಳಲ್ಲಿ ಸೇರಿದೆ. ದೀರ್ಘಕಾಲದ ಅಗಲಿಕೆಯ ನಂತರದ ಕ್ಷೇಮ ಸಮಾಚಾರವನ್ನು ವ್ಯಕ್ತಪಡಿಸಿಕೊಳ್ಳುವ ಗ್ರಾಮೀಣ ಜನರು ಊಟ ಉಪಚಾರಗಳಲ್ಲಿ ಪೌಷ್ಠಿಕಾಂಶಗಳಿಂದ ಕೂಡಿರುವ ಪದಾರ್ಥಗಳನ್ನು ಬಳಸಿ ಸೇವಿಸುತ್ತಾ ರುಚಿ ಮತ್ತು ಶುಚಿ ಮತ್ತು ಶಕ್ತಿದಾಯಕ ಆರೋಗ್ಯವನ್ನು ಪಡೆಯುತ್ತಾರೆ. ಭಾರತೀಯ ಗ್ರಾಮೀಣ ಜನ–ಜೀವನದಲ್ಲಿ ಹಬ್ಬಗಳಿಗೆ ಅಪಾರವಾದ ಮಹತ್ವವಿದೆ. ಜನರು ಹಬ್ಬದ ದಿನವನ್ನು ಪವಿತ್ರ ದಿನವಾಗಿ ತಿಳಿದು ಮಡಿ ಸ್ವಚ್ಛತೆಯಿಂದ ಒಳ್ಳೆಯ ನುಡಿಯಿಂದ ನಡೆಯಲು ಆ ದಿನದಲ್ಲಿ ಬಹಳ ಎಚ್ಚರಿಕೆಯನ್ನು ವಹಿಸುತ್ತಾರೆ. ಹಬ್ಬ ದಿನ ಹೇಗೆ ನಡೆದುಕೊಂಡರೆ ಹಾಗೆಯೇ ಇಡೀ ವರ್ಷವು ಸಾಗುತ್ತದೆ. ಇಲ್ಲವಾದರೆ ವರ್ಷವಿಡೀ ಸಂಕಷ್ಟಗಳನ್ನು ಅನುಭವಿಸಬೇಕಾಗುತ್ತದೆ ಎಂದು ಭಾವಿಸುತ್ತಾರೆ.

ಹಬ್ಬ ಜಾತ್ರೆ ಮತ್ತು ಜನಪದ ಕಲೆಯನ್ನು ಪ್ರಕಾರಗಳು ಬಹಳ ಉಪಯುಕ್ತ ಮಾಹಿತಿಗಳನ್ನು ಒದಗಿಸಬಲ್ಲವು. ಗ್ರಾಮೀಣ ಸಂಸ್ಕೃತಿಯಲ್ಲಿ ಇವುಗಳಿಗೆ ಬಹಳ ಮಹತ್ವವಿದೆ. ವರ್ಷವಿಡೀ ಶ್ರಮ ಜೀವಿಗಳಾಗಿ ದುಡಿಯುವ ಜನರಿಗೆ ಈ ಹಬ್ಬ ಜಾತ್ರೆ ಮತ್ತು ಜನಪದ ಕಲೆಗಳು ಉಲ್ಲಾಸದ ಚಿಲುಮೆಗಳು ಹೌದು. ಸಂತೋಷವನ್ನು ತಂದು ಕೊಡುವುದಲ್ಲದೇ ಅವರ ವಿಶ್ರಾಂತಿ ಬದುಕಿಗೆ ಸಾಮಾಗ್ರಿಗಳಾಗಿದೆ. ಜಾತ್ರೆಯ ವಿಷಯದಲ್ಲಿ "ಜನಸೇರಿದರೆ ಜಾತ್ರೆ" ಎಂಬ ನಾಣ್ನುಡಿ ಇದೆ. ಹಬ್ಬಕ್ಕೆ ಕಾರಣವಾದ ದೈವವು ಜಾತ್ರೆಗೂ ಕಾರಣವಾಗಬಹುದು. ದೇವರ ಉತ್ಸವ, ಮೆರವಣಿಗೆ ತಲೆಮಂಡೆ ಕೊಡುವುದು ಕೊಂಡ ಹಾಯುವುದು (ಅಗ್ನಿಕುಂಡ) ಟೆಂಟುಗಳು ನೃತ್ಯ, ಕೋಲಾಟ, ಜಾಹಿರಾತು ಆಕರ್ಷಣೆ ಹೀಗೆ ಒಂದೇ ಎರಡೇ ಜಾತ್ರೆಯಲ್ಲಿ ವಿವಿಧ ಬಗೆಯ ಆಚರಣೆಗಳು ಮನೋರಂಜನಾ ಕೂಟಗಳು ರೂಪಿತವಾಗಿರುತ್ತದೆ. ಹಬ್ಬದಲ್ಲಿ ಜನರ ನಾಲಿಗೆ ರುಚಿ ಮತ್ತು ಹೊಟೆಯು ಹರ್ಷಗೊಂಡರೆ ಜಾತ್ರೆಯಲ್ಲಿ ಜನರ ಕಣ್ಣುಗಳು ಹರ್ಷಗೊಳ್ಳುತ್ತವೆ. ಪ್ರೋ. ದೇ. ಜವರೇಗೌಡ ಅವರು ಹೇಳುವಂತೆ "ಜಾತ್ರೆಯು ಯಾವುದಾದರೊಂದು ದೇವರ ಹೇಸರಿನಲ್ಲಿ ಆಗಾಗ್ಗೆ ನಡೆಯುವ ಬೇರೆ ಬೇರೆ ಕಡೆಗಳಿಂದ ಯಾತ್ರಾರ್ಥಿಗಳನ್ನು ಆಕರ್ಷಿಸುವ ಹಬ್ಬ. ಆ ಪದದ ಅರ್ಥ ವಿಶಾಲವಾದದ್ದು, ಧಾರ್ಮಿಕ ಸ್ವರೂಪದ ಹಬ್ಬ ಕಾಲಕ್ರಮೇಣ ಸಾಂಸ್ಕೃತಿಕ ಮಹತ್ವವನ್ನು ಪಡೆದು ವಾಣಿಜ್ಯ ಮುಖವನ್ನು ರೂಪಿಸಿಕೊಂಡಾಗ ಜಾತ್ರೆಯಾಯಿತು. ಹೀಗೆ ಜನರ ಬದುಕಿನಲ್ಲಿ ಮಹತ್ವಯುತವಾದ ಹಬ್ಬ ಮತ್ತು ಜಾತ್ರೆಗಳು ಸಂತೋಷದ ಚಿಲುಮೆಯಾಗಿ ಹೊರ ಹೊಮ್ಮುವುದು ಮಾತ್ರ ಸತ್ಯ ಸಂಗತಿಯಾಗಿದೆ. ಹಬ್ಬ ಮತ್ತು ಜಾತ್ರೆಗೆ ಸಂಬಂಧಿಸಿದಂತೆ ಕೆಲವು ಗಾದೆಗಳು ಇಂದಿಗೂ ಚಾಲ್ತಿಯಲ್ಲಿವೆ. ಅವರವರ ಭಾವಕ್ಕೆ ಅವರವರ ಭಕ್ತಿಗೆ, ಜನ ಸೇರಿದರೆ ಜಾತ್ರೆ, ಹಬ್ಬದೂಟ ಜಾತ್ರೆ ನೋಟ, ಹಳ್ಳಿ ಊರಿಗೆ ಹನುಮಪ್ಪ ಚೆಂದ, ದೇವನೊಬ್ಬ ನಾಮ ಹಲವು, ಸಂಕಟ ಬಂದಾಗ ವೆಂಕಟರಮಣ, ಜಾತ್ರೆಯಾದ ಮೇಲೆ ಪರಿಷೆಗೇನು ಕೆಲಸ, ಗುರುವಿಲ್ಲದ ಮಠ ಹಿರಿಯರಿಲ್ಲದ ಮನೆ ಎರಡು ಒಂದೇ, ನಡೆದುಕೊಂಡೆ ಪಡೆದುಕೊಂಡೆ, ವರ ಕೊಟ್ಟ ದೇವರಿಗೆ ಶಿರ ಕೊಡು, ಹೋಳಿಗೆ ಇಲ್ಲದ, ಹಬ್ಬವಿಲ್ಲದೆ ರಥವಿಲ್ಲದ ಜಾತ್ರೆಯಿಲ್ಲ, ದೀವಳಿಗೆ ಹಬ್ಬ ದೇವೇಂದ್ರ ವೈಭೋಗ ಬೆಳೆದು ಬೀಗ್ಯಾಳೋ ಭೂಮಿತಾಯಿ ತಾನಂದನೋ, ದೇವಿ ಪ್ರಮಾನವೇ ತಂತ್ರ ಭಂಡಾರವೇ ಬಂಡವಾಳ, ಉಂಡದ್ದೆ ಯುಗಾದಿ ಮಿಂದದ್ದೆ ದೀವಳಿಗೆ, ತಾನೂ ಮಾಡಿದ್ದು ಇರುವತನಕ ದೇವರು ಮಾಡಿದ್ದು ಕೊನೆಯತನಕ, ಕೊಲ್ಲುವವನೊಬ್ಬನಿದ್ದರೇ ಕಾಯುವವನು ಒಬ್ಬನಿರುತ್ತಾನೆ, ಯಾರದೋ ದುಡ್ಡು ಯಲ್ಲಮ್ಮನ ಜಾತ್ರೆ, ಪಾಲಿಗೆ ಬಂದದ್ದು ಪಂಚಾಮೃತ ಇವೆಲ್ಲಾ ಗಾದೆಗಳು ಹಬ್ಬ ಹರಿದಿನ, ಜಾತ್ರೆ ಉತ್ಸವ ಮತ್ತು ದೈವಕ್ಕೆ ಸಂಬಂಧಿಸಿದ ಗಾದೆಗಳಾಗಿರುತ್ತವೆ. ಒಟ್ಟಾರೆಯಾಗಿ ಹಬ್ಬ ಮತ್ತು ಜಾತ್ರೆಗಳು ಅವಿನಾಭಾವ ಸಂಬಂಧ ಪಡೆದು ಜೊತೆಯಲ್ಲಿಯೇ ನಡೆಯುವಂತಹವು ಅವುಗಳು ಧಾರ್ಮಿಕ ಮತ್ತು ಭಕ್ತಿಯ ಸಂತೋಷ ಮತ್ತು ಸಡಗರದ ಏಕತೆಗೆ ಸಾಕ್ಷೀಭೂತವಾಗಿವೆ.

**೭. ಶ್ರೀ ಕೋಟೆ ಆಂಜನೇಯ ಸ್ವಾಮಿ ಜಾತ್ರೆ**

ಶಿವಮೊಗ್ಗ ಜಿಲ್ಲೆಯಾದ್ಯಂತ ಹಲವಾರು ಆಂಜನೇಯ ದೇವರಗುಡಿಗಳನ್ನು ಕಾಣಬಹುದಾಗಿದೆ. ಹಳ್ಳಿ ಊರಿಗೆ ಹನುಮಪ್ಪ ಎನ್ನುವ ನಾಣ್ಣುಡಿ ಇಂದಿಗೂ ಪ್ರಚಲಿತದಲ್ಲಿದೆ. ಶಿವಮೊಗ್ಗ, ತೀರ್ಥಹಳ್ಳಿ, ಸಾಗರ, ಸೊರಬ, ಶಿಕಾರಿಪುರ, ಭದ್ರಾವತಿ ಮತ್ತು ಹೊಸನಗರ ತಾಲೂಕುಗಳಲ್ಲಿ ಮತ್ತು ಗ್ರಾಮೀಣಮಟ್ಟದಲ್ಲಿ ಆಂಜನೇಯ ದೇವರ ಗುಡಿಗಳು ಕಂಡು ಬರುತ್ತವೆ. ಬಹುಸಂಖ್ಯಾತ ಹಿಂದುಗಳು ಪೂಜಿಸುವ ದೈವವೆಂದರೆ ಆಂಜನೇಯ ದೈವ ಪ್ರತಿ ಶನಿವಾರ ಆಂಜನೇಯ ಸ್ವಾಮಿಯ ವಾರವೆಂದು ತಿಳಿದು ಭಕ್ತಾಧಿಗಳು ಸರತಿ ಸಾಲಿನಲ್ಲಿ ನಿಂತುಕೊಂಡು ಆಂಜನೇಯ ಸ್ವಾಮಿ ದೇವರ ಮೊರೆ ಹೋಗುತ್ತಾರೆ. ಜನಪದರು ಅಥವಾ ಬುಡಕಟ್ಟು ಸಮುದಾಯದವರು ಹೆಚ್ಚಿನ ಸಂಖ್ಯೆಯಲ್ಲಿರುವುದು ಶಿವಮೊಗ್ಗ ಜಿಲ್ಲೆಯಲ್ಲಿ ಅವರ ಆರಾಧ್ಯದೈವವೇ ಆಂಜನೇಯ ದೇವರು. ಹಾಗಾಗಿ ಮಹಿಳೆಯರು, ಪುರುಷರು, ಮಕ್ಕಳಾದಿಯಾಗಿ ಎಲ್ಲರೂ ಶ್ರೀ ಆಂಜನೇಯ ಸ್ವಾಮಿಯ ಮೊರೆ ಹೋಗುತ್ತಾರೆ. ಏನೇ ಕಷ್ಟ ಕಾರ್ಪಣ್ಯ ಬರಲಿ, ಏನೇ ತೊಂದರೆಗಳು ಬರಲಿ ಆಂಜನೇಯ ಸ್ವಾಮಿಯ ಮೊರೆ ಹೋಗುವುದಂತೂ ಸತ್ಯ. ಶಿವಮೊಗ್ಗ ನಗರದ ಕೋಟೆಯ ರಸ್ತೆಯಲ್ಲಿರುವ ಶ್ರೀ ಕೋಟೆ ಆಂಜನೇಯ ಸ್ವಾಮಿಯ ಜಾತ್ರೆ ಪ್ರತಿ ವರ್ಷ ಫೆಬ್ರವರಿ ಅಥವಾ ಮಾರ್ಚ ತಿಂಗಳಲ್ಲಿ ನಡೆಯುತ್ತದೆ. ಬಹುಪಾಲು ಬೇಡರ ಮನೆ ದೈವವೆಂದರೆ ಆಂಜನೇಯ ದೈವ. ಹಾಗಾಗಿ ಶಿವಮೊಗ್ಗ ಜಿಲ್ಲೆಯಾದ್ಯಂತ ಇರುವ ಬೇಡರು ಶ್ರೀ ಕೋಟೆ ಆಂಜನೇಯ ಸ್ವಾಮಿ ದೇವರ ಜಾತ್ರೆಯಲ್ಲಿ ಭಾಗವಹಿಸುತ್ತಾರೆ.

**ಆಂಜನೇಯ ಸ್ವಾಮಿಯ ಹಿನ್ನೆಲೆ**

ಸಾಮಾನ್ಯವಾಗಿ ನಮಗೆಲ್ಲಾ ತಿಳಿದಿರುವಂತೆ ಆಂಜನೆಯ ಅಥವಾ ಹನುಮಂತ ದೇವರು ಮಂಗನ ಮೂತಿಯ, ಬಾಲಯುಳ್ಳ, ಜನಿವಾರ ಧರಿಸಿದ, ಚಂಡಿಕೆ ಬಿಟ್ಟ, ರಾಮನ ಸೇವಕ, ಸೀತೆಯನ್ನು ಶೋಧಿಸಿದ ಜಾಣ ಲಂಕೆಯನ್ನು ಸುಟ್ಟ ಧೀರ. ಈ ವಿವಿಧ ಸಹಾಸಗಳನ್ನು ಕುರಿತ ಒಂದು ಸುದೀರ್ಘ ವಿಷಯವನ್ನು ೧೦ ಅಥವಾ ೧೧ ನೆಯ ಶತಮಾನದಲ್ಲಿದ್ದ ಭೋಜರಾಜನ ಆಪೇಕ್ಷೆಯಂತೆ ದಾಮೋದರ ಎಂಬಾತನು ಬರೆದಿದ್ದಾನೆ. ಹನುಮಂತ ಅಶ್ವತ್ಥಾಮ, ಪರಶುರಾಮ, ಬಲಿ, ವ್ಯಾಸ, ವಿಭೀಷಣ ಮತ್ತು ಕೃಪ ಈ ಜನ ಚಿರಂಜೀವಿಗಳು ಎಂದು ಪುರಾಣಗಳು ಹೇಳುತ್ತವೆ. ಇವರಲ್ಲಿ ಹನುಮಂತ ಮತ್ತು ವಿಭೀಷಣರು ಮಾತ್ರ ಜಗತ್ತು ಲಯವಾಗುವವರಗೆ ಇರುವವರು ಉಳಿದವರೆಲ್ಲಾ ದೀರ್ಘಾಯುಷಿಗಳು ಮಾತ್ರ. ಮಾನವನು ವಿಕಾಸಗೊಂಡ ಮಂಗನು. ಕೀಳು ಸ್ವಭಾವದವನನ್ನು, ಚಂಚಲಚಿತ್ತಯುಳ್ಳವನನ್ನು ಈಗಲೂ ಮಂಗ ಎಂದೆ ಕರೆಯುತ್ತೇವೆ. ಹನುಮಂತನ ಪೂಜೆ ಮಾಡುವದರ ಗೂಢಾರ್ಥವೆಂದರೆ ಮಾನವನು ತನ್ನ ಹಳೆಯ ರೂಪವನ್ನು ಪೂಜೆ ಮಾಡಿದಂತೆ ಎಂದು ಹೇಳಲಾಗುತ್ತದೆ. ಮಂಗನು ಮಾನವನ ಆತ್ಮ ಹೊಂದಿದೆ ಎಂಬ ಕಲ್ಪನೆಯೊಂದಿದೆ. ಇದರಿಂದ ಅದನ್ನು ಕೊಲ್ಲಬಾರದು ಎಂಬ ನಂಬಿಗೆ ಪ್ರಚಲಿತದಲ್ಲಿ ಬಂದಿದೆ. ಈಗಲೂ ಮಂಗ ಸತ್ತರೆ ಹನುಮಂತನ ಗುಡಿಯಲ್ಲಿ ಕೂಡಿಸಿ ಮಾನವನಿಗೆ ಮಾಡುವ ಸಂಸ್ಕಾರದಂತೆಯೇ ಮಾಡುತ್ತಾರೆ. ಮಂಗನನ್ನು ಕೊಂದವನು ಮರುಜನ್ಮದಲ್ಲಿ ಮಂಗನಾಗಿಯೇ ಜನಿಸುವನೆಂಬ ನಂಬಿಕೆ ಇದೆ. ಅವಳಿ

ಮಕ್ಕಳಲ್ಲಿ ಒಂದು ಕಾದಾಡುವ ಶಕ್ತಿ ಇದ್ದು ಅದು ಸಣ್ಣ ಮಂಗನ ರೂಪದಲ್ಲಿ ಇರುತ್ತದೆ ಎಂದು ಪ್ರೋಟೊನೊವೋದ ಜನಾಂಗ ಭಾವಿಸುತ್ತಾರೆ. ಅಂತಹ ಮಕ್ಕಳನ್ನು ಯಾವುದೇ ಕಾರಣಕ್ಕಾಗಿ ಕೊಲ್ಲಲಾಗುವುದಿಲ್ಲ ಕೊಮ್ಮಿಯನ್ನರು ಗೋರಿಲ್ಲಾದ ಮಾಂಸವನ್ನು ತಿನ್ನುವುದಿಲ್ಲ ಏಕೆಂದರೆ ಅದು ಮಾನವನ ತಂದೆ ಎಂಬ ನಂಬಿಕೆ ಅವರಲ್ಲಿ ಇದೆ. ಆಫ್ರಿಕನ್ನರು ಮತ್ತು ದಕ್ಷಣ ಅಮೆರಿಕನ್ನರು ಮಂಗಗಳಿಗೆ ಮಾತು ಬರುತ್ತವೆ ಆದರೆ ತಮಗೆ ಕೆಲಸ ಹಚ್ಚಬಹುದೆಂಬ ಕಾರಣಕ್ಕಾಗಿ ಹೆದರಿ ಅವು ಮಾತನಾಡುವುದಿಲ್ಲ ಎಂದು ನಂಬುತ್ತಾರೆ. ಅವರಲ್ಲಿಯೇ ಒಂದು ಗುಂಪು ಮಂಗವು ಒಂದು ಹೆಣ್ಣನ್ನು ಕಾಡಿಗೆ ಕದ್ದೊಯ್ದ ಕಥೆಯನ್ನು ಹೇಳುತ್ತದೆ. ಹೀಗೆ ಪ್ರಪಂಚದ ಹಲವೆಡೆಗಳಲ್ಲಿ ಹಾಗೂ ಅನಾಗರೀಕರಾದ ಕಾಡು ಜನಾಂಗಗಳಲ್ಲಿ ಈ ರೀತಿ ಬಾಲವುಳ್ಳ ಮಾನವನ ಕಥೆಗಳಿವೆ. ಹೀಗೆ ಜಗತ್ತಿನಾದ್ಯಂತ ಮಂಗ, ಮಾನವರಲ್ಲಿ ಸಂಬಂಧವನ್ನು ಕಲ್ಪಿಸುವ ಅನೇಕ ನಂಬಿಕೆಗಳಿವೆ. ಹನುಮಂತನ ಪೂಜೆ ಮಾಡುವ ಗೂಡಾರ್ಥವೆಂದರೆ–ಮಾನವನು ತನ್ನ ಹಳೆಯ ರೂಪವನ್ನು ಪೂಜೆ ಮಾಡಿದಂತೆ ಎಂದು ಹೇಳಲಾಗುತ್ತದೆ. ಹನುಮಂತನ ಪೂಜೆ ಭಾರತದಲ್ಲಿಷ್ಟೆ ಅಲ್ಲದೇ, ಜಗತ್ತಿನ ಹಲವೆಡೆಗಳಲ್ಲಿ ಕಾಣಸಿಗುತ್ತದೆ. ಟಾಗೊ ಮತ್ತು ಆಫ್ರಿಕಾಗಳ ಕೆಲವು ಹಳ್ಳಿಗಳ ಜನರು ಹನುಮಂತ ದೇವರಿಗೆ ದಿನಾಲು ನೈವೇದ್ಯ ಅರ್ಪಿಸುತ್ತಾರೆ. ಇದರಿಂದ ತಮ್ಮ ಲಾಭದಾಯಕವಾದ ಬಯಕೆ ಈಡೆರುತ್ತದೆಂದು ಅವರು ನಂಬುತ್ತಾರೆ. ಕುನಾಮರು ಮತ್ತು ಬಾರಿ ಜನಗಳು ಕೂಡ ಹನುಮಂತನನ್ನು ಪೂಜಿಸುತ್ತಾರೆಂದು ತಿಳಿದು ಬರುತ್ತದೆ.

ಹನು(ನೂ) ಎಂದರೆ ಉಬ್ಬಿದ ಗದ್ದ ಅಥವಾ ದವಡೆ. ಹನುಮಂತನು ಜನಿಸುತ್ತಲೆ ಸೂರ್ಯನನ್ನು ಹಣ್ಣೆಂದು ಭಾವಿಸಿ ನುಂಗಲು ಹಾರಿದಾಗ, ಕೆಳಗೆ ಬಿದ್ದು ಗದ್ದಕ್ಕೆ (ದವಡೆಗೆ) ಪೆಟ್ಟಾಯಿತು. ಅಥವಾ ಇಂದ್ರ ಇಲ್ಲವೆ ಸೂರ್ಯ ಕಪಾಳಕ್ಕೆ ಹೊಡೆದರು. ಆಗ ಗದ್ದ ಊದಿಕೊಂಡಿತು. ಈ ಮುಂತಾದ ಕಾಲ್ಪನಿಕಗಳು ನಮ್ಮಲ್ಲಿ ಪ್ರಚಲಿತದಲ್ಲಿವೆ. ಮಾತು ಬಾರದವಳನ್ನು ಮೂಕಿ ಎಂದು ಅಣಕದ ಹೆಸರಿನಿಂದ ಕರೆಯುವಂತೆ, ಊದಿದ ಗದ್ದ ಅರ್ಥಾತ್ 'ಹನು' ಉಳ್ಳವನನ್ನು ಹನುಮಂತ, ಅಂದರೆ ಊದಿಕೊಂಡ ಗದ್ದದವ ಎಂಬ ಅರ್ಥ ಬರುವಂತೆ ಅಣಕದ ಹೆಸರು ಬಂದಂತೆ ತೋರುತ್ತದೆ. ಆದರೆ ಆದಿ ಮಾನವನ ಮುಖ ಉಬ್ಬಿಕೊಂಡ ಮುಖವೇ ಆಗಿರುವುದನ್ನು ಗಮನಿಸಬೇಕು. 'ಹನು' ಎಂದರೆ ಅಜಾನುಬಾಹು ಎಂಬ ಅರ್ಥವು ಬರಬಹುದು. ಹನುಮಿಸು ಎಂದರೆನೆಗೆ, ಹಾರು, ಲಂಘಿಸು ಎಂಬ ಅರ್ಥಗಳು ಬರುವುದರಿಂದ, ಹಾರಾಡುವ ಅಸಾಧರಣ ಶಕ್ತಿ ಹೊಂದಿದವನೆಂಬ ಕಲ್ಪನೆಯಿಂದಲೂ ಹನುಮಂತ ಎಂಬ ಹೆಸರು ಬಂದಿರಬಹುದಾಗಿದೆ. ಪೌರಾಣಿಕ ಕಥೆಯಂತೆ–ಆಂಜನೆನಾದೇವಿಯ ಮಗನಾದ್ದರಿಂದ ಹನುಮಂತನಿಗೆ ಆಂಜನೇಯ ಎಂಬ ಹೆಸರು ಬಂದಿತು. ಆದರೆ ಅಂಜನ ಎಂದರೆ ಬಯಕೆಗಪ್ಪು ಎಂಬ ಅರ್ಥವಿದೆ. ಹನುಮಂತನ ಮೂರ್ತಿಗೆ ಸವರಿದ ಎಣ್ಣೆಯಿಂದ ಜಿಗುಟಾದ ಕಪ್ಪುಮಸಿ ಮೆತ್ತಿಕೊಂಡಿರುತ್ತದೆ. ಅವನಿಗೆ ಹರಕೆ ಹೊತ್ತು, ಪ್ರಸಾದವೆಂದು ಈ ಕಪ್ಪು ಮಸಿಯನ್ನು ಹಣೆಗೆ ಹಚ್ಚಿಕೊಳ್ಳುವರು. ಹನುಮಂತನ ಪ್ರತೀಕವಾಗಿ ಅನೇಕ ಕಪ್ಪು

ಸಂಕೇತಗಳು ಬಯಕೆಯಾಗುತ್ತವೆ: ಕರಿಯ ದಾರ, ಕಪ್ಪು ಮಸಿ, ಕರಿಯ ಮಣ್ಣಿಗಳು, ಕಣ್ಣಿನ ಕಾಡಿಗೆಗಳು, ಹನುಮಂತನ ಮೂರ್ತಿ ಇರುವ ಕಪ್ಪು ಬಿಲ್ಲೆ ಇತ್ಯಾದಿಗಳು ಹೀಗೆ ತಮ್ಮ ಬಯಕೆಯನ್ನು ಈಡೇರಿಸುವ ಈ ಕಪ್ಪು ನಿಶಾನೆಯ ದೇವರನ್ನು ಆಂಜನೇಯ ಅಂದರೆ ಬಯಕೆಗಪ್ಪುಳ್ಳವನು ಎಂಬರ್ಥ. ಬರುವಂತೆ ಹೆಸರಿಟ್ಟು ಕರೆದಿರಲೂ ಬಹುದಾಗಿದೆ. ರೂಢಿಯಲ್ಲಿ ಕರಿಹನುಮ ಎಂಬ ಮಾತು ಕೇಳುತ್ತೇವೆ. ಇನ್ನೊಂದು ಪುರಾಣ ಕಥೆಯಂತೆ– ಈತ ಗಾಳಿ ದೇವರು. ಮರುತನಿಗೆ ಹುಟ್ಟಿದರಿಂದ ಮಾರುತಿ ಎಂಬ ಹೆಸರು ಬಂದಿದೆ ಎನ್ನಲಾಗುತ್ತದೆ. ಆದರೆ ಈತನಲ್ಲಿ ಅಂತರಿಕ್ಷದಲ್ಲಿ ಹಾರಾಡುವ ವಿಲಕ್ಷಣ ಶಕ್ತಿ ಇರುವುದೆಂಬ ಕಲ್ಪನೆಯಿರುವುದರಿಂದ ಮಾರುತಿ ಎಂಬ ಹೆಸರು ಬಂದಿರಲೂ ಸಾಧ್ಯವಿದೆ. ಅವನ ಹೆಸರಿನಲ್ಲಿ ಹೊರಡುವ ಈ ಎಲ್ಲ ಅನೇಕಾರ್ಥಗಳ ಹಿನ್ನೆಲೆಯಲ್ಲಿ ಅವನ ಬಗೆಗಿನ ಪೌರಾಣಿಕ ಮೂಲಗಳು ಗೊಂದಲ ಎಬ್ಬಿಸುತ್ತವೆ. ಮೇಲಿನ ವಿವರಗಳನ್ನು ಲಕ್ಷದಲ್ಲಿರಿಸಿಕೊಂಡು ಅವನ ಹುಟ್ಟಿನ ಪೌರಾಣಿಕ ಮೂಲಗಳನ್ನು ಅವಲೋಕಿಸಬಹುದಾಗಿದೆ. ಒಂದು ಪೌರಾಣಿಕ ಕಥೆಯಂತೆ : ತಾಯಿ ಅಂಜನಾದೇವಿ, ತಂದೆ ಕೇಸರಿ, ಇಬ್ಬರೂ ಗಂಧರ್ವ ಲೋಕಕ್ಕೆ ಸೇರಿದವರು. ಸ್ಪುರದ್ರೂಪಿ ಆಂಜನೇಯನಿಗೆ ಬಹಳ ದಿನಗಳವರೆಗೆ ಮಕ್ಕಳಾಗಲಿಲ್ಲ. ವನದಲ್ಲಿ ತಿರುಗಾಡುತ್ತಿರುವಾಗ ವಾಯುದೇವನು ಈಕೆಯ ಸೌಂದರ್ಯಕ್ಕೆ ಮಾರುಹೋಗಿ, ಇವಳೊಂದಿಗೆ ಕೂಡಿದುದರಿಂದ ಆಂಜನೇಯ ಅಥವಾ ಮಾರುತಿ ಜನಿಸಿದನು. ಇದು ಪುರಾಣ ಹೇಳುವ ಕಥೆ. ವೀರಶೈವ ಪುರಾಣಗಳು ಹನುಮಂತನು ಶಿವನ ಮಗನೆಂದು ಹೇಳುತ್ತವೆ. ಕಪಿ ಕೂಡುವಿಕೆಯನ್ನು ಕಂಡ ಶಿವನು, ಪಾರ್ವತಿಯೊಂದಿಗೆ ಅವುಗಳಂತೆ ಕೂಡಿದಾಗ ಆಕೆ ಗರ್ಭಧರಿಸಿದಳು. ಆದರೆ ಆ ಗರ್ಭದ ಭಾರ ತಾಳಲಾಗದೆ, ವಾಯುವಿನ ಮೂಲಕ ಕುರುಡಿ ಅಂಜನಾದೇವಿಗೆ ಮುಟ್ಟಿಸಲು– ಅದನ್ನು ಸೇವಿಸಿದಳು. ಅಥವಾ ಕಪಿಗಳಂತೆ ಕೂಡುವಾಗ ವೀರ್ಯ ಸ್ಖಲನವಾಗಿ, ಗಿಡದ ಎಲೆಯ ಮೇಲೆ ಬಿದ್ದಿತು. ಅದೇ ಗಿಡದ ಕೆಳಗೆ ಕುಳಿತ ಕುರುಡಿ ಅಂಜನಾದೇವಿಯ ಕೈಯಲ್ಲಿ ಆ ಎಲೆ ಬೀಳಲು, ಆಕೆ ಅದನ್ನು ಸೇವಿಸಿದಳು. ಹೀಗೆ ಗರ್ಭಧರಿಸಿ ಆಂಜನೇಯನನ್ನು ಹೆತ್ತಳು ಇತ್ಯಾದಿ. ಇಲ್ಲಿ ಗಮನಾರ್ಹ ಅಂಶವೆಂದರೆ–ವೈದಿಕರು, ತಮ್ಮ ಪುರಾಣಗಳಲ್ಲಿ ಹನುಮಂತನು ತಮ್ಮ ದೇವರಿಗೆ ಸಂಬಂಧಪಟ್ಟವನು ಎಂಬಂತೆ ಬಣ್ಣಿಸಿದರೆ, ವೀರಶೈವ ತಮ್ಮ ದೇವರಿಗೆ ಸಂಬಂಧಪಟ್ಟವನು ಎಂಬಂತೆ ಬಣ್ಣಿಸಿದ್ದರೆ, ವೀರಶೈವ ತಮ್ಮ ದೇವತೆಗಳಿಗೆ ಸಂಬಂಧಪಟ್ಟಂತೆ ವರ್ಣಿಸಲು ಹೆಣಗಾಡಿದ್ದಾರೆ ಎಂಬುದು. ಈ ಮಾತನ್ನು ನೆನಪಿನಲ್ಲಿಟ್ಟುಕೊಂಡು ಇನ್ನಷ್ಟು ವಿಷಯ ನೋಡೋಣ: ವೈದಿಕರು ರಾಮಾಯಣದಲ್ಲಿ ಹನುಮಂತನನ್ನು ರಾಮನ ಕೇವಲ ಭಕ್ತನನ್ನಾಗಿ, ಸ್ವಾಮಿಕಾರ್ಯ ನಿರ್ವಹಿಸಲು ಕಂಕಣಬದ್ಧನಾಗಿ ನಿಂತ ಸೇವಕನನ್ನಾಗಿ ಚಿತ್ರಿಸುತ್ತಾರೆ. ಹಾಗೆಯೇ ವೀರಶೈವರು ಹನುಮಂತನ ಲಿಂಗಧಾರಣ ಪ್ರಸಂಗವನ್ನು ನಿರೂಪಿಸುತ್ತಾರೆ. ಏನೆಲ್ಲಾ ಸೇವೆಯನ್ನು ಮಾಡಿದರು ತಾನು ಬಯಸಿದ ಅನುಗ್ರಹಗಳನ್ನು ರಾಮನಿಂದ ಕೊಡಲಾಗಲಿಲ್ಲವೆಂಬ ನಿರಾಶೆಯಿಂದ ಹನುಮಂತನು ವೀರಭದ್ರನಿಂದ ಲಿಂಗದೀಕ್ಷೆ ಪಡೆದು ಮುಕ್ತಿ ಹೊಂದಿದನೆಂದು ವೀರಶೈವ ಪುರಾಣಗಳು ವರ್ಣಿಸುತ್ತವೆ. ಇಲ್ಲಿ

ರಾಮನನ್ನು ಕಡೆಗಣಿಸಿ, ತಮ್ಮ ದೈವರಿಂದ ಹನುಮಂತನಿಗೆ ದೀಕ್ಷೆ ಕೊಡಿಸಿ, ಅವನನ್ನು ತಮ್ಮ ದೇವರ ಬಳಗದಲ್ಲಿ ಕೂರಿಸಲು ವೀರಶೈವರು ಪ್ರಯತ್ನಿಸಿರುವುದು ಎದ್ದು ಕಾಣುತ್ತದೆ. ಇನ್ನು ಇಸ್ಲಾಂ ಕಟ್ಟು ಕಥೆಗಳನ್ನು ನೋಡಿದರೆ, ಅವರು ಮೌಲಾಲಿಯಿಂದ ಹನುಮಂತನು ಸೋಲನ್ನನುಭವಿಸಿದ ಕಥೆಯನ್ನು ಬಣ್ಣಿಸುತ್ತಾರೆ. ನನಗೆ ದೊರೆತ ಒಂದು ರಿವಾಯತ ಹಾಡಿನ ಸಾರಾಂಶ ಹೀಗಿದೆ: ಹನುಮಂತನು ಎರಡು ಗುಡ್ಡಗಳ ಮಧ್ಯೆ ವಾಸವಾಗಿ, ಬೇಗೂ-ಬೆಳಗೂ ತಾಲೀಮ ಮಾಡುತ್ತಿದ್ದನು. ಒಂದು ದಿನ ಮೌಲಾಲಿ ತಿರುಗಾಡುತ್ತ ಆ ಗುಡ್ಡದೆಡೆಗೆ ಬರುವನು. ಹನುಮಂತನ ಪರಿಚಯವಾಗುವುದು. ತಾನು ಮೌಲಾಲಿಯನ್ನು ಮೀರಸಲೆಂದೇ ಇಷ್ಟೆಲ್ಲಾ ಶ್ರಮ ಪಡುತ್ತಿರುವುದಾಗಿ ಹನುಮಂತನು ಹೇಳುವನು. ಆಗ ಮೌಲಾಲಿಯು ತಾನೂ ಮೌಲಾಲಿಯ ಸೇವಕನೆಂದು ಮೊದಲು ತನ್ನೊಂದಿಗೆ ಗೆದ್ದು ನಂತರ ಮೌಲಾಲಿಯೊಂದಿಗೆ ಕುಸ್ತಿ ಆಡಬಹುದೆಂದು ಹೇಳಿವನು. ಇಬ್ಬರಿಗೂ ಕುಸ್ತಿ ಪ್ರಾರಂಭವಾಗುತ್ತದೆ. ಮೌಲಾಲಿಯು ಹನುಮಂತನ ಕಪಾಳಕ್ಕೆ ಏಟು ಕೊಡುತ್ತಾರೆ. ತತ್ಪರಿಣಮವಾಗಿ ಅವನ ಮುಸುಡಿ ಊದಿಕೊಳ್ಳುತ್ತದೆ. ಮುಖ ಎಡಕ್ಕೆ ತಿರುಗಿಕೊಳ್ಳುತ್ತದೆ. ಹನುಮಂತನು ಮೌಲಾಲಿಗೆ ಶರನು ಹೋಗುತ್ತಾನೆ.

ಈ ಮೇಲಿನ ವಿವರಗಳನ್ನು ಗಮನಿಸಿದರೆ-ಬ್ರಾಹ್ಮಣರು, ಮುಸ್ಲಿಂರು ಮತ್ತು ವೀರಶೈವರು ಹನುಮಂತನು-ನನ್ನ ತನ್ನವನೆಂದು ಖೊಟ್ಟಿ ಸಾಕ್ಷಿಗಳೆಂದು ನಿರ್ಮಿಸಿ, ಅವನ ಚರಿತ್ರೆಯನ್ನು ಮಸುಕುಗೊಳಿಸಿದ್ದಾರೆ. ತಮ್ಮ ತಮ್ಮ ದೇವರ ಅಡಿಗಳಲ್ಲಿ ಹಾಕಿ, ಸೇವಕರು ಎಂದು ಬಣ್ಣಿಸಲು ಹೆಣಗಾಡಿದ್ದಾರೆ.- ಎಂಬುದು ನಮಗೆ ಹೊಳೆಯುತ್ತದೆ. ಆದುದರಿಂದ ಹನುಮಂತನು ನಿಜವಾದ ವೃತ್ತಾಂತ ಬೇರೆ ಏನೋ ಇದ್ದು, ಅವನು ರಾಮನಿಗಾಗಲಿ, ವೀರಭದ್ರನಿಗಾಗಲಿ ಮತ್ತು ಮೌಲಾಲಿಗಾಗಲಿ ಸಂಬಂಧಿಸಿವನಿರಲಿಕ್ಕಿಲ್ಲ ಎಂಬ ಅನುಮಾನಗಳು ಹುಟ್ಟಿಕೊಳ್ಳುತ್ತವೆ. ಹಿಂದುಗಳು ಅನೇಕ ಪ್ರಾಣಿ ಲಾಂಛನಗಳನ್ನು ಹೊತ್ತ ದೇವರುಗಳನ್ನು ಪೂಜಿಸುತ್ತಾರೆ. -ಹನುಮಂತ, ಗಣೇಶ ಮತ್ತು ನಾಗ ಇತ್ಯಾದಿ. ಇಂಥವುಗಳಲ್ಲಿ ಅತೀ ಪ್ರಮುಖ ಹಾಗೂ ಪ್ರಾಚೀನವೆಂದರೆ ಹನುಮಂತ ದೇವರು. ಜನಪದರಲ್ಲಿ ಬಂಜೆಗೆ ಮಕ್ಕಳನ್ನು ಕೊಡುವ ದೇವರಾಗಿ, ಒಕ್ಕಲಿಗರಿಂದ ಪೂಜೆಗೊಳ್ಳುವ, ಅವರ ಬೆಳೆಯನ್ನು ಕಾಪಾಡುವ ದೈವವಾಗಿ ತೋರುತ್ತಾನೆ. ಆದುದರಿಂದ ಹನುಮಂತನ ಆರಾಧನ ಪದ್ಧತಿ ಅನಾದಿ ಕಾಲಗಳ ಜನಾಂಗಗಳಲ್ಲಿ ಇರಬೇಕು. ನಂತರ ಆರ್ಯರು ಈ ಪದ್ಧತಿಯನ್ನು ಸ್ವೀಕರಿಸಬೇಕು. ಅಂದರೆ, ಹನುಮಂತನು ಆರ್ಯರಿಗೆ ಸಂಬಂಧಿಸಿದ, ಅತವಾ ಆದಿಮ ಜನಾಂಗ ಇಲ್ಲವೆ ಕೊನೆಗೆ ಬ್ರಾಹ್ಮಣರಲ್ಲದವರಿಂದ ಪೊಜೆಗೊಳ್ಳುತ್ತಾ ಬಂದು, ನಂತರ ಅನೇಕ ದೇವತೆಗಳೊಂದಿಗೆ ಈತನನ್ನೂ ಎಲ್ಲಾ ಜನಾಂಗದವರು ಪೂಜೆ ಮಾಡಲು ಪ್ರಾರಂಭಿಸಿರಬೇಕು ಎಂದು ಕ್ರೂಕ್ ಅವರು ಅಭೀಪ್ರಯವನ್ನು ಪಡುತ್ತಾರೆ. ವೇದಗಳಲ್ಲಿ ಆಗಾಗಲೇ ಒಂದ ಜನಾಂಗ ಒಪ್ಪಿಕೊಂಡ ಧರ್ಮವನ್ನು ಹೇಳಲಾಗುತ್ತದೆ. ಆದುದರಿಂದ ಹನುಮಂತನು ಹೀಗೆ ಯಾವುದೇ ಒಂದು ಧರ್ಮದವರು ಅಧಿಕೃತವಾಗಿ ಸ್ವೀಕರಿಸದೆ ಪೂಜಿಸಲ್ಪಡುವ ದೇವರಾಗಿರಬೇಕೆಂದು ಊಹಿಸಲಾಗುತ್ತದೆ. ಹೀಗಾಗಿ ಹನುಮಂತನ ಬಗ್ಗೆ ಯಾವುದೇ

ಅಧಿಕೃತ ದಾಖಲೆಗಳು ನಮಗೆ ಸಿಗುವುದಿಲ್ಲ. ಆದರೂ ಮುಖ್ಯವಾಗಿ ಅವನು ಒಂದು ಜಾತಿ ವರ್ಗಕ್ಕೆ ಸಂಬಂಧಪಟ್ಟ ದೇವರಾಗಿದ್ದು, ಆ ಮೂಲವನ್ನು ಗುರುತಿಸಲು ನಮ್ಮಿಂದ ಸಾಧ್ಯವಿಲ್ಲ. ಹೀಗಿದ್ದೂ ಹನುಮಂತನು ಡೊಂಬ ವಂಶಕ್ಕೆ ಸೇರಿದವನೂ ಮೇದಾರ ಗೋತ್ರಕ್ಕೆ ಸಂಬಂಧಿಸಿದವನೂ ಎಂದು ಮುಂತಾಗು ಊಹಿಸಲಾಗುತ್ತದೆ. ಈ ಹನುಮಂತನ ಪ್ರಸ್ತಾಪ ವೇದಗಳಲ್ಲಿ ಬರುವುದೇ ಇಲ್ಲ ಎಂಬ ಕಾರಣಕ್ಕಾಗಿ ಅವನ ಆರಾಧನೆ ಬಹಳ ಪ್ರಾಚೀನವಾಗಿರದೆ ಒಂದು ಕಾಡು ಜನಾಂಗದಿಂದ ದತ್ತು ಬಂದುದಾಗಿರಬೇಕೆಂದು ಹೇಳಲಾಗುತ್ತದೆ. ಆದರೆ ಋಗ್ವೇದದಲ್ಲಿ ವೃಷಾಕಪಿ ಎಂಬ ಪದ ಬರುತ್ತದೆ. ಆ ಪದ ಬಹುಶಃ ಈ ಹನುಮಂತನನ್ನೇ ಕುರಿತಾಗಿ ಇರಬೇಕೆಂದೂ ಊಹಿಸಲಾಗುತ್ತದೆ. ಎಫ್.ಇ.ಪರಾಗಟರ್ಸ ಅವರ ಸಂಶೋಧನೆಯನ್ನು ಗಮನಿಸಿ ಎಕ್ಸ್.ಎಸ್.ಇ. ಥಾನಿ ನಯಾಗಮ ಎನ್ನುವವರು ಹೀಗೆ ಬರೆಯುತ್ತಾರೆ. ಎಫ್.ಇ. ಪರಾಗೀಟರ್ಸ್ ಅವರ ವಿಶೇಷ ಸಂಶೋಧನೆ ನಮಗೆ ಹನುಮಂತನ ಬಗೆಗೆ ಈ ರೀತಿ ಗ್ರಹಿಸಲು ಕಾರಣವಾಗುತ್ತದೆ. ಅವನೊಬ್ಬ ಕಪಿದೇವನಾಗಿದ್ದು, ಆರ್ಯರಿಗಿಂತ ಮೊದಲೇ ದ್ರಾವಿಡ ಜನಾಂಗದಿಂದ ಪೂಜೆಗೊಳ್ಳುತ್ತಲಿರುವ ದೇವತೆಯಾಗಿದ್ದಾನೆ. ದ್ರಾವಿಡರು ಅವನಿಗೆ ಅಣ್‌ಮಂತಿ (ತಮಿಳುನಲ್ಲಿ) ಎನ್ನುತ್ತಾರೆ. (ಅಣ್ ಎಂದರೆ ಗಂಡು, ಮಂತಿ ಎಂದರೆ ಕಪಿ) ಇದನ್ನು ಆರ್ಯರು ತಮ್ಮ ಭಾಷೆಗೆ ವೃಷಾಕಪಿ ಅಂದರೆ ಗಂಡುಕಪಿ ಎಮದು ಭಾಷಾಂತರಿಸಿಕೊಂಡರು. ಮುಂದೆ ದೇವರನ್ನು ಆರ್ಯರೂ ಪೂಜಿಸ ತೊಡಗಿದರು. ನಂತರ ಆಣ್‌ಮಂತಿ ಎಂಬುದನ್ನೆ ಭಾಷಾಂತರಿಸಿ, ಸಂಸ್ಕೃತದಲ್ಲಿ ಹನುಮಂತ ಎಂದು ಕರೆಯಲಾಯಿತು. ಈಗಲೂ ಅದೇ ಹೆಸರಿನಿಂದಲೇ ಪ್ರಸಿದ್ಧನಾಗಿದ್ದಾನೆ. ಈ ಎಲ್ಲಾ ಮಾತುಗಳನ್ನು ಗಮನಿಸಿ ಇಷ್ಟು ಹೇಳಬಹುದೆಂದು ತೋರುತ್ತದೆ: ಸ್ಥಳೀಯವಾಗಿ ಮಹತ್ವ ಪಡೆದ ವ್ಯಕ್ತಿ ತನ್ನ ಸುತ್ತಲಿನ ಜನರಿಂದ ಪೂಜ್ಯಗೈಸಿಕೊಳ್ಳುತ್ತಾನೆ. ಈ ಕಾರಣಕ್ಕಾಗಿ ಅವನ ಪೂಜೆ ಪ್ರಾರಮಭವಾಗುತ್ತದೆ. ನಂತರ ಅಂಥ ಯಾವುದೋ ಒಬ್ಬ ವ್ಯಕ್ತಿ ಪುರಾನಗಳಲ್ಲಿ ಸ್ಥಾನ ಪಡೆದರೆ, ಅವನ ಸುತ್ತ ಹೆಣೆಯಲ್ಪಡುವ ಇತರ ಅನೇಕ ಪವಾಡ ಮಹಿಮೆಗಳಿಂದ ದೇವರಾಗಿ ಜನಗಳಿಂದ ಪೂಜೆಗೈಸಿಕೊಳ್ಳುತ್ತಾನೆ. ಹಾಗೆಯೇ ದ್ರಾವಿಡ ಜನಾಂಗದ ಒಂದು ಗುಂಪಿನ ನಾಯಕನಾಗಿರಬಹುದಾದ ಹನುಮಂತನು ಯಾವುದೋ ಕಾರಣಕ್ಕಾಗಿ ಸ್ಥಳೀಯವಾಗಿ ಮಹತ್ವ ಪಡೆದು, ಪೂಜ್ಯನೆನಿಸಿಕಂಡು, ಆ ಗುಂಪಿನಿಂದ ಪೂಜೆಗೊಳ್ಳತೊಡಗಿ, ಮುಂದೆ ಕ್ರಮೇಣ ದ್ರಾವಿಡರ ಗ್ರಾಮದೇವತೆಯಾಗಿ ಸ್ಥಾನ ಪಡೆದಂತೆ ತೋರುತ್ತದೆ. ಹೀಗಾಗಿ ಮೂಲತಃ ಆರ್ಯರಿಗೆ ಸಂಬಂಧ ಪಡದ ಜನಾಂಗದ–ದ್ರಾವಿಡರ–ದೇವರಾಗಿದ್ದನೆಂಬುದು ವಿದ್ವಾಂಸರ ಹೇಳಿಕೆಯಿಂದ ಕಂಡುಬರುತ್ತದೆ. ಆರ್ಯರು ದ್ರಾವಿಡರನ್ನು ಸೋಲಿಸಿ, ದಕ್ಷಿಣಕ್ಕಟ್ಟಿದ ನಂತರ, ದ್ರಾವಿಡರು ತಾವು ವಾಸ ಮಾಡಿದಲ್ಲೆಲ್ಲ ರಕ್ಷಣೆಗೆಂದು ತಮ್ಮ ಪ್ರಬಲ ದೇವತೆ ಹನುಮಂತನನ್ನು ಯಾವುದೇ ಕಂಟಕಗಳು–(ಬಹುಶ್ಯ ಆರ್ಯರ ಭೀತಿಯೂ ಇರಬೇಕು, ಅವರಿಂದ ಕಾಪಾಡಲು) ಗ್ರಾಮದ ಹೊರ ಬಾಗಿಲಿಗೆ ಹನುಮಂತನನ್ನು ಗುಡಿಕಟ್ಟಿ ಇಟ್ಟರು. ಈಗಲೂ ಪ್ರತಿ ಊರಿನ ಹೊರಗೆ ಹನುಮಂತನ ದೇವಾಲಯ ಇರಲು ಕಾರಣ. ಬಹುಶಃ ಇದೇ ರೂಢಿಯೇ ಸಾಂಪ್ರದಾಯವಾಗಿ ಬೆಳೆದುಬಂದಂತೆ ತೋರುತ್ತದೆ. ನಂತರ ಆರ್ಯ–

ದ್ರಾವಿಡರಲ್ಲಿ ಸಮನ್ವಯ ಬಳೆದಂತೆ, ದ್ರಾವಿಡ ಪ್ರಬಲ ದೇವರು –ಹನುಮಂತನನ್ನು ಆರ್ಯರೂ ಪೂಜಿಸಲು ಪ್ರಾರಂಭಿಸಿರಬೇಕು. ಆದರೆ ತಮ್ಮಿಂದ ದ್ರಾವಿಡರು ಸೋತ ಸಂಕೇತವಾಗಿ ಅವರ ದೇವರ ಪ್ರಾಬಲ್ಯವನ್ನು ಕಡಿಮೆ ಮಾಡಲು ಮತ್ತು ತಮ್ಮ ದೇವರ ಪ್ರಾಬಲ್ಯ ಹಚ್ಚಿಸಲು  ರಾಮಾಯಣದಲ್ಲಿ ಹನುಮಂತನನ್ನು ರಾಮನ ಸೇವಕನೆಂದು ಚಿತ್ರಿಸಿದರು. ಇದು ದ್ರಾವಿಡರನ್ನು ಅವಹೇಳನ ಮಾಡವ ಬುದ್ಧಿಯಿಂದಲೂ ಇರಬೇಕು. ಹೀಗೆ ನಂತರದಲ್ಲಿ ಬ್ರಾಹ್ಮಣರು ಹನುಮಂತನಿಗೆ ಜನಿವಾರ ಹಾಕಿದರು. ಚಂಡಿಕೆ ಹಚ್ಚಿದರು. ವೀರಶೈವ ಲಿಂಗ ಕಟ್ಟಿದರು. ಇಸ್ಲಾಂರು ಮೌಲಾಲಿಯಿಂದಲೇ ಅವನ ಮುಸುಡಿ ಊದಿಕೊಂಡಿದೆ ಎಂದು ಕಲ್ಪಿತ ಕಥೆಕಟ್ಟಿ ಹಾಡಿದರು. ಇದೆಲ್ಲವನ್ನೂ ಗಮನಿಸಿ ಹೀಗೆ ಹೇಳಬಹುದು. ಯಾವುದೋ ಕಾರಣಕ್ಕಾಗಿ ಸ್ಥಳೀಯವಾಗಿ ಮಹತ್ವ ಪಡೆದ ಹನುಮಂತನು ತನ್ನ ಜನಗಳಿಂದ ಪೂಜೆಗೈಸಿಕೊಳ್ಳುತ್ತಾ, ಕ್ರಮೇಣ ಜನಪ್ರೀಯತೆ ಪಡೆಯುತ್ತ, ನಂಬುಗೆಗಳು ಪ್ರಬಲವಾಗುತ್ತ ಹೋಗಿ ಪುರಾಣಗಳಲ್ಲಿ ಸ್ಥಾನ ಪಡೆದು, ಭಾರತದಾದ್ಯಂತ ಬಹುದೊಡ್ಡ ದೇವರಾಗಿ ಮಾರ್ಪಟ್ಟನು.  ಇನ್ನು ಹನುಮಂತನ ಬಗ್ಗೆ ಜನಪದರಲ್ಲಿರುವ ನಂಬುಗೆಗಳನ್ನು ನೋಡೋಣ: ಹನುಮಂತನು ಬಹುಪೂರ್ವಕಾಲದಿಂದಲೇ ಬಂಜೆಯರಿಗೆ ಮಕ್ಕಳನ್ನು ಕೊಡುವ ದೇವರೆಮದು ನಂಬಲಾಗುತ್ತದೆ ಎಂದು ಹಿಂದೆಯೇ ಹೇಳಿದೆ. ಈ ನಂಬುಗೆ ಜಾವಾ ದೇಶದ ಜನಾಂಗಗಳಲ್ಲೂ ಇದೆಯೆಂದು ತಿಳಿದು ಬರುತ್ತದೆ. ನಮ್ಮಲ್ಲಿ–ನಡುರಾತ್ರಿ ಬೆತ್ತಲಾಗಿ ಹನುಮಂತ ದೇವರಿಗೆ ಪೂಜೆ ಸಲ್ಲಿಸಿದರೆ, ಮಕ್ಕಳಾಗುವವು ಎಂಬ ಮೂಢನಂಬಿಕೆಯಿದೆ. ಒಂದು ಜನಪದ ಕಥೆಯಲ್ಲಿ : ಒಬ್ಬ ರಾಣಿ ಬಂಜೆ. ರಾಜನು ಆಕೆಯನ್ನು ಊರಹೊರಗೆ ಮನೆಕಟ್ಟಿ ಇಡುತ್ತಾನೆ. ಸಹಾಯಕ ಮಂಗವು ರಾಣಿ ಬಸುರಿಯಾಗಿದ್ದಾಳೆಂದು ಸುಳ್ಳು ಸುದ್ಧಿ ಹಬ್ಬಿಸುತ್ತದೆ. ಒಂಭತ್ತು ತಿಂಗಳಾದ ನಂತರ ಕೂಸಿನ ಜಡೆ ತೆಗೆಯಲು ಪರಸಿ ಹೊರಡುತ್ತದೆ. ಕನಕದ ಗೊಂಬೆನ್ನು ನಿರ್ಮಿಸಿ, ಕುಂಚಿಗೆಯಲ್ಲಿ ಸುತ್ತಿಕೊಂಡು ಮಂಗವೂ ಹೊರಡುತ್ತದೆ. ಮುಂದೆ ಒಂದು ಹನುಮಂತನ ಗುಡಿಯಲ್ಲಿ ಮೂರುತಿ ಮುಂದೆ ಗೊಂಬೆಯನ್ನಿಟ್ಟು, ತಾನೂ ಬರ್ಹಿದೆಸೆ ಹೋಗಿ ಬರುವವರೆಗೆ ಗೊಂಬೆಯನ್ನು ನಿಗಾಮಾಡಲು ಹನುಮಂತನಿಗೆ ತಾಕೀತು ಮಾಡಿ ಹೋಗುತ್ತದೆ. ತಿರುಗಿ ಅವನ ಮೇಲೆ ಆಪಾದನೆ ಹೊರಿಸಿ, ತನ್ನ ಕೂಸು ತನಗೆ ಕೊಡದಿದ್ದರೆ, ಹೊಲಸನ್ನು ಮುಖಕ್ಕೆ ಬಳಿಯುದಾಗಿ ಹೆದರಿಸುತ್ತದೆ. ಹನುಮಂತನು ಹೆದರಿ–ಜೀವವಿರುವ ಕೂಸನ್ನೆ ಉಗುಳುತ್ತಾನೆ. ಅಥವಾ ಅವನು ಉಗುಳಿದ ಉಗಳೇ ಕೂಸಾಗಿ ಮಾರ್ಪಾಡುತ್ತದೆ. ಇನ್ನೊಂದು ಕಥೆಯಲ್ಲಿ ಒಬ್ಬಳು ತನಗೆ ಗಂಡುಮಗು ಜನಿಸಬೇಕೆಂದು ಹರಕೆ ಹೊರುತ್ತಾಳೆ, ಅವಳಿಗೆ ಗಂಡು ಮಗು ಜನಿಸುತ್ತದೆ.

ಈ ಮೇಲಿನ ಎರಡೂ ಕಥಾಘಟಕಗಳಲ್ಲಿ ಒಡಮೂಡಿ ಬಂದಿರುವ ಭಾವನೆ ಹನುಮಂತನು ಮಕ್ಕಳು ಕೊಡುವ ದೇವರಾಗಿದ್ದಾನೆ ಎಂಬ ಕಲ್ಪನೆಯಿಂದಲೇ ಎಂಬುದು ಸ್ಪಷ್ಟ. ಬಹುಕಾಲದಿಂದಲೂ ನಂಬಿಕೊಂಡು ಬಂದಿರುವ ನಂಬುಗೆಯೆಂದರೆ, ಹನುಮಂತನು ಉಳುವವರ ದೇವರಾಗಿದ್ದು,

ಅದರ ಫಲ ಕಾಪಾಡುವ ದೈವವಾಗಿದ್ದಾನೆ. ಎಂಬುದು ಇದಕ್ಕೆ ಉದಾಹರಣೆಯಾಗಿ ಒಂದು ಆಚರಣೆಯನ್ನು ನೋಡೋಣ :

"ಮದನ ಮನಗಿಸಬೇಕು ಮಂಡಲ ಬರಿಬೇಕು
ಸುತ್ತ ಕರಿಬಂಟ ಕಟ್ಟಬೇಕು"

ಒಕ್ಕಲಿಗರು ಜೋಳದ ರಾಶಿಯ ಸಮಯದಲ್ಲಿ, ಹಂತಿ ಮುಗಿದು, ಮದನ ಮನಗಿಸಿದ ನಂತರ, ಜೊಳದ ರವದಿಯನ್ನು ಸುಟ್ಟು, ಆ ಕರಿಕಿನಿಂದ ಕಣದಲ್ಲಿ ಮಂಡಲ ಬರೆಯುತ್ತಾರೆ. ಅರ್ಧಚಂದ್ರಾಕೃತಿಯ ಹಾಗೂ+ ಚಿನ್ಹೆಯ ಗುರುತು ಹಾಕುತ್ತಾರೆ. ಇದನ್ನು ಕರಿಬಂಟ ಎಂದು ಕರೆಯುತ್ತಾರೆ. ಈ ಕರಿಬಂಟ ಹನುಮಂತನ ಪ್ರತೀಕವೆಂದು ಹೇಳುತ್ತಾರೆ.

"ಕರಿಹನುಮ ನಿನ್ನ ರೂಹ ಬರೆದೆವು ಬಂಡಿಯಮ್ಯಾಲ
ಸಗರ ಶಾಪುರದ ಕರಿಹನುಮ ನಿನನಾಮ
ಬರದೇವು ನಮ್ಮ ಕಣದಾಗ"

ಎಂಬ ನುಡಿ ಅದಕ್ಕೆ ಸಾಕ್ಷಿಯಾಗಿಯೂ ಇದೆ. ದುಷ್ಟಕ್ತಿಯನ್ನು ಸಂಹಾರ ಮಾಡುವವನೂ, ಚೆಲುವನ್ನು ಕೆಡದಂತೆ ಕಾಪಾಡುವವನೂ, ಬಲವನ್ನೂ ಫಲವನ್ನೂ ಕೊಡುವವನೂ ಆದ ಹನುಮಂತನ ಮೇಲೆ ನಂಬಿಗೆಯನ್ನಿಟ್ಟ ಜನ, ಅವನನ್ನೂ ತಮ್ಮ ಕಣದಲ್ಲಿ ತಂದು ಜವಾಬುದಾರಿಯನ್ನು ಹೊರಿಸಿದರು. ಪ್ರತಿಯೊಂದು ಊರಿಗೂ ಹನುಮಂತನಿರುವಂತೆ ಆತನ ಭಕ್ತರ ಬಳಗವೂ ಅನಂತ. ಆತ ಶನಿಯನ್ನು ಗೆದ್ದ ಬಲವಂತ. ಚೆಲುವಾದ ಮುದ್ದು ಮಗುವಿಗೆ ದೃಷ್ಟಿ ತಟ್ಟದಿರಲೆಂದು, ತಾಯಿ ತನ್ನ ಮಗುವನ್ನು ಹನುಮಪ್ಪನ ದೇವಸ್ಥಾನಕ್ಕೆ ಒಯ್ದು, ಆತನ ಮೇಲೆ ಎಣ್ಣೆ ಸುರುವಿ, ಮೈಮೇಲಿರುವ ಜಿಗುಟು ಕಪ್ಪು ಮಸಿಯನ್ನು ಪ್ರಸಾದವೆಂದು ತನ್ನ ಮಗುವಿನ ಹಣೆಗೊ ಕೆನ್ನೆಗೊ ಹಚ್ಚುತ್ತಾಳೆ. ಇದರಿಂದ ತನ್ನ ಮಗುವಿಗೆ ಯಾವ ಕೇಡೂ ಬಾರದು ಎಂಬುದು ಮುತ್ತೈದೆಯ ನಂಬುಗೆ. ಸುಂದರ ದೇಹಿಗಳಾದ ಪೈಲ್ವಾನರು ತಮ್ಮ ದೇಹಕ್ಕೆ ಕೆಟ್ಟದೃಷ್ಟಿ ಬೀಳದಿರಲೆಂದು, ತಮ್ಮ ಬಲವು ವೃದ್ಧಿಯಾಗಲೆಂದು ಹಾಗೂ ಭೂತ –ಪಿಶಾಚಿ ಮೊದಲಾದ ದೃಷ್ಟಶಕ್ತಿಗಳನ್ನು ಬಡಿದುಕೊಂಡವರು., ಅವುಗಳ ಪರಿಹಾರಕ್ಕಾಗಿ ಹನುಮಂತನ ಮೂರ್ತಿ ಇರುವ ಬಿಲ್ಲೆ, ತಾಯತಗಳನ್ನು ಕರಿಯ ದಾರದಲ್ಲಿ ಪವಣಿಸಿ ಕಟ್ಟಿಕೊಳ್ಳುತ್ತಾರೆ. ಇಲ್ಲೆಲ್ಲ ಹನುಮಪ್ಪನೊಂದಿಗೆ ಕಪ್ಪುನಿಶಾನೆ ಬಳಕೆಗೊಳ್ಳುತ್ತಿರುವುದನ್ನು ಕಾಣುತ್ತೇವೆ. ಕರಿಯದಾರ, ಕಪ್ಪುಮಸಿ, ಕರಿಯಮಣಿ ಮುಂತಾದವುಗಳು. ತನ್ನ ಜೀವನಕ್ಕೆ ಆಧಾರವಾದ ಬೆಳಸನ್ನು ಮಗುವಿನಂತೆ ಜೋಪಾನಮಾಡಿ ಕಾಯ್ದು, ದುಡಿದು ಒಕ್ಕಲಿಗನು ಬೆಳೆಯನ್ನು ಬೆಳೆಸುತ್ತಾನೆ. ತನ್ನ ಶ್ರಮದ ಫಲ ಮನೆಗೆ ಬರಲು ತಯಾರಾಗಿದೆ. ತಾನೂ ದುಡಿದು ಸಂಪಾದಿಸಿದ ವಸ್ತುವಿನ ಮೇಲೆ ಪ್ರೀತಿ ಇರುವುದು ಮನುಷ್ಯನ ಸಹಜಗುಣ. ಅಂತಲೇ ಮದನ ಮನಗಿಸಿದಮೇಲೆ ತುಂಬಿದ ಕಾಳುಗಳಿಂದ ಬಲುಸುಂದರವಾಗಿ ಕಾಣುವ ರಾಶಿಯಮೇಲೆ ಕೆಟ್ಟದೃಷ್ಟಿ ಬೀಳದಿರಲೆಂದು. ತಮ್ಮ ರಾಶಿ ಹುಲುಸಾಗಲಿ, ಯಾವುದೇ ಕಂಟಕವನ್ನು ತಂದೊಡ್ಡುವ ದುಷ್ಟಶಕ್ತಿಗಳು ಕಣದಲ್ಲಿ ಹೋಗದಿರಲಿ ಎಂದು,

ಚೆಲುವನ್ನುಕಾಪಾಡುವವನೂ, ದುಷ್ಟಶಕ್ತಿಯನ್ನು ನಿವಾರಿಸುವವನೂ ಆದ ಹನುಮಂತನ ರೂಹವನ್ನು ಒಕ್ಕಲಿಗರು ತಮ್ಮ ಕಣದಲ್ಲಿ ಬರೆಯುತ್ತಾರೆ. ಬ್ರಹ್ಮಚಾರಿಯಾಗಿ ಉಳಿಯುವುದು ಎಂದರೆ– ತನ್ನ ಸುತ್ತಲಿನವರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವುದರ ಮೂಲಕ, ಅದರ ಮೇಲೆ ಪ್ರಭುತ್ವವನ್ನು ಸ್ಥಾಪಿಸುವುದು ಎಮದು ಹೇಳಲಾಗುತ್ತದೆ ಅಂದರೆ ಇದರಿಂದ ಅಸಾಧಾರಣವಾದ ಶಕ್ತಿ ಮತ್ತು ಅದ್ಭುತಯಶಸ್ಸುಗಳು ಪ್ರಾಪ್ತವಾಗುತ್ತವೆ ಎಂದು ನಂಬಲಾಗುತ್ತದೆ. ಚಿರಂಜೀವಿ– ಜಿತೇಂದ್ರೀಯನಾದ ಹನುಮಂತನು ವೀರ್ಯಶಕ್ತಿಯ ಬಲದಿಂದ ಅನೇಕ ವಿಘ್ನಗಳನ್ನು ನಿವಾರಿಸುವವನಾಗಿದ್ದಾನೆ. ಆತ ಶನಿಯನ್ನು ಗೆದ್ದವನಾದ್ದರಿಂದ, ತಮಗೆ ಅನಿಷ್ಟಗಳು ಕಾಡಹತ್ತಿದರೆ, ಹನುಮಂತನ ಪೂಜೆ, ಅಭಿಷೇಕ ಇತ್ಯಾದಿಗಳನ್ನು ಮಾಡಿದರೆ–ಆ ಕಾಡಾಟಗಳು ದೂರವಾಗುತ್ತವೆ ಎಂದು ನಂಬುತ್ತಾರೆ. ಹನುಮಂತನು ಶನಿಯನ್ನು ಗೆದ್ದ ಪ್ರಸಂಗವನ್ನು ಹೇಳುವ ಒಂದು ಕಥಾ ಘಟಕ ಹೀಗಿದೆ: ಶನಿಯು ಎಲ್ಲಾ ದೇವರುಗಳನ್ನು ಕಾಡಿ, ಗೆದ್ದು, ನಾಳೆ ತನ್ನಲ್ಲಿಗೆ ಬರುವುದಾಗಿ ಹನುಮಂತನಿಗೆ ಸೂಚನೆ ಕೊಡುತ್ತಾನೆ. ಮರುದಿನ ಆತನ ತಲೆಯ ಮೇಲೆ ಬಂದು ಕುಳಿತುಕೊಳ್ಳುತ್ತಾನೆ. ಹನುಮಂತನು ತನ್ನ ಬಾಲದಿಂದ ಗುಡ್ಡದ ಭಾರವನ್ನು ತಾಳದ ಶನಿ, ಹನುಮಂತನಿಗೆ ಶರಣು ಬರುತ್ತಾನೆ. ಹನುಮಂತನು ತನಗೆ, ತನ್ನ ಭಕ್ತರಿಗೆ ಕಾಡಬಾರದೆಂಬ ಕರಾರಿನ ಮೇಲೆ ಶನಿಯನ್ನು ಬಿಟ್ಟುಬಿಡುತ್ತಾನೆ. ಈ ನಂಬಿಕೆಯಿಂದಲೇ ಮಾಟವನ್ನು ಹೋಗಲಾಡಿಸುವಲ್ಲಿಯೂ ಹನುಮಂತನ ಶಕ್ತಿ ಉಪಯೋಗವಾಗುತ್ತದೆಂದು ಹೇಳುತ್ತಾರೆ. ಭಾನಾಮತಿ, ದೆವ್ವ, ಭೂತ, ಪಿಶಾಚಿ ಇತ್ಯಾದಿ ದುಷ್ಟಶಕ್ತಿಗಳನ್ನು ಹೊಡೆದೋಡಿಸಲು ಗೈಯ್ಯುವ ಪ್ರತಿ ಮಾಟ ಹಾಗೂ ಪೂಜೆಗಳಲ್ಲಿ ಹನುಮಂತನ ಪಾತ್ರ ಬಹು ಪ್ರಮುಖವಾದುದು. ಇದೇ ಕಾರಣದಿಂದಲೇ ಮಾಟದಿಂದ ಕಣದಲ್ಲಿಯ ರಾಶಿಯನ್ನು ಅಪಹರಣಮಾಡಲು ಸಾಧ್ಯವಾಗದಂತೆ ನೋಡಿಕೊಳ್ಳಲು ಹನುಮಂತನನ್ನು ಕರಿಬಂಟನ ರೂಪದಲ್ಲಿ ಕಣದಲ್ಲಿ ಕಾಣುತ್ತೇವೆ. ಇನ್ನೂ ಕೆಲವು ನಂಬಿಕೆಗಳು ಹೀಗಿವೆ: ಶನಿವಾರಕ್ಕೊಮ್ಮೆ ಹನುಮಂತ ದೇವರಿಗೆ ನಡೆದುಕೊಂಡರೆ ಅನಿಷ್ಟಗಳು ತಪ್ಪುತ್ತವೆ. ಹನುಮಂತನ ಅಂಗಾರವನ್ನು ಅರಿವಿಯಲ್ಲಿ ಹಾಕಿ ಟೊಂಕಕ್ಕೆ ಕಟ್ಟಿಕೊಂಡರೆ ದೆವ್ವ ಸಮೀಪ ಬರುವುದಿಲ್ಲ. ಹೆಣ್ಣು ಮಕ್ಕಳು ಹನುಮಪ್ಪನಿಗೆ ಪೂಜೆ ಮಾಡಿದರೆ ಲಗ್ನ ತೀವ್ರ ಆಗುತ್ತದೆ. ಚಳಿ ಬನ್ನಿಗಿಡದಲ್ಲಿ ವಾಸವಾಗಿರುತ್ತದೆ. ದಸರೆಗೆ ಬನ್ನಿ ಮುಡಿದು ಬರುವವರೊಂದಿಗೆ ಹನುಮಂತನ ಗುಡಿಗೆ ಬರುತ್ತದೆ. ಅಲ್ಲಿಯೇ ದೀಪಾವಳಿಯವರೆಗೆ ಕುಳಿತಿದ್ದು, ದೀಪಾವಳಿ ಪಾಡ್ಯದ ನಸುಕಿನಲ್ಲಿ ಅಗಸನು ಊರಲ್ಲಿ ಆರುತಿ ಬೆಳಗಲು ಬರುವುದಕ್ಕಿಂತ ಮುಂಚೆ ಹನುಮಂತನಿಗೆ ಆರುತಿ ಬೆಳಗಿ ಬರುತ್ತಾನೆ. ಚಳಿಯು ಈ ಅಗಸನ ಕಂಬಳಿಯಲ್ಲಿ ಕುಳಿತುಕೊಂಡು ಮನೆ ಮನೆ ಸೇರುತ್ತದೆ–ಎಂಬ ನಂಬಿಕೆಯಿದೆ.

ಇನ್ನೂ ಕೆಲವು ಆಚರಣೆಗಳು ಹೀಗಿವೆ: ಸೋದರಳಿಯ ಅಥವಾ ಸೋದರ ಸೊಸೆಗೆ ಮೊದಲಿಗೆ ಮೇಲಿನ ಹಲ್ಲು ಒಂದರೆ – ಹನುಮಂತನ ಗುಡಿಯಲ್ಲಿ ಒಂದು ಆಚರಣೆ ನಡೆಯುತ್ತದೆ. ಸೋದರ ಮಾವನು ಮೇಲಿನ ಹಲ್ಲು ಒಂದ ಕೂಸಿಗಾಗಿ ಅಂಗಿ, ಟೊಪ್ಪಿಗೆ ಅಲ್ಲದೇ ಒಂದು ಸಣ್ಣ ಬೆಳ್ಳಿ ಬಟ್ಟಲನ್ನು ಒಯ್ಯುತ್ತಾನೆ. ಗುಡಿಯ ಬಾಗಿಲಿಗೆ ಪರದೆ ಹಾಕುತ್ತಾರೆ. ಮಗು ಒಳಗೆ ಇರುತ್ತದೆ.

ಸೋದರ ಮಾವ ಹೊರಗಿರುತ್ತಾನೆ. ಪೂಜಾರಿ-ಸೋದರಮಾವ ತಂದ ಬೆಳ್ಳಿ ಬಟ್ಟಲಿಂದ ಮಗುವಿಗೆ ಹಲ್ಲಿಗೆ ಗೀರಿ ರಕ್ತ ತೆಗೆದು ತಂದು ಸೋದರ ಮಾವನ ಹಣೆಗೆ ಹಚ್ಚುತ್ತಾನೆ. ನಂತರ ಕೂಸಿನ ಮುಖ ನೋಡುತ್ತಾನೆ ಅಲ್ಲಿಯವರೆ ಅಂತಹ ಮಗುವಿನ ಮುಖ ಸೋದರಮಾವ ನೋಡಬಾರದು ಎಂಬ ನಂಬಿಕೆಯಿದೆ. ಇನ್ನು ಯಾವುದೇ ಶುಭ ಕಾರ್ಯಕ್ಕೆ ಬೀಗರು ಊರಿಗೆ ಬಂದರೆ ಮೊದಲು ಇಳಿದಕೊಳ್ಳುವುದು ಹನುಮಂತನ ಗುಡಿಯಲ್ಲಿ. ಅಲ್ಲಿಂದ ಅವರಿಗೆ ಮೆರವಣೆಗೆಯಲ್ಲಿ ಕರೆತರುತ್ತಾರೆ. ಮದುವೆಗೆ ಬಂದ ಬೀಗರಂತೂ ಹನುಮನ ಗುಡಿಯಲ್ಲಿ ಇಳಿಯಲೇಬೇಕು. ಅಲ್ಲಿಯೇ ಬೀಗರ ಬೇಟಿ ನಡೆಯುವುದು. ಹೀಗೆ ಹನುಮಂತನು ನಮ್ಮ ದಿನನಿತ್ಯದ ಜೀವನ-ಸಂಸ್ಕೃತಿಯೊಂದೊಗೆ ತನ್ನ ಸಂಬಂಧವನ್ನು ಗಟ್ಟಿಗೊಳಿಸಿಕೊಳ್ಳುತ್ತಲೇ ಇದ್ದಾನೆ. ಮಹಾಭಾರತದ ಅರ್ಜುನನು ಹನುಮಂತನ ಲಾಂಛನವುಳ್ಳ ಪತಾಕೆಯನ್ನು ಹೊಂದಿದ್ದ, ಒಂದು ಹಕ್ಕಿಯ ಹೆಸರು ಹನುಮನ ಹಕ್ಕಿ ಎಂದಿದೆ. ಉತ್ತರದಿಕ್ಕಿಗೆ ಹನುಮನ ದಿಕ್ಕು ಎನ್ನುತ್ತಾರೆ. ಕಾರವಾರ ಜಿಲ್ಲೆಯ ಹನುಮಾವಾರ ಎಂಬ ಊರು ಹೊನ್ನಾವರವಾಗಿದೆ. ಬೀದರ ಜಿಲ್ಲೆಯಲ್ಲೊಂದು ಹನುಮಂತವಾಡಿ ಎಂಬ ಹುನುಗುಂದ ತಾಲ್ಲೂಕಿನಲ್ಲಿ ಹನುಮಸಾಗರ ಎಂಬ ಊರುಗಳಿವೆ. ಕರಿಹನುಮ್ಯಾ, ಹಣಮಂದೇವರ ಮಾರ್ಯಾಂವ, ಕ್ವಾಡಗ, ಕ್ವಾಡಗ ಮಾರ್ಯಾಂರ ಇತ್ಯಾದಿ ಪಡೆನುಡಿಗಳು ಬಳಕೆಯಲ್ಲಿವೆ. ಹನುಮಂತನ ಮುಂದೆ ಹಾರೋ ಗುಬ್ಬಿಯೇ, ಹನುಮಂತರಾಯ ಹಗ್ಗ ತಿಂದರೆ ಪೂಜಾರಯ್ಯ ಸ್ವಾಮಿಗೆ ಬಯಸಿದಂತೆ, ಊರು ಸುಟ್ಟರೂ ಹನುಮಂದೇವರು ಹೊರಗೆ, ಮೊದಲು ದೇವರು ಮೂಲೇಲಿದ್ದರೂ ಹನುಮಂತರಾಯಗೆ ದೀಪಘತ್ತವವು-ಮುಂತಾದ ಗಾದೆಗಳು ಬಳಕೆಯಲ್ಲಿವೆ. ಇದೆಲ್ಲವನ್ನುಳಿದು ಕೊನೆಯದಾಗಿ, ನಮಗೆ ಪೂಜ್ಯನಾಗಿರುವ, ಅನೇಕ ಮೂಢನಂಬಿಕೆಗಳಿಗೆ ಕಾರಣನಾಗಿರುವ ಈ ಹನುಮಂತ ದೇವರ ಬಗ್ಗೆ ಭಾರತವನ್ನು ಸಂದರ್ಶಿಸಿದ ಪ್ರವಾಸಿಗಳು ಆಡದ ಕೆಲವು ಮಾತುಗಳನ್ನು ನೋಡಬಹುದೆಂದು ತೋರುತ್ತದೆ.

ನಿಕೋಲಸ್ ಪಿಮೆಂಟಾ (೧೫೯೯-೧೬೧೨) ಎನ್ನುವವ ರೋಮ ದೇಶದ ಪ್ರವಾಸಿಗನು. ೧೫೯೯ ಡಿಸೆಂಬರ್ ತಿಂಗಳಲ್ಲಿ ಗೋವೆಯಿಂದ ರೋಮಗೆ ಬರೆದ ಪತ್ರದಲ್ಲಿ ಹೇಗೆ ಬರೆಯುತ್ತಾನೆ: ಪೆರಿಮಾಳ್ ಎಂಬ ದೇವಸ್ಥಾನದಲ್ಲಿ ಹನಿಮಂತ್‌ನೆಂಬ ಕಪಿಯನ್ನು ಪೂಜಿಸುತ್ತಾರೆ. ಇವನೂ ದೇವರಾಗಿದ್ದನಂತೆ. ಯಾವ ಕಾರಣವೋ ಇವನೂ ಇನ್ನೂ ಸಾವಿರಾರು ದೇವರುಗಳೂ ಕಪಿಗಳಾಗಿ ಬಿಟ್ಟರಂತೆ. ಕಪಿಯಾಗಿ ಕಪಿಗಳ ಮೇಲೆ ರಾಜ್ಯಭಾರ ಮಾಡುತ್ತಿದನು. ಒಮ್ಮೆ ರಾಮನಕೋರ್ (ರಾಮೇಶ್ವರ) ದಿಂದ ಸಿಲೋನಿಗೆ ಹೋಗಬೇಕಾಗಿ ಬಂತು. ಹಡಗುಗಳು ಇರಲಿಲ್ಲ. ಈ ಕಾರಣ ಹನುಮಂತ ನೀರಿನ ಮೇಲೆ ನೆಗೆಯುತ್ತ ಹೋದ. ಒಂದೊಂದು ನೆಗೆತಕ್ಕೆ ಒಂದೊಂದು ಮರಳುಗಡ್ಡೆ ಮಾಡಿಕೊಂಡು ನೆಗೆಯುತ್ತ ತನಗೂ ತನ್ನ ಕಡೆಯವರಿಗೂ ದಾರಿ ಮಾಡಿದ.

ಫಾದರ್ ಅಂತೋಣಿ ಮೊನ್ಸ್‌ರೆಟ್ (೧೫೨೬-೧೬೦೦) ಎನ್ನುವವನು ತನ್ನ ಪ್ರವಾಸ ಕಥನದಲ್ಲಿ ಬರೆಯುತ್ತಾನೆ : ಮತುರಾನಮಿಗೆ (ಮಥುರೆ) ಆರು ಮೈಲಿ ದೂರದಲ್ಲಿ ಅನುಮಂತಾಸನ

(ಹನುಮಂತ) ದೇವಸ್ಥಾನವಿದೆ. ಅದರ ಬಳಿ ಮುನ್ನೂರು ಕೋತಿಗಳನ್ನು ಸಾರ್ವಜನಿಕರ ಖರ್ಚಿನಲ್ಲಿ ಸಾಕಿದ್ದಾರೆ. ಗಂಟೆ ಹೊಡೆದಾಗ ಈ ಕೋತಿಗಳು ಆಯುಧಗಳನ್ನು ಹಿಡಿದು ಎರಡು ತಂಡಗಳಾಗಿ ಕಾದಾಡುತ್ತವೆ. ಊಟ ಮಾಡುವ ವೇಳೆಯಲ್ಲಿ ಊಟ ಮಾಡುತ್ತವೆ. ಇವೆಲ್ಲ ದೇವರ ಪ್ರೇರಣೆಯಿಂದ ನಡೆಯುತ್ತದೆಯೆಂದು ಬ್ರಾಹ್ಮಣರು ಹೇಳಿ ಜನಸಾಮಾನ್ಯರನ್ನು ನಂಬಿಸುತ್ತಾರೆ. ಆದರೆ ಕೋತಿಗಳಿಗೆ ಆ ರೀತಿ ಮಾಡಲು ಹೇಳಿಕೊಡುವುದರಿಂದ ಅವು ಹಾಗೆ ಮಾಡುತ್ತವೆ ಎಂಬ ಬಹಳ ಜನಕ್ಕೆ ಗೊತ್ತಿಲ್ಲ. ಕಾರ್ತೀಕಮಾಸದಲ್ಲಿ ಸಾಮಾನ್ಯವಾಗಿ ಅವರವರ ಆದಾಯಕ್ಕೆ ತಕ್ಕಂತೆ ಅನುಗುಣವಾಗಿ ಮನೆಯಲ್ಲಿ ಸಿಹಿ ಅಡುಗೆ ಮಾಡಿ ದೇವರಿಗೆ ನೈವೇದ್ಯ ಅರ್ಪಿಸಿ ಸಡಗರ ಸಂಭ್ರಮದಿಂದ ದೇವಸ್ಥಾನಗಳ ಮುಂಭಾಗದಲ್ಲಿ ಸೇರಿದ ಜನಗಳು ದೀಪವನ್ನು ಹಚ್ಚುವ ಮೂಲಕ ತಮ್ಮ ಬಾಳಿನಲ್ಲಿ ಕತ್ತಲೆಯಿಂದ ಬೆಳಕು ಬರುವ ಪ್ರತೀತಿಯಂತೆ ಸಾಲು ಸಾಲುಗಟ್ಟಲೆ ದೀಪವನ್ನು ಹಚ್ಚುವ ಮೂಲಕ ತುಂಬಾ ವಿಶಿಷ್ಟತೆಯಿಂದ ಕಾರ್ತೀಕೊತ್ಸವವನ್ನು ನೆರವೇರಿಸಲಾಗುತ್ತದೆ.

**೮. ಶ್ರೀ ರಂಗನಾಥ ಸ್ವಾಮಿ ಜಾತ್ರೆ**

ಶಿವಮೊಗ್ಗ ಜಿಲ್ಲೆಯ, ಶಿವಮೊಗ್ಗ ನಗರದ ಶ್ರೀ ರಂಗನಾಥ ಸ್ವಾಮಿ ಜಾತ್ರೆ ಶಿವಮೊಗ್ಗ ನಗರದಲ್ಲಿಯೇ ಅತ್ಯಂತ ದೊಡ್ಡ ಜಾತ್ರೆಯಾಗಿದೆ. ಶಿವಮೊಗ್ಗದ ಗೋಪಾಳದ ಶ್ರೀ ಆದಿ ರಂಗನಾಥ ಸ್ವಾಮಿ ರಥೋತ್ಸವವು ಪ್ರತಿವರ್ಷ ಏಪ್ರಿಲ್ ತಿಂಗಳಲ್ಲಿ ನಡೆಯುದುಂಟು ನಗರದಲ್ಲಿರುವ ಪುರಾತನ ದೇವಾಲವಾದ ಆದಿ ರಂಗನಾಥ ಸ್ವಾಮಿ ಹಾಗೂ ಉದ್ಭವ ಈಶ್ವರ ದೇವರ ಸನ್ನಿಧಿಯಲ್ಲಿ ರಥೋತ್ಸವದ ಪ್ರಯುಕ್ತ ರಥೋತ್ಸವಕ್ಕಿಂತ ಮೊದಲ ದಿನ ಶ್ರೀ ಗುರು ಗಣೇಶ ಪೂಜೆ, ಯಾಗ ಶಾಲ ಪ್ರವೇಶ, ಕಂಕಣ ಬಂಧನ, ಅಂಕುರ ಅರ್ಪಣೆ ನವಕ ಪ್ರಧಾನ ಕಲಶ ಸ್ಥಾಪನೆ, ಕಲಾತತ್ವ ಹೋಮ, ಕುಂಭಾಭೀಷೇಕ, ಗರುಡ ಧ್ವಜಾ ಸ್ಥಾಪನೆ, ಅದೇ ದಿನ ಸಂಜೆ ಪ್ರಕಾರೋತ್ಸವ, ಪ್ರಕಾರ ಬಲಿ, ಅಷ್ಟಾವಧಾನ ಸೇವೆ ನಡೆಯಲಿದೆ. ರಥೋತ್ಸವ ದಿನದಂದು ಬೆಳಿಗ್ಗೆ ೮ ಗಂಟೆಗೆ ರಥಾಧಿವಾಸ ಹೋಮ, ಪ್ರಕಾರ ಬಲಿ ನಂತರ ಬೆಳಿಗ್ಗೆ ೧೦;೧೫ಕ್ಕೆ ರಥಾರೋಹಣ ಸಂಜೆ ರಥೋತ್ಸವ ನಡೆಯಲಿದೆ. ತದನಂತರ ಭಕ್ತಾಧಿಗಳಿಗೆ ಪ್ರಸಾದ ವಿತರಣೆಯಾಗಲಿದೆ. ಅಂದು ರಾತ್ರಿ ಶ್ರೀ ರಂಗನಾಥ ಸ್ವಾಮಿಯ ಪಲ್ಲಕ್ಕಿ ಉತ್ಸವ ಸಕಲ ಭಕ್ತಾಧಿಗಳೊಂದಿಗೆ ವಿಜೃಂಭಣೆಯಿಂದ ನಡೆಯಲಿದೆ. ಈ ಜಾತ್ರೆಯು ೨೧ ದಿನಗಳವರೆಗೆ ವಿಜೃಂಭಣೆಯಿಂದ ನಡೆಯುತ್ತದೆ. ಈ ದೇವರ ಜಾತ್ರೆಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ, ಸಾಗರ, ಸೊರಬ, ಶಿಕಾರಿಪುರ, ಹೊಸನಗರ ಮತ್ತು ತೀರ್ಥಹಳ್ಳಿಯ ಬೇಡ ನಾಯಕ ಜನಾಂಗದ ಭಕ್ತರು ಈ ದೇವರ ಜಾತ್ರೆಯಲ್ಲಿ ಭಾಗವಹಿಸಿ ದೇವರ ದರ್ಶನ ಪಡೆದು ಕಾಯಿ ಹೂಗಳನ್ನು ಸಮರ್ಪಿಸಿ ದೈವದ ಆಶೀರ್ವಾದವನ್ನು ಪಡೆದು ಹೊಗುವುದುಂಟು. ಇನ್ನೂ ಶಿವಮೊಗ್ಗದ ತಾಲೂಕಿನಲ್ಲಿ ಬರುವ ಗ್ರಾಮಗಳಲ್ಲಿ ನೆಲೆಸಿರುವ ಬೇಡ ನಾಯಕ ಜನಾಂಗದ ಮಹಿಳೆಯರು ತಮ್ಮ ಮಕ್ಕಳೊಂದಿಗೆ ಈ ಜಾತ್ರೆಯಲ್ಲಿ ಭಾಗವಹಿಸಿ ತಮ್ಮ ಬಂಧು ಬಳಗದ ಬೀಗರ

ಮಹಿಳೆಯರಿಗೆ ಬಳೆಯನ್ನು ಹಾಕಿಸುವುದು, ಮಂಡಕ್ಕಿ, ಸಿಹಿ ಪದಾರ್ಥಗಳನ್ನು ಮೀಠಾಯಿ ಅಂಗಡಿಗಳಲ್ಲಿ ಖರೀದಿಸಿ ಬೀಗರಿಗೆ ನೀಡುವುದುಂಟು. ಶ್ರೀ ರಂಗನಾಥ ಸ್ವಾಮಿ ಜಾತ್ರೆ ಮಾರನೇಯ ದಿನ ಕರಿಯೆಂದು ಕುರಿ, ಕೋಳಿ ಮಾಂಸದ ಊಟವನ್ನು ಬೇಡ ನಾಯಕ ಜನಾಂಗದವರು ಮಾಡಿಕೊಂಡು ಊಟ ಮಾಡುವುದುಂಟು. ಬೇಡ ನಾಯಕ ಜನಾಂಗದ ಮಕ್ಕಳಿಗೆ ರಂಗನಾಥ, ಶ್ರೀ ರಂಗನಾಥ, ಶ್ರೀ ರಂಗನಾಥೇಶ್ವರ, ಶ್ರೀ ರಂಗ ಹಾಗೆಯೇ ಹೆಣ್ಣು ಮಗುವಿಗೆ ರಂಗಮ್ಮ, ರಂಗಕ್ಕ ಎಂದು ಹೆಸರುಗಳನ್ನು ಮಕ್ಕಳಿಗೆ ನಾಮಕರಣ ಮಾಡುವುದು ಕಂಡುಬರುತ್ತದೆ.

**೯. ಕೋಳಿನಾಗರ ಆಚರಣೆ**

ದೇವರು ಒಂದು ಚೈತನ್ಯ ಅಥವಾ ತೇಜಸ್ಸು, ಸತ್ವ ಶಕ್ತಿ ಎಲ್ಲಾ ಪ್ರಾಪಂಚಿಕ ವ್ಯಾಪಾರಗಳು ಆ–ಶಕ್ತಿಗೆ ಅಧೀನ. ಬೇಡ ನಾಯಕ ಜನಾಂಗದ ಜನಪದರು ಬುಡಕಟ್ಟುಗಳ ಆಚರಣೆಗಳ ಬಗ್ಗೆ ಅಧ್ಯಮವಾದ ಭಯ ಭಕ್ತಿಯಿಂದ ಕಂಡು ಕೊಳ್ಳುವುದುಂಟು. ಶಿವಮೊಗ್ಗ, ಸಾಗರ, ಸೊರಬ ನಗರಗಳಲ್ಲಿ ನೆಲೆಸಿರುವ ಬೇಡ ನಾಯಕರು ಕೋಳಿ ನಾಗರ ಆಚರಣೆಯನ್ನು ಮಾಡುವುದುಂಟು. ಶಿವಮೊಗ್ಗದಲ್ಲಿ ನೆಲೆಸಿರುವ ಬೇಡ ನಾಯಕರು ಹರಪನಹಳ್ಳಿಯ ಪಾಳೇಗಾರರ ಅವನತಿಯ ನಂತರ ಶಿವಮೊಗ್ಗದಲ್ಲಿ ನೆಲೆಸಿದ್ದಾರೆ. ಈ ಕೋಳಿ ನಾಗರ ಆಚರಣೆಯನ್ನು ಪ್ರತಿ ವರ್ಷ ೧೫ ರಿಂದ ೨೦ ಮನೆಯವರು ಸೇರಿ (ಕುಟುಂಬಗಳು) ಪಂಚಾಯಿತಿ ಮಾಡಿ ಮನೆಗೆ ಇಂತಿಷ್ಟು ಎಂದು ಉದಾಹರಣೆಗೆ ಒಂದು ಮನೆಗೆ ೫೦೦ ನೂರು ರೂಪಾಯಿಗಳನ್ನು ಪಡೆದು ಒಬ್ಬ ಹಿರಿಯರಿಗೆ ಈ ಆಚರಣೆಯ ಖರ್ಚಿಗಾಗಿ ಶೇಖರಣೆ ಮಾಡಿ ಕೊಡುತ್ತಾರೆ. ಹೊಲದಲ್ಲಿ ನೆಲೆಸಿರುವ ಕಲ್ಲಿನ ನಾಗರ ಮೂರ್ತಿಗೆ ಕೋಳಿಗಳನ್ನು ಬಲಿ ಕೊಡುತ್ತಾರೆ. (ನಾಟೀ ಕೋಳಿಗಳು) ಯಾವುದೇ ಕಾರಣಕ್ಕು ಮದುವೆಯಾಗಿ ಹೋದ ಮಹಿಳೆಯರು ಬರುವಂತಿಲ್ಲ ಅಲ್ಲದೇ ಬೀಗರು ಬರುವಂತಿಲ್ಲ. ಕೋಳಿ ಮತ್ತು ಅನ್ನವನ್ನು ಕಲ್ಲ ನಾಗರಕ್ಕೆ ಎಡೆ ಹಾಕಿ ತದನಂತರ ಮದ್ಯಾಹ್ನ ಮೂರು ಗಂಟೆಗೆ ಸಾಮೂಹಿಕವಾಗಿ ಒಳಗಡೆ ಊಟವನ್ನು ಮಾಡುತ್ತಾರೆ. ಊಟ ಮಾಡಿದ ನಂತರ ಉಳಿದ ಕೋಳಿ ಮಾಂಸ ಮತ್ತು ಅನ್ನವನ್ನು ಉಳಿದ ಅಡಿಗೆಯ ಪದಾರ್ಥಗಳನ್ನು ಕುಣಿ ತೊಡಿ ಮಣ್ಣಿನಲ್ಲಿ ಮುಚ್ಚಿ ಮನೆಗಳಿಗೆ ವಾಪಸ್ಸು ಆಗುತ್ತಾರೆ. ಈ ಪದ್ದತಿಯು ನೂರಾರು ವರ್ಷಗಳ ಕಾಲದಿಂದ ಆಚರಣೆಯಲ್ಲಿದೆ. ಈ ಆಚರಣೆಯನ್ನು ಪ್ರತಿವರ್ಷ ತಪ್ಪದೇ ಬೇಡ ನಾಯಕರು ಮಾಡಿಕೊಂಡು ಬರುತ್ತಾರೆ.

**೧೦. ಗುಡ್ಡೇಕಲ್ಲುಗಳು**

ನಮ್ಮ ಸಮಾಜದಲ್ಲಿ ಆಚರಣೆಯಲ್ಲಿರುವ ನಾನಾ ಸಂಸ್ಕಾರಗಳು, ಹಬ್ಬಗಳು, ವಿಧಿ ವಿಧಾನಗಳು ಹೇಗೆ ಹುಟ್ಟಿಕೊಂಡವು ಎಂಬುದನ್ನು ತಿಳಿಯಬೇಕಾದರೆ ನಾವು ಜನಪದವನ್ನು ಮೊರೆ ಹೋಗಬೇಕು. ಏಕೆಂದರೆ ಜನಪದವು ನಮ್ಮ ಎಲ್ಲಾ ಶಾಸ್ತ್ರ, ಪುರಾಣ, ಧರ್ಮ, ಕಾನೂನುಗಳಿಗೆ ಬುನಾದಿ. ಜನಪದ ನಂಬಿಕೆಗಳು ಮಾನವನ ಜೀವನದ ಸರ್ವಕ್ಷೇತ್ರಗಳಲ್ಲಿಯೂ ವ್ಯಾಪಿಸಿಕೊಂಡಿವೆ. ಅದೇ ಅವನ ಜೀವನವನ್ನು ರೂಪಿಸಿದೆ. ನಂಬಿಕೆ ಆಚರಣೆಯ ಬೆನ್ನೆಲುಬು. ಶಿವಮೊಗ್ಗ ತಾಲೂಕಿನ ಬೇಡ

ಸಮುದಾಯವು ಮೂಲತಃ ಸ್ತ್ರೀ–ದೈವಗಳನ್ನು ಹೊಂದಿರುವ ಸಮುದಾಯವಾಗಿದೆ. ಶಿವಮೊಗ್ಗ ಬೇಡರ ಕೇರಿಗಳಲ್ಲಿ ಗುಡ್ಡೇಕಲ್ಲುಗಳಿವೆ. ಕೇರಿಗಳನ್ನು ಪ್ರವೇಶ ಮಾಡಿದ ತಕ್ಷಣ ಎಲ್ಲರಿಗೆ ಎದ್ದು ಕಾಣುವುದು ಕೇರಿಗಳ ಗುಡ್ಡೇಕಲ್ಲುಗಳು. ಕೇರಿಗಳನ್ನು ಪ್ರವೇಶ ಮಾಡುವ ಮೊದಲು ಅಂದರೆ ರಸ್ತೆಯ ಮಧ್ಯೆ ಈ ಗುಡ್ಡೇಕಲ್ಲುಗಳನ್ನು ಮಣ್ಣಿನಲ್ಲಿ ಅರ್ಧಕ್ಕೆ ಮುಚ್ಚಿ ಇನ್ನುಳಿದ ಅರ್ಧಭಾಗವನ್ನು ಎಲ್ಲರಿಗೆ ಕಾಣುವಂತೆ ಇಟ್ಟಿದ್ದಾರೆ. ಗುಡ್ಡೇಕಲ್ಲನ್ನು ನೆಡುವ ಮೊದಲು ಒಂದು ಆಚರಣೆಯನ್ನು ಕಡ್ಡಾಯವಾಗಿ ಮಾಡುತ್ತಾರೆ. ಅದೇನೆಂದರೆ, ಗುಡ್ಡೇಕಲ್ಲುಗಳನ್ನು ಮಣ್ಣಿನಲ್ಲಿ ಹುಗಿಯುವುದಕ್ಕಿಂತ ಮುಂಚಿತವಾಗಿ ಹಂದಿಮರಿಯನ್ನು ಜೀವಂತವಾಗಿ ಮಣ್ಣಿನಲ್ಲಿ ಲಿಂಬೆ ಹಣ್ಣಿನೊಂದಿಗೆ ಹುಗಿಯುತ್ತಾರೆ. ಹಂದಿ ಮರಿಯನ್ನು ಹುಗಿದ ನಂತರ, ಅದರ ಮೇಲೆ ಗುಡ್ಡೇಕಲ್ಲನ್ನು ನೆಡುತ್ತಾರೆ. ಗುಡ್ಡೇಕಲ್ಲನ್ನು ನೆಟ್ಟ ಮೇಲೆ ಗುಡ್ಡೇಕಲ್ಲಿನ ಮೇಲೆ ಎಣ್ಣೆಯನ್ನು ಹಾಕಿ, ಬುಕ್ಕಿಟ್ಟು ಕುಂಕುಮ ಹಚ್ಚಿ ಕಾಯಿ ಒಡೆದು ಪೂಜೆ ಮಾಡುತ್ತಾರೆ. ಗುಡ್ಡೇಕಲ್ಲನ್ನು ಹುಗಿಯುವ ಉದ್ದೇಶವೆಂದರೆ, ಯಾವುದೇ ಅನಿಷ್ಟಗಳು, ದೆವ್ವ ಪೀಡೆಗಳು ಅಮ್ಮನವರು ಕೇರಿಯೊಳಕ್ಕೆ ಬಾರದಿರಲೆಂದು ಹುಗಿಯುತ್ತಾರೆ. ಯಾವುದೇ ಕಂಟಕಗಳು ಇದ್ದರೂ ಅದನ್ನು ಗುಡ್ಡೇಕಲ್ಲುಗಳು ತಡೆಯುತ್ತವೆ ಎಂಬ ನಂಬಿಕೆ ಶಿವಮೊಗ್ಗ ಬೇಡರಲ್ಲಿದೆ. ಈ ಗುಡ್ಡೇಕಲ್ಲುಗಳಿಗೆ ಭರಮಪ್ಪ ದೇವರು, ಭೂಮಿತಾಯಿ ಎಂತಲೂ ಕರೆಯುತ್ತಾರೆ. ದುರುಗಮ್ಮನೇ ಗುಡ್ಡೇಕಲ್ಲುಗಳು ಆಗಿರುವಳು ಎಂಬ ನಂಬಿಕೆಯೂ ಕೂಡ ಶಿವಮೊಗ್ಗ ಬೇಡರಲ್ಲಿದೆ. ಶಿವಮೊಗ್ಗ ಬೇಡರಲ್ಲಿ ಸಾಂಸ್ಕೃತಿಕ ಪರಂಪರೆಯಲ್ಲಿ, ಜೀವನದ ಬದುಕಿನಲ್ಲಿ ಈ ಗುಡ್ಡೇಕಲ್ಲುಗಳು ಸಂಸ್ಕೃತಿಯ ಜೀವನದ ಕೇಂದ್ರಬಿಂದುವಾಗಿದೆ.

ಈ ಕೇರಿಗಳಲ್ಲಿ ಎದ್ದು ಕಾಣುವ ಗುಡ್ಡೇಕಲ್ಲುಗಳು ಕೇರಿಗಳಲ್ಲಿಯ ಜನರಿಗೆ ಪವಿತ್ರವಾದ ದೇವರಾಗಿ ಕಂಡಿದೆ. ಈ ಗುಡ್ಡೇಕಲ್ಲುಗಳಿಗೆ ತುಂಬಾ ಭಕ್ತಿಯಿಂದ ಕೇರಿಯ ಜನರು ನಡೆದುಕೊಳ್ಳುತ್ತಾರೆ. ಗುಡ್ಡೇಕ್ಲಲುಗಳ ಪೂಜೆಯನ್ನು ಸಾಮಾನ್ಯವಾಗಿ ಮಹಿಳೆಯರೇ ಮಾಡುತ್ತಾರೆ. ದಿನಾಲೂ ಬೆಳಿಗ್ಗೆ ಮತ್ತು ಸಾಯಂಕಾಲ ಒಂದು ಚರಗಿ ನೀರನ್ನು ಗುಡ್ಡೇಕಲ್ಲುಗಳಿಗೆ ಹಾಕಿ ಕುಂಕುಮ, ಬುಕ್ಕಿಟು ಹಚ್ಚಿ ಹೂ ಮುಡಿಸಿ, ಉದ್ದಿನ ಕಡ್ಡಿಯನ್ನು ಹಚ್ಚುತ್ತಾರೆ. ಈ ರೀತಿ ಗುಡ್ಡೇಕಲ್ಲುಗಳ ಪೂಜೆಯನ್ನು ಮಾಡುವಾಗ ಯಾರು ಕೂಡ ಮಾತನಾಡುವಂತಿಲ್ಲ. ಪ್ರತಿ ಮಂಗಳವಾರ ಹಾಗೂ ಶುಕ್ರವಾರ ದಿನಗಳಂದು ಗುಡ್ಡೇಕಲ್ಲುಗಳಿಗೆ ವಿಶೇಷ ಪೂಜೆಗಳು ನಡೆಯುತ್ತವೆ. ಈ ಗುಡ್ಡೇಕಲ್ಲುಗಳಿಗೆ ಸಂಬಂಧಿಸಿದಂತೆ ಶಿವಮೊಗ್ಗ ನಾಯಕ ಜನಪದರಲ್ಲಿ ಒಂದು ಕಥೆ ಇದೆ.

ಬ್ರಾಹ್ಮಣರ ಮಗಳು ದುರುಗಮ್ಮ. ಸಿಡ್ಲಗ ಎಂಬ ಹರಿಜನ ಯುವಕ ದುರುಗಮ್ಮನನ್ನು ಮದುವೆಯಾಗಲು ನೋಡಿಕೊಂಡು ಬಂದಿರುತ್ತಾನೆ. ಪುನಃ ತಾನು ಮದುವೆಯಾಗುವ ಹುಡುಗಿಯನ್ನು ತನ್ನ ತಾಯಿಗೆ ತೋರಿಸಲೆಂದು ತನ್ನ ತಾಯಿಯನ್ನು ಕರೆದುಕೊಂಡು ಹೋಗಿರುತ್ತಾನಂತೆ. ಸಿಡ್ಲಗನ ತಾಯಿ ಆ ಹುಡುಗಿಯನ್ನು ನೋಡಿ ಒಪ್ಪಿಕೊಂಡಳಂತೆ. ದುರುಗಮ್ಮನ ಮನೆಯವರು ಸಿಡ್ಲಗನ ತಾಯಿ ಆ ಹುಡುಗಿಯನ್ನು ನೋಡಿ ಒಪ್ಪಿಕೊಂಡಳಂತೆ. ದುರುಗಮ್ಮನ ಮನೆಯವರು ಸಿಡ್ಲಗ ಮತ್ತು

ಆತನ ತಾಯಿಗೆ ಊಟ ಮಾಡಲು ತಿಳಿದರಂತೆ. ಮರಿಗಡಬು ಹಾಲು, ಬೆಲ್ಲ ತಂದು ದುರುಗಮ್ಮನೇ ಊಟಕ್ಕೆ ಬಡಿಸಿದಳಂತೆ. ಆಗ ಸಿಡ್ಲಗನ ತಾಯಿ, ಲೋ ಸಿಡ್ಲಗ ಎಂದಳಂತೆ. ಆಗ ಸಿಡ್ಲಗ ಓಯವ್ವಾ ಅಂದನಂತೆ. ಈ ಮರಿಗಡಬು ಕೋಣದ ನಾಲಿಗೆ ಇದ್ದಂತೆ ಇದ್ದವಲ್ಲಾ ಎಂದಳಂತೆ. ಆಗ ಸಿಡ್ಲಗ ಸುಮ್ಮನೇ ಊಟ ಮಾಡಬೇ ಗಲಾಟೆ ಮಾಡಬೇಡ ಅಂದನಂತೆ. ಬಾಗಿಲ ಬಳಿ ನಿಂತಿದ್ದ ದುರುಗಮ್ಮನಿಗೆ ಇವರು ಹರಿಜನವೆಂದು ಗೊತ್ತಾಯಿತಂತೆ. ಸಿಡ್ಲಗ ತಾನು ಬ್ರಾಹ್ಮಣನೆಂದು ಸುಳ್ಳು ಹೇಳಿ ಆಕೆಯನ್ನು ಮದುವೆಯಾಗಲು ಬಂದಿದ್ದ. ದುರುಗಮ್ಮ ಸಿಟ್ಟಿಗೆ ಬಂದು ಒನಕೆಯನ್ನು ಹಿಡಿದುಕೊಂಡು ಅವನ ಹಿಂದೆ ಓಡಿದಳಂತೆ. ಸಿಡ್ಲಗ ನಿಲ್ಲದೆ ಓಡತೊಡಗಿದ. ಸಿಡ್ಲಗನಿಗೆ ತಪ್ಪಿಸಿಕೊಳ್ಳಲು ಬೇರೆ ದಾರಿಯೇ ಕಾಣಲಿಲ್ಲ. ಅವನು ಓಡುತ್ತಿರುವ ದಾರಿಯಲ್ಲಿ ಕೋಣ ಅಡ್ಡ ಬಂತಂತೆ. ತಕ್ಷಣ ಸಿಡ್ಲಗ ಕೋಣದ ಗುದದ್ವಾರದಲ್ಲಿ ಹೊಕ್ಕೊಂಡನಂತೆ. ಮೂರು ವರ್ಷಕ್ಕೊಮ್ಮೆ ಕೋಣವನ್ನು ಕಡಿಯಿರಿ, ಕೋಣದ ಮುಖದ ಮೇಲೆ ನೊಣ (ಸತುವು) ತೆಗೆದು ದೀಪ ಉರಿಸಿರಿ ಎಂದು ಕೂಗಿ ಹೇಳಿ ದುರುಗಮ್ಮ ಗುಡ್ಡೇಕಲ್ಲು ಆದಳು ಎಂಬ ಪ್ರತೀತಿ ಶಿವಮೊಗ್ಗ ನಾಯಕರಲ್ಲಿದೆ. ಕೋಣ ಕಡಿಯುವಾಗ ದುರುಗಮ್ಮ ದೇವತೆ ಬಳಿ, ಮೂಗುತಿಯನ್ನು ತೆಗೆಯುತ್ತಾಳೆ ಎಂಬ ಪ್ರತೀತಿ ಕೂಡ ಇದೆ. ಕೋಣದ ಗುದದ್ವಾರದಲ್ಲಿ ಸಿಡ್ಲಗ ಹೊಕ್ಕೊಂಡಿದ್ದಕ್ಕಾಗಿ ಕೋಣನೇ ಆಕೆಯ ಗಂಡ ಎಂಬ ಪ್ರತೀತಿಯೂ ಕೂಡ ಶಿವಮೊಗ್ಗ ಬೇಡರಲ್ಲಿದೆ.

**ಮದುವೆ ಸಂದರ್ಭದಲ್ಲಿ ಗುಡ್ಡೇಕಲ್ಲುಗಳ ಆಚರಣೆ**

ಕೇರಿಯ ಹಿರಿಯರಿಂದ ಕಿರಿಯವರೆಗೆ ಈ ಗುಡ್ಡೇಕಲ್ಲುಗಳ ಬಗ್ಗೆ ಅಪಾರವಾದ ಗೌರವ ಭಾವನೆ ಇದೆ. ಮದುವೆ ಸಂದರ್ಭದಲ್ಲಿ ಮದುಮಕ್ಕಳು ಈ ಗುಡ್ಡೇಕಲ್ಲುಗಳ ಪೂಜೆ ಮಾಡಿ ಮುಂದೆ ಹೋಗಬೇಕು. ಒಂದು ವೇಳೆ ಬೇರೆ ಊರುಗಳಲ್ಲಿ ಮದುವೆ ಇದ್ದರೆ ಮದುಮಕ್ಕಳು ಈ ಗುಡ್ಡೇಕಲ್ಲುಗಳಿಗೆ ಕಾಯಿ, ಕರ್ಪೂರ, ಬಾಳೆಹಣ್ಣು, ಹೂ, ಕಂಕುಮ ಮತ್ತು ಬುಕ್ಕಿಟ್ಟು ಇತ್ಯಾದಿಗಳಿಂದ ಪೂಜೆ ಮಾಡಿಸಿ ಗುಡ್ಡೇಕಲ್ಲುಗಳನ್ನು ದಾಟಿ ಮುಂದಕ್ಕೆ ಹೋಗಬೇಕು. ಅಲ್ಲಿಯವರೆಗೆ ಈ ಗುಡ್ಡೇಕಲ್ಲುಗಳನ್ನು ದಾಟಿ ಹೋಗುವಂತಿಲ್ಲ. ಅವರನ್ನು ಹೋಗಲು ಕೇರಿಯ ಹಿರಿಯರು ಬಿಡುವುದಿಲ್ಲ. ಗುಡಿಯಲ್ಲಿರುವ ದೇವರಂತೆ ಈ ಗುಡ್ಡೇಕಲ್ಲುಗಳನ್ನು ದೇವರೆಂದು ಭಾವಿಸುತ್ತಾರೆ. ಮಕ್ಕಳಿಗೆ ಅಮ್ಮ ಬಂದರೆ, ಐದು ದಿನ ಆದ ಮೇಲೆ ಅಮ್ಮ ಬಂದ ಮಕ್ಕಳನ್ನು ಗುಡ್ಡೇಕಲ್ಲು ಕಲ್ಲಿನ ಹತ್ತಿರ ಕರೆದುಕೊಂಡು ಹೋಗಿ ಪೂಜೆ ಸಲ್ಲಿಸಿ, ಕೈ ಮುಗಿದು ಬರುವ ಸಂಪ್ರದಾಯವಿದೆ. ರಾಶಿ ಪೂಜೆ ಮಾಡುವಾಗ ಮೊದಲು ಗುಡ್ಡೇಕಲ್ಲುಗಳಿಗೆ ಪೂಜೆಯನ್ನು ಮಾಡಿಕೊಂಡು ಹೋಗುತ್ತಾರೆ. ಈ ಕೇರಿಗಳಲ್ಲಿ ಯಾರಾದರೂ ಜೈಲು ಶಿಕ್ಷೆಯನ್ನು ಅನುಭವಿಸಿ ಬಂದ ಮೇಲೆ ನೇರವಾಗಿ ಕೇರಿಯ ಒಳಕ್ಕೆ ಪ್ರವೇಶಿಸುವಂತಿಲ್ಲ. ಗುಡ್ಡೇಕಲ್ಲುಗಳ ಹೊರಗೆ ಸ್ನಾನ ಮಾಡಿಸಿ ಗುಡ್ಡೇಕಲ್ಲುಗಳ ಪೂಜೆಯಾದ ನಂತರವೇ ಅವರನ್ನು ಕೇರಿಯ ಒಳಕ್ಕೆ ಕರೆದುಕೊಳ್ಳುತ್ತಾರೆ. ಪ್ರತಿಯೊಂದು ಕೇರಿಗಳಲ್ಲಿಯೂ ಈ

ರೀತಿಯ ಆಚರಣೆಗಳಿವೆ. ಕೇರಿಗಳಲ್ಲಿ ಯಾರಾದರೂ ತೀರಿಕೊಂಡಾಗ ಆ ವ್ಯಕ್ತಿಗಾಗಿ ತಲೆಮಂಡಿಯನ್ನು ಕೊಟ್ಟು ವ್ಯಕ್ತಿ ಮೂರು ಕೂಳು ಊಟ ಮಾಡಿದ ನಂತರ ಗುಡ್ಡೇಕಲ್ಲುಗಳ ಹೊರಗಡೆ ಬಂದು ಇರಬೇಕೆಂದು ಪದ್ಧತಿ ಈ ಕೇರಿಗಳಲ್ಲಿದೆ. ಸಮಾಧಿ ಹತ್ತಿರ ಹೋಗಿ ಮೂರುಕೂಳು ಹಾಕಿ ಬರುವ ವ್ಯಕ್ತಿಗಳಿಗೆ ಈ ತಲೆಮಂಡಿ ಕೊಟ್ಟ ವ್ಯಕ್ತಿ ಕಾಣಬಾರದು. ಅಲ್ಲದೇ ಕೇರಿಯ ಗುಡ್ಡೇಕಲ್ಲು ಒಳಗಡೆ ಇರಬಾರದೆಂದು ಪದ್ದತಿ ಇದೆ. ಕೇರಿಯ ಪ್ರತಿಯೊಂದು ಮನೆಗಳಲ್ಲಿ ರೋಗರುಜಿನಿಗಳಿಂದ ಸಾವುಗಳಿಂದ ಆತಂಕಗಳು ಬಾರದಿರಲೆಂದು ತಲೆಮಂಡಿ ಕೊಟ್ಟ ವ್ಯಕ್ತಿ ಅನಿಷ್ಟವೆಂದು ಗುಡ್ಡೇಕಲ್ಲುಗಳಿಂದ ಹೊರಕ್ಕೆ ಕಳಿಸಿದರೆ ಕೇರಿಗೆ ಯಾವುದೇ ಕಂಟಕ ಬರುವುದಿಲ್ಲವೆಂದು ಭಾವನೆಯೂ ಕೂಡ ಕೇರಿಯ ಜನರಲ್ಲಿದೆ.

**ಗುಡ್ಡೇಕಲ್ಲುಗಳ ಬಗೆಗಿನ ನಂಬಿಕೆ, ವಿಧಿ–ನಿಷೇಧಗಳು**

೧. ಕೇರಿಗಳಲ್ಲಿ ಸಾಮಾನ್ಯವಾಗಿ ಮಹಿಳೆಯರಿಗಾಗಲಿ, ಪುರುಷರಿಗಾಗಲಿ, ದೆವ್ವ ಬಡಿದಾಗ ದೆವ್ವಗಳನ್ನು ಬಿಡಿಸಲು ಗುಡ್ಡೇಕಲ್ಲುಗಳ ಹೊರಗೆ ಕರೆದುಕೊಂಡು ಹೋಗುತ್ತಾರೆ. ದೆವ್ವ ಬಡಿದ ವ್ಯಕ್ತಿಯ ಬಟ್ಟೆಗಳನ್ನು ಗುಡ್ಡೇಕಲ್ಲುಗಳ ಹೊರಗೆ ಬಡಿಸುತ್ತಾರೆ. ನಂತರ ಗುಡ್ಡೇಕಲ್ಲುಗಳ ಪೂಜೆ ಮಾಡಿಸಿ, ಕೇರಿಯ ಒಳಕ್ಕೆ ಕರೆದುಕೊಳ್ಳುವ ಆಚರಣೆ ಶಿವಮೊಗ್ಗ ಬೇಡರ ಪ್ರತಿಯೊಂದು ಕೇರಿಗಳಲ್ಲಿ ಇದೆ.

೨. ಕೇರಿಗಳಲ್ಲಿರುವ ಗುಡ್ಡೇಕಲ್ಲುಗಳಿಗೆ ಯಾರೂ ಕೂಡ ಕಾಲು ತಾಗಿಸುವಂತಿಲ್ಲ. ಒಂದು ವೇಳೆ ಕಾಲು ತಾಗಿಸಿದರೆ ಅದು ಭೂಮಿ ತಾಯಿಯನ್ನೇ ಒದ್ದಂತೆ ಎನ್ನುವ ನಂಬಿಕೆ ಇದೆ.

೩. ಮಾಂತ್ರಿಕ ಶಕ್ತಿಯನ್ನು ನಂಬುವ ಶಿವಮೊಗ್ಗ ಬೇಡರು ಜ್ವರ ಇತ್ಯಾದಿ ರೋಗ ರುಜಿನಗಳು ಬಂದಾಗ ಗೊಂಬೆ, ಲಿಂಬೆಹಣ್ಣು, ಕುಂಕುಮ ಮತ್ತು ಬುಕ್ಕಿಟ್ಟು ಇತ್ಯಾದಿಯನ್ನು ಗಡಿಗೆಯಲ್ಲಿ ಹಾಕಿಕೊಂಡು ತಳವಾರ ಎನ್ನುವ ವ್ಯಕ್ತಿ ರೋಗಬಂದ ವ್ಯಕ್ತಿಗೆ ನಿವಾಳಿಸಿ ಗುಡ್ಡೇಕಲ್ಲುಗಳ ಹೊರಗೆ ಎಸೆಯುದುಂಟು.

೪. ಮಕ್ಕಳು ಒಂದೇ ಸಮನೆ ಅಳುತ್ತಿದ್ದರೆ ಗುಡ್ಡೇಕಲ್ಲುಗಳಿಗೆ ಹೋಗಿ ಎಣ್ಣೆಯನ್ನು ಹಾಕಿ ಬರುತ್ತಾರೆ. ಈ ರೀತಿ ಎಣ್ಣೆಯನ್ನ ಹಾಕಿದರೆ ಮಕ್ಕಳು ಅಳುವುದನ್ನು ಬಿಟ್ಟು ಸುಮ್ಮನೆಯಾಗುತ್ತಾರೆ ಎಂಬ ಭಾವನೆ ಇದೆ.

೫. ಭಾರತ ಹುಣ್ಣಿಮೆಯ ದಿನ ಕೇರಿಗಳಲ್ಲಿರುವ ದೇವತೆಗಳ ಗುಡಿಗಳಲ್ಲಿ ಹೋಳಿಗೆ ಎಡೆಯನ್ನು ಹಾಕುವ ಪದ್ಧತಿ ಇದೆ. ಅಂದು ಗುಡ್ಡೇಕಲ್ಲುಗಳಿಗೆ ವಿಶೇಷ ಪೂಜೆ ಮಾಡಿ ಎಡೆ ಹಾಕುವ ಪದ್ಧತಿ ಇದೆ.

೬. ಕೇರಿಗಳಲ್ಲಿ ಕುಸ್ತಿಪಟುಗಳು ಕುಸ್ತಿ ಸ್ಪರ್ಧೆಗೆ ಹೋಗುವುದಕ್ಕಿಂತ ಮೊದಲು ಕೇರಿಯ ಗುಡ್ಡೇಕಲ್ಲುಗಳ ಪೂಜೆ ಸಲ್ಲಿಸಿದ ಮೇಲೆಯೇ ಹೋಗಬೇಕೆಂಬ ನಂಬಿಕೆ ಇದೆ.

೭. ಕೇರಿಗಳಲ್ಲಿರುವ ಗುಡ್ಡೇಕಲ್ಲುಗಳಿಗೆ ಪೂಜೆ ಸಲ್ಲಿಸಿ ಬರುವಾಗ ಕಾಲು ತೊಳೆಯದೆ ಮನೆಯೊಳಕ್ಕೆ ಬರಬೇಕೆಂಬ ಪದ್ದತಿ ಶಿವಮೊಗ್ಗ ಬೇಡರಲ್ಲಿದೆ.

೮. ಶಿವಮೊಗ್ಗ ಬೇಡರು ಅಮ್ಮನನ್ನು ಕಳುಹಿಸುವಾಗ ಕೇರಿಗಳಲ್ಲಿರುವ ಗುಡ್ಡೇಕಲ್ಲುಗಳಿಗೆ ವಿಶೇಷ ಪೂಜೆಯನ್ನು ಮಾಡುತ್ತಾರೆ.

೯. ಬಹುದಿನಗಳವರೆಗೆ ಮಳೆಯಾಗದಿದ್ದರೆ ಶಿವಮೊಗ್ಗ ಬೇಡರು ಭಜನೆ ಮಾಡುತ್ತಾ ಕೇರಿಗಳಲ್ಲಿರುವ ಹೆಣ್ಣು ದೇವರ ಗುಡಿಗಳಿಗೆ ಹಾಗೂ ಗುಡ್ಡೇಕಲ್ಲುಗಳಿಗೆ ಹಣ್ಣು ಕಾಯಿ ಅರ್ಪಿಸುತ್ತಾರೆ. ಈ ರೀತಿ ಅರ್ಪಿಸಿದರೆ ಮಳೆ ಬರುತ್ತದೆ ಎಂಬ ನಂಬಿಕೆ ಇದೆ.

೧೦. ಕೇರಿಗಳಲ್ಲಿ ಯಾರಾದರೂ ತೀರಿಕೊಂಡರೆ, ಋತುಮತಿಯಾದರೆ ಗುಡ್ಡೇಕಲ್ಲುಗಳನ್ನು ಪೂಜೆ ಮಾಡುವಂತಿಲ್ಲ.

೧೧. ತವರು ಮನೆಯಲ್ಲಿ ಹುಟ್ಟಿದ ಮಗುವನ್ನು ಒಬ್ಬ ಮಹಿಳೆ ತನ್ನ ಗಂಡನ ಮನೆಗೆ ತೊಟ್ಟಿಲ ಸಮೇತ ಬರುವಾಗ ನೇರವಾಗಿ ಮನೆಗಳಿಗೆ ಹೋಗುವಂತಿಲ್ಲ. ಗುಡ್ಡೇಕಲ್ಲುಗಳ ಪೂಜೆ ಆದ ಮೇಲೆಯೇ ಬರಬಕೇಂಬ ಪದ್ಧತಿ ಇದೆ.

೧೨. ದಸರಾ ಹಬ್ಬದ ದಿನ ಕೇರಿಗಳ ಗುಡ್ಡೇಕಲ್ಲುಗಳಿಗೆ ವಿಶೇಷ ಪೂಜೆಗಳು ನಡೆಯುತ್ತವೆ.

೧೩. ಬಡವರಿರಲಿ, ಶ್ರೀಮಂತರಿರಲ್ಲಿ ಮದುಮಕ್ಕಳು ಕಲ್ಯಾಣ ಮಂಟಪದಿಂದ ನೇರವಾಗಿ ಮನೆಗಳಿಗೆ ಬರುವಂತಿಲ್ಲ. ಕೇರಿಗಳಲ್ಲಿ ಗುಡ್ಡೇಕಲ್ಲುಗಳಿಗೆ ಪೂಜೆ ಸಲ್ಲಿಸಿದ ಮೇಲೆಯೇ ಮನೆಗೆ ಪ್ರವೇಶಿಸಬೇಕೆಂಬ ಸಂಪ್ರದಾಯವಿದೆ. ಹೀಗೆ ಗುಡ್ಡೇಕಲ್ಲುಗಳು ಶಿವಮೊಗ್ಗ ಬೇಡರ ಜೀವನದಲ್ಲಿ ಹಾಸುಹೊಕ್ಕಾಗಿವೆ. ಹಿಂದಿನಿಂದ ಇಂದಿನವರೆಗೆ ಅವುಗಳ ಆಚರಣೆ ನಿರಂತರವಾಗಿ ನಡೆಯುತ್ತಿದೆ.

**೧೧. ಮಹಾ ಶಿವರಾತ್ರಿ**

ಶಿವಮೊಗ್ಗ ಬೇಡ ಸಮುದಾಯವು ಶಿವರಾತ್ರಿ ಹಬ್ಬವನ್ನು ಆಚರಿಸುತ್ತದೆ. ಕೆಲವರು ಹಗಲು ಉಪವಾಸ ಇನ್ನೂ ಕೆಲವರು ರಾತ್ರಿ ಜಾಗರಣೆಯನ್ನು ಮಾಡುತ್ತಾರೆ. ಶಿವರಾತ್ರಿಯ ದಿನದಂದು ಮುರುಡೇಶ್ವರ, ನೀಲಕಂಠೇಶ್ವರ, ಗೋಕರ್ಣದ ಮಹಾಬಲೇಶ್ವರ, ಇಡಗುಂಜಿ ಗಣೇಶ ಆಂಜನೇಯ ಇನ್ನಿತರ ಪ್ರಮುಖ ದೇವಸ್ಥಾನಗಳಿಗೆ ಕುಟುಂಬದ ಎಲ್ಲಾರು ಭೇಟಿ ನೀಡಿ ದೇವರ ದರ್ಶನ ಮಾಡಿಕೊಂಡು ಬರುತ್ತಾರೆ. ಅಂದು ಇಡೀ ದಿನ ಉಪವಾಸವಿದ್ದು ಭಯ ಭಕ್ತಿಯಿಂದ ಶಿವರಾತ್ರಿಯನ್ನು ಆಚರಿಸುತ್ತಾರೆ. ಇನ್ನೂ ಕೆಲವರು ವಯಸ್ಸಾದವರು ಏನೂ ತೆಗೆದುಕೊಳ್ಳದೆ ಉಪವಾಸದಿಂದ ಹಬ್ಬವನ್ನು ಆಚರಿಸುತ್ತಾರೆ. ಬೇಡರ ಕಣ್ಣಪ್ಪನ ಜಾತ್ರೆ ಶಿವಮೊಗ್ಗದಲ್ಲಿ ವಿಜೃಂಭಣೆಯಿಂದ ನಡೆಯುತ್ತದೆ.

**೧೨. ಯುಗಾದಿ ಹಬ್ಬ**

ಯುಗಾದಿ ಮೊಟ್ಟ ಮೊದಲ ಹಬ್ಬ ಹಿಂದೂ ಪಂಚಾಂಗದ ಪ್ರಕಾರ ಹೊಸ ವರ್ಷದ ಆರಂಭ ಆದುದರಿಂದ ಈ ಹಬ್ಬವನ್ನು ಶಿವಮೊಗ್ಗ ಬೇಡ ಬುಡಕಟ್ಟು ಸಡಗರದಿಂದ ಆಚರಿಸುವರು ಹಬ್ಬಕ್ಕಿಂತ ನಾಲ್ಕು ದಿನ ಮೊದಲೆ ಮಹಿಳೆಯರು ಸಂಡಿಗೆ, ಹಪ್ಪಳ, ಉಪ್ಪು, ಜೀರಿಗೆ ತುಂಬಿರುವ

ಮೆಣಸಿನಕಾಯಿಗಳನ್ನು ತಯಾರಿಸುತ್ತಾರೆ. ಆ ದಿನ ಸಂತೋಷವಾಗಿದ್ದರೆ ವರ್ಷವಿಡಿ ಸಂತೋಷ ನೆಲೆಸುವುದು ಎಂಬ ನಂಬಿಕೆ ಇವರಲ್ಲಿ ಇದೆ. ಯುಗಾದಿ ಪಾಡ್ಯದ ದಿನ ಪ್ರತಿಯೊಬ್ಬರು ಸ್ನಾನ ಮಾಡುವಾಗ ಬಿಸಿ ನೀರಿನಲ್ಲಿ ಶಾವಿಗೆ ಹಾಗೂ ಬೇವಿನ ಎಲೆ ಮತ್ತು ಹೂವನ್ನು ಹಾಕಿಕೊಂಡು ಅಭ್ಯಂಜನ ಸ್ನಾನ ಮಾಡಿ ಹೊಸ ಬಟ್ಟೆ ಧರಿಸಿ ದೇವರಿಗೆ ಕೈ ಮುಗಿದು ಬೇವು ಬೆಲ್ಲ ಸೇವಿಸುವುದು ವಾಡಿಕೆ. ಬೇವು ಮಾಡುವ ವಿಧಾನವೆಂದರೆ, ಬೇವಿನ ಹೂ, ಕಡ್ಲೆ ಪುಡಿ ಕಲ್ಲು ಸಕ್ಕರೆ, ಕಸಕಸೆ, ದ್ರಾಕ್ಷಿ ಗೊಡಂಬೆ, ಕೊಬ್ಬರಿ, ಕೇರು ಬೀಜ ಉತ್ತುತ್ತಿ ಇವುಗಳನ್ನು ಸೇರಿಸಿ ಪುಡಿ ಮಾಡಿ ಜೊತೆಗೆ ಬೆಲ್ಲವನ್ನು ಬೆರಸಿ ಹೊಸ ಮಡಿಕೆಗೆ ಹಾಕುತ್ತಾರೆ. ಹಾಕಿದ ನಂತರ ಮಡಿಕೆಗೆ ತಣ್ಣನೆಯಾ ಬಟ್ಟೆಯನ್ನು ಸುತ್ತುತ್ತಾರೆ. ಸುಮಾರು ಅರ್ಧ ಗಂಟೆಗಳ ನಂತರ ಪೂಜೆ ಮಾಡಿ ಪಾಡ್ಯದ ದಿನ ಸೇವಿಸುತ್ತಾರೆ. ಇದಕ್ಕೆ ನೀರು ಬೇವು ಎಂದು ಕರೆಯುತ್ತಾರೆ. ಇದು ಬಾಳಿನ ಸಿಹಿ ಕಹಿಗಳನ್ನು ಸಮಾನವಾಗಿ ಸ್ವೀಕರಿಸಬೇಕೆಂಬುದನ್ನು ಸಾಂಕೇತಿಕವಾಗಿ ಅರುಹುತ್ತದೆ. ಬಹಳಷ್ಟು ಹಬ್ಬಗಳಿಗೆ ಹೋಳಿಗೆಯದೆ ವಿಶೇಷ "ಹೋಳಿಗೆ ಇಲ್ಲದ ಹಬ್ಬವಿಲ್ಲದ ರಥವಿಲ್ಲದ ಜಾತ್ರೆಯಿಲ್ಲ ಎಂಬ ಗಾದೆ ಮಾತು ಹುಟ್ಟುವಷ್ಟು ಇದರ ಜನಪ್ರಿಯತೆ ಇದೆ. ಯುಗಾದಿ ದಿನ ಪಕ್ಕದಲ್ಲಿನ ದೇವಸ್ಥಾನಗಳಿಗೆ ಹೋಳಿಗೆ ಎಡೆಯನ್ನು ಕೊಡಲಾಗುತ್ತದೆ. ಸಾಮಾನ್ಯವಾಗಿ ಬಡವ, ಶ್ರೀಮಂತ ಎನ್ನದೆ ಎಲ್ಲರ ಮನೆಗೆ ತಳಿರು ತೋರಣಗಳನ್ನು ಕಟ್ಟಲಾಗುತ್ತದೆ. ಇವರು ಮೂರು ದಿನಗಳವರೆಗೆ ಹಬ್ಬವನ್ನು ಆಚರಿಸುತ್ತಾರೆ. ಪಾಡ್ಯದ ದಿನ ಶಾವಿಗೆ ಪಾಯಿಸ ಇತ್ಯಾದಿ ಸಿಹಿ ಊಟ ನಡೆಯುತ್ತದೆ. ಮಾರನೆ ದಿನ ಹೋಳಿಗೆ ಊಟ ನಂತರ ಮೂರನೆಯ ದಿನ ಕರಿಯೆಂದು ಮಾಂಸಹಾರಿ ಆಹಾರವನ್ನು ಸೇವಿಸುತ್ತಾರೆ. ಯುಗಾದಿಯಂದು ಶಿರಸಿಯ ಮಾರಿಕಾಂಬ ದೇವಿ ಕೆಂಡದ ಕಾರ್ಯಕ್ರಮದಲ್ಲಿ ಹಲಗೆಯನ್ನು ಭಾರಿಸುತ್ತಾ ತಂಡ ತಂಡವಾಗಿ ಬಂಧು ಭಾಗವಹಿಸುತ್ತಾರೆ. ಸಾಮಾನ್ಯವಾಗಿ ಶಿವಮೊಗ್ಗ ಜಿಲ್ಲೆಯ ತಾಲೂಕಿನಲ್ಲಿಯೂ ಬೇಡ ಸಮುದಾಯವು ಬೇಟೆಯನ್ನು ಆಡುವ ಪದ್ದತಿ ಇತ್ತು. ಆದರೆ ಅರಣ್ಯ ಸಂರಕ್ಷಣೆ ಕಾಯ್ದೆ ಜಾರಿಗೆ ಬಂದ ನಂತರ ಆಧುನಿಕತೆ ಮತ್ತು ಸರ್ಕಾರದ ನಿಯಮಗಳ ಪ್ರಭಾವದಿಂದಾಗಿ ಈ ಪದ್ಧತಿಯು ಕ್ರಮೇಣವಾಗಿ ಮರೆಯಾಗಿದೆ ಎಂದು ಅಧ್ಯಯನದ ಸಂದರ್ಭದಲ್ಲಿ ತಿಳಿಯಲಾಗಿದೆ. ಮುಂದುವರಿದು ಇನ್ನೂ ಕರಿಯ ದಿನ ಮಹಿಳೆಯರು ಸಂಜೆ ಓಕುಳಿಯಾಡುವ ಪದ್ಧತಿ ಇವರಲ್ಲಿ ಇಂದಿಗೂ ರೂಢಿಯಲ್ಲಿದೆ. ಶಿವಮೊಗ್ಗ ಜಿಲ್ಲೆಯ ಬೇಡ ಬೇಡರಲ್ಲಿ ಕಾರ್ತೀಕ ಮಾಸವು ಕೂಡ ತುಂಬಾ ಮಹತ್ವದ ಹಬ್ಬವಾಗಿದೆ. ಕಾರ್ತೀಕ ಮಾಸದಲ್ಲಿ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ, ಸೊರಬ, ಭದ್ರಾವತಿ, ಸಾಗರ, ಹೊಸ ನಗರ, ತೀರ್ಥಹಳ್ಳಿ ಮತ್ತು ಶಿವಮೊಗ್ಗ ತಾಲೂಕಿನಾದ್ಯಂತ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಕಾರ್ತೀಕ ಮಾಸದ ನಿಮಿತ್ತ ಪ್ರಮುಖವಾಗಿ ಆಂಜನೇಯಸ್ವಾಮಿ ದೇವಸ್ಥಾನಗಳಲ್ಲಿ ಸ್ಥಳೀಯ ಪ್ರಮುಖ ದೇವಸ್ಥಾನಗಳಲ್ಲಿ ಜನಸಂದಣಿ ಸೇರುತ್ತದೆ. **"ಹಳ್ಳಿ ಊರಿಗೆ ಹನುಮಪ್ಪ "** ಎನ್ನುವ ಗಾದೆ ಮಾತು ಇಂದಿಗೂ ಪ್ರಸ್ತುತದಲ್ಲಿದೆ. ಕರ್ನಾಟಕದ ಯಾವುದೇ ಗ್ರಾಮಕ್ಕೆ ಹೋದರು, ಬೇರೆ ಯಾವುದೇ ದೇವಸ್ಥಾನಗಳು ಇಲ್ಲದಿದ್ದರೂ ಆಂಜನೇಯ ಸ್ವಾಮಿ

ದೇವಸ್ಥಾನ ಮಾತ್ರ ಇದ್ದೆ ಇರುತ್ತದೆ. ಆಂಜನೆಯ ಸ್ವಾಮಿಯ ಪೂಜೆ ಬ್ರಹ್ಮದೇವರ ಪೂಜೆಗೆ ಸಮಾನ. ಅಷ್ಟು ಪ್ರಸಿದ್ಧವಾದ ದೇವರೆಂದರೆ ಅದು ಆಂಜನೆಯ ಸ್ವಾಮಿ. ಪ್ರತಿ ಅಮಾವಾಸ್ಯೆ, ಹುಣ್ಣಿಮೆ ಮತ್ತು ಶನಿವಾರಗಳಂದು ಆಂಜನೆಯನ ಪೂಜೆ ಪುನಸ್ಕಾರಗಳು ಶ್ರದ್ಧೆ ಭಕ್ತಿಯಿಂದ ನಡೆಯುತ್ತವೆ.

**೧೩. ನಾಗರಪಂಚಮಿ**

ಇದು ಶ್ರಾವಣ ಮಾಸದಲ್ಲಿ ಬರುವ ಹಬ್ಬ. ಈ ಹಬ್ಬವನ್ನು ಶಿವಮೊಗ್ಗ ಜಿಲ್ಲೆಯಾದ್ಯಂತ ಬೇಡರು ವಿಶೇಷವಾಗಿ ಆಚರಿಸುವುದುಂಟು. ಶ್ರಾವಣ ಮಾಸದಲ್ಲಿ ನಾಲ್ಕು ವಾರಗಳ ಕಾಲ ಈ ಹಬ್ಬವನ್ನು ಆಚರಿಸುತ್ತಾರೆ. ಇವರಲ್ಲಿ ಮನೆಯ ಯಜಮಾನ ಒಂದೊತ್ತಿನಿಂದ ಬೆಳಿಗ್ಗೆ ಮಡಿ ಉಟ್ಟು, ತಂಬಿಟ್ಟು, ಹೋಳಿಗೆ, ಕಡುಬು, ಕಾಯಿ, ಬಾಳೆಹಣ್ಣು, ಕರ್ಪೂರ, ಉದ್ದಿನಕಡ್ಡಿ, ಗಂಧದ ಕಡ್ಡಿ, ಹೂವು ಇನ್ನಿತರ ಎಡೆಯನ್ನು ತೆಗೆದುಕೊಂಡು ಊರ ಪಕ್ಕದಲ್ಲಿ ಹುತ್ತಗಳಿಗೆ ಅಥವಾ ನಾಗಪ್ಪ ಮೂರ್ತಿಗಳಿಗೆ, ಆಗತಾನೇ ಕರೆದು ತಂದ ನೊರೆಹಾಲು ಹೊಯ್ದು, ಎಡೆಯನ್ನು ಹಾಕುವರು. ಪೂಜೆಯಾದ ನಂತರ ನೊರೆ ಹಾಲು ಮತ್ತು ತಂಬಿಟ್ಟನ್ನು ಪ್ರಸಾದವೆಂದು ಸೇವಿಸುತ್ತಾರೆ. ಇವರು ಮುಂಗಾರಿ ಹಬ್ಬದಲ್ಲಿ ತಮ್ಮ ಆಸ್ತಿ, ಐಶ್ವರ್ಯ, ಸಂಪತ್ತೆಂದು, ಗೋವುಗಳನ್ನು ಕೂಡ ಪೂಜಿಸುವುದುಂಟು. ಕೆಲವರು ಮೊದಲ ವಾರ ಇನ್ನೂ ಕೆಲವರು ಎರಡನೆಯಾ ವಾರ, ಮೂರನೆಯಾ ವಾರ ಹಾಗೂ ಕೊನೆಯ ಸೋಮವಾರವೆಂದು ಅಥವಾ ಕಡೆಯ ಶ್ರಾವಣ ಸೋಮವಾರವೆಂದು ಇವರು ನಾಗರ ಪಂಚಮಿ ಹಬ್ಬವನ್ನು ಆಚರಿಸುವುದುಂಟು. ಆಷಾಡದ ಕೊನೆಯಲ್ಲಿ ಶಿವಮೊಗ್ಗ ಬೇಡರಲ್ಲಿ ಪಂಚಮಿ ತಯಾರಿ ನಡೆಯುತ್ತದೆ. ಮನೆಮನೆಗೆ ಸುಣ್ಣ ಸಾರಣೆ ಮಾಡಿ, ಗಂಡನ ಮನೆಯಿಂದ ಹೆಣ್ಣು ಮಕ್ಕಳನ್ನು ತವರಿಗೆ ಕರೆತರುವ ಸಂಭ್ರಮ. ತವರಿನ ಕರೆಗೆ ಖಾತರಿಸಿ ಕಾಯುವ ಹೆಂಗಳೆಯರು ಹೀಗೆ ಹಬ್ಬ ಇದೆ. ಎಂದಾಗ ತರತರದ ಐದು ದಿನಸಿನ ಉಂಡಿ, ಚಿಗಳಿ, ತಂಬಿಟ್ಟು, ನೆಲಗಡಲೆ, ಅಕ್ಕಿ ಇನ್ನೂ ನಾನಾ ತರಹದ ಉಂಡಿಗಳ ಸಾಲು ಬೆಳೆಯುತ್ತಾ ಹೋಗುತ್ತದೆ. ತವರಿಗೆ ಬಂದ ಹೆಣ್ಣು ಮಕ್ಕಳು ಚುರುಕಾಗಿ ನಿಂತಲ್ಲಿ ನಿಲ್ಲದೆ, ಕುಳಿತಲ್ಲಿ ಕೂಡದೆ, ಗೆಳತಿಯರು ಕೂಡಿ ನಲಿಯುವ ಸಂಭ್ರಮ ಸ್ನೇಹಿತರ ಜೊತೆಗೂಡಿ ಮನೆ ಮುಂದಿರುವ ಮರಗಳಿಗೆ ಜೋಡಿ ಹಗ್ಗದ ಜೋಕಾಲಿ ಕಟ್ಟಿಸಿ ನಿಂತು ಕೂತು ಜೀಕುವ ಪರಿ ಶಿವಮೊಗ್ಗ ಬೇಡರಲ್ಲಿ ಕಾಣಬಹುದಾಗಿದೆ. ಜೋಕಾಲಿಯನ್ನು ಗಂಡಸರು ಕೂಡ ಆಡುತ್ತಾರೆ. ಹೆಂಗಸರು ಜೋಕಾಲಿಯನ್ನು ಒಮ್ಮೆಯಾದರೂ ಜೀಕುವ ಸಂಪ್ರದಾಯವಿದೆ. ಶಿವಮೊಗ್ಗ ಬೇಡರಲ್ಲಿ ಹುಡುಗಿಯರಂತೂ ಬಣ್ಣ ಬಣ್ಣದ ಹೊಸ ಬಟ್ಟೆಯನ್ನು ಧರಿಸಿ, ಉದ್ದದ ಜಡೆಯನ್ನು ಹೆಣೆದು, ಹೂ ಸಿಂಗರಿಸಿ, ಕೈ ತುಂಬಾ ಗಾಜಿನ ಬಳೆಯನ್ನು ತೊಟ್ಟು, ಕಾಲಲ್ಲಿ ಕಡಗ, ಗೆಜ್ಜೆ ಧರಿಸಿ, ಜೋಕಾಲಿ ಜೀಕುವುದು, ಪಂಚಮಿ ಹಬ್ಬದ ವೈಶಿಷ್ಟ್ಯವಾಗಿದೆ. ನಾಗರ ಪಂಚಮಿ ದಿನಗಳಲ್ಲಿ ಹಳ್ಳಿಗಳಲ್ಲಿ ಗಂಡು ಮಕ್ಕಳು ಒಂದು ತಿಂಗಳವರೆಗೆ ಜೂಜು ಪಂದ್ಯಗಳನ್ನು ಆಡುತ್ತಾರೆ. ಕೈಯಿಂದ ತೆಂಗಿನಕಾಯಿಯನ್ನು ಒಡೆಯುವ, ರಸ್ತೆಗಳಲ್ಲಿ ಗುಂಡುಗಳನ್ನು ಉರುಳಿಸುವ,

ತಿಂಡಿ ತಿನ್ನುವ ಸ್ಪರ್ಧೆ, ಕೊಬರಿ ಆಟ ಇತ್ಯಾದಿ ಪಂಚಮಿಯ ದಿನಗಳಲ್ಲಿ ಒಂದು ತಿಂಗಳವರೆಗೆ ಈ ಜೂಜು ಅಥವಾ ಪಂದ್ಯಗಳು ನಡೆಯುತ್ತವೆ.

**೧೪. ದಸರಾ**

ಭಾರತೀಯರ ವೈಭವಯುತ ರಾಷ್ಟ್ರೀಯ ಹಬ್ಬ 'ನವರಾತ್ರಿ'. ಸಡಗರ ಸಂಭ್ರಮದ ಹಬ್ಬ. ಹಿಂದೂಗಳಃ ಹಬ್ಬಗಳಲ್ಲೇ ದಸರಾ ತುಂಬಾ ಪ್ರಸಿದ್ದವಾದದ್ದು, ಮತ್ತು ಮಹತ್ವಪೂರ್ಣವಾದದ್ದು. ಇದು ದುರ್ಗೆಯ, ಕಾಳಿಯ, ಶಕ್ತಿಯ, ಚಾಮುಂಡಿಯ ಆರಾಧನೆಯ ಹಬ್ಬವೂ ಹೌದು. ನಮ್ಮ ನಾಡಿನ ಸಾಂಸ್ಕೃತಿಕ ಪರಂಪರೆಯನ್ನು ಪರಿಚಯಿಸುವ ನಾಡ ಹಬ್ಬವಾದ ನವರಾತ್ರಿಯನ್ನು ಅನಾದಿ ಕಾಲದಿಂದಲೂ ಭಾರತೀಯರು ವಿಜೃಂಭಣೆಯಿಂದ ಆಚರಿಸುತ್ತಾ ಬಂದಿದ್ದಾರೆ. ಪೌರಾಣಿಕವಾದ, ಐತಿಹಾಸಿಕವಾದ ಹಾಗೂ ಧಾರ್ಮಿಕವಾದ ಹಿನ್ನೆಲೆಯ ಸಿರಿವಂತಿಕೆಯನ್ನು ಪಡೆದ ಈ ಬನ್ನಿ ಹಬ್ಬವನ್ನು ಶಿವಮೊಗ್ಗ ಜಿಲ್ಲೆಯಲ್ಲಿರುವ ಬೇಡರು ತುಂಬಾ ವಿಶಿಷ್ಟತೆಯಿಂದ ಆಚರಿಸುತ್ತಾರೆ. ಐತಿಹಾಸಿಕ ಕುರುಹುಗಳನ್ನು ಹೊಂದಿರುವ, ವೈಭವದ ಇತಿಹಾಸ, ಸಂಸ್ಕೃತಿಯ ಶ್ರೀಮಂತಿಕೆಯಿಂದ ಶೋಭಿಸುತ್ತಿರುವ ಶಿವಮೊಗ್ಗ ತಾಲೂಕುಗಳಲ್ಲಿ ಅಮ್ಮನವರ ಬನ್ನಿ ಹಬ್ಬ ಅಥವಾ ಶಿವಮೊಗ್ಗದ ದಸರಾ ಎಂದೇ ಈ ಭಾಗದಲ್ಲಿ ಪ್ರಸಿದ್ಧವಾಗಿರುವ ಈ ಹಬ್ಬವೂ ಶಿವಮೊಗ್ಗ ಬೇಡರಲ್ಲಿ ಹಿಂದಿನಿಂದ ಇಂದಿನವರೆಗೆ ನಿರಂತರವಾಗಿ ನಡೆದುಕೊಂಡು ಬಂದಿದೆ. ಭಾರತದಲ್ಲಿ ನಡೆಯುವ ಅಸಂಖ್ಯಾತ ಹಬ್ಬ ಹರಿದಿನಗಳ ಪೈಕಿ ಶಿವಮೊಗ್ಗ ದಸರಾಕ್ಕೆ ಮಹತ್ವದ ಸ್ಥಾನವಿದೆ. "ದುಷ್ಟರ ಮೇಲೆ ಶಿಷ್ಟರ ಜಯವನ್ನು" ವರ್ಷ ವರ್ಷವೂ ಜನತೆಗೆ ನೆನಪಿಸುವ ಹಬ್ಬವಾದ ಇದನ್ನು ದಸರಾ, ನವರಾತ್ರಿ, ನಾಡಹಬ್ಬ ಎಂಬ ಹೆಸರುಗಳಿಂದ ಕರೆಯುವುದು ರೂಢಿ. ಜನಪದರು ವಿಶೇಷವಾಗಿ ಈ ಹಬ್ಬಕ್ಕೆ ಬನ್ನಿಯ ಹಬ್ಬ ಎಂದು ಹೇಳುವುದುಂಟು. ಕರ್ನಾಟಕದ ನಾನಾ ಭಾಗಗಳಲ್ಲಿ ಈ ಹಬ್ಬದ ವಿಜೃಂಭಣೆಯನ್ನು ಇಂದಿಗೂ ನಾವು ಕಾಣಬಹುದಾಗಿದೆ. ಇಂದು ಇಡೀ ಶಿವಮೊಗ್ಗ ಜಿಲ್ಲೆಯಲ್ಲಿಯೇ ಕೆಲವು ತಾಲೂಕಿ ದಸರಾವೂ ತುಂಬಾ ಉತ್ಸಾಹದಿಂದ ಆಸಕ್ತಿದಾಯಕವಾಗಿ ಆಚರಿಸಲ್ಪಡುತ್ತದೆ. ಶಿವಮೊಗ್ಗ ಜಿಲ್ಲೆ ಪ್ರದೇಶಗಳಲ್ಲಿ ಪ್ರತಿಯೊಂದು ಮನೆಯು ತಳಿರು ತೋರಣಗಳಿಂದ ಅಲಂಕೃತಗೊಂಡಿರುತ್ತದೆ. ಅಲ್ಲದೇ ಬೇಡರ ಪ್ರದೇಶಗಳಲ್ಲಿ ಪ್ರತಿಯೊಂದು ದೇಗುಲಗಳು ಕೂಡ ವಿದ್ಯುತ್ ದೀಪಗಳಿಂದ ಅಲಂಕೃತಗೊಂಡಿರುತ್ತವೆ. ಬಾಳೆಕಂಬಗಳಿಂದ ಇಡೀ ಬೇಡರ ಪ್ರದೇಶಗಳು ಶೋಭಿಸುವಂತೆ ಕಣ್ಮಣಗಳು ತಣಿಸುವಂತೆ ವ್ಯವಸ್ಥೆ ಮಾಡಿರುವುದು ಕಂಡು ಬರುತ್ತದೆ. ಅಮ್ಮನವರ ಬನ್ನಿ ಹಬ್ಬವೆಂದೇ ಹೆಮ್ಮೆಯಿಂದ ವಿಶಿಷ್ಟತೆಯಿಂದ ಕರೆಸಿಕೊಳ್ಳುವ ಶಿವಮೊಗ್ಗ ದಸರಾವು ತನ್ನದೇ ಆದ ಸಾಂಸ್ಕೃತಿಕ ಮೌಲ್ಯವನ್ನು ಒಳಗೊಂಡಿದೆ. ಬೇಡ ಜನಾಂಗದ ಪ್ರದೇಶಗಳಲ್ಲಿ ಹೆಣ್ಣು ದೇವತೆಗಳನ್ನು ನವರಾತ್ರಿಯ ಉತ್ಸವಕ್ಕೆ ಮೊದಲು ಊರಾಡಲು ಹೊರಡಿಸುತ್ತಾರೆ. ಐದು ಇಲ್ಲವೆ ಒಂಭತ್ತು ದಿನಗಳವರೆಗೆ ಈ ದೇವತೆಗಳು ಊರಾಡುತ್ತವೆ. ಐದು ದಿನಗಳವರೆಗೆ ಊರಾಡುವ ಅಮ್ಮನವರು ಒಂಭತ್ತು ದಿನಗಳವರೆಗೆ ಪೂಜೆಗೆ ಕೂಡುತ್ತಾರೆ. ಒಂಭತ್ತು ದಿನಗಳವರೆಗೆ ಊರಾಡುವ ಅಮ್ಮನವರು ಐದು ದಿನಗಳವರೆಗೆ ಪೂಜೆಗೆ

ಕೂಡುತ್ತಾರೆ. ತೊಟ್ಟಿಲಲ್ಲಿ ಅಮ್ಮನವರನ್ನು ಕೂಡಿಸಿ ತೂಗುತ್ತಾರೆ. ತಾಲೂಕಿನಲ್ಲಿರುವ ಹೆಣ್ಣೂ ದೇವತೆಗಳಿಗೆ ನವರಾತ್ರಿಯ ಒಂಭತ್ತು ದಿನಗಳವರೆಗೆ ವಿಶೇಷ ಪೂಜೆ-ಪುನಸ್ಕಾರಗಳು ನಡೆಯುತ್ತವೆ. ಅದರ ಜೊತೆಗೆ ಆಯುಧ ಪೂಜೆ ಕೂಡ ನಡೆಯುತ್ತದೆ.

೧೫. ದೀಪಾವಳಿ

ಶಿವಮೊಗ್ಗ ಜಿಲ್ಲೆಯ ಬೇಡರಲ್ಲಿ ಕೇವಲ ಬೆರಳೆಣಿಕೆ ಜನರು ಮಾತ್ರ ಹಿಗೀಗ ದೀಪಾವಳಿಯ ಹಬ್ಬವನ್ನು ಮಾಡುತ್ತಿದ್ದಾರೆ. ಲಕ್ಷ್ಮಿಯನ್ನು ಮನೆಯಲ್ಲಿ ಕೂಡಿಸುವ ಪದ್ಧತಿ ಇದೆ. ಇನ್ನೂ ಕೆಲವರು ಹಬ್ಬದ ನೇಪಥ್ಯವಾಗಿ ಮನೆಯಲ್ಲಿ ಸಿಹಿಯನ್ನು ಮಾಡಿಕೊಂಡು ಊಟ ಮಾಡುತ್ತಾರೆ. ದೀಪಾವಳಿ, ನರಕ ಚತುರ್ದಶಿ, ಅಮಾವಾಸ್ಯೆ, ಬಲಿಪಾಡ್ಯಮಿ ಎಂದು ಮೂರು ದಿನ ಆಚರಿಸುವ ಹಬ್ಬ. ನರಕಾಸುರನೆಂಬ ರಕ್ಕಸನ ವಧೆಯಾದುದರ ಕುರುಹಾಗಿ ಅಂದು ಎಣ್ಣೆಸ್ನಾನ ಮಾಡುವರು. "ಉಂಡೆದ್ದೆ ಉಗಾದಿ, ಮಿಂದದ್ದೆ ದೀವಳಿಗೆ" ಎಂಬ ಗಾದೆ ಶಿವಮೊಗ್ಗ ಜಿಲ್ಲೆ ಬೇಡರಲ್ಲಿ ಬಳಕೆಯಲ್ಲಿದೆ. ದೀಪಾವಳಿ ಶಿಷ್ಟರಿಗೆ ಬೆಳಕಿನ ಹಬ್ಬವಾದರೆ, ಶಿವಮೊಗ್ಗ ಬೇಡರಿಗೆ ವ್ಯವಸಾಯ ಮತ್ತು ಪಶುಪಾಲನಿಗೆ ಸಂಬಂಧಿಸಿದ ಹಬ್ಬವಾಗಿದೆ. ಹೋರಿಗ:ಳ ಕೊಂಬುಗಳಿಗೆ ಬಣ್ಣವನ್ನು ಹಚ್ಚುತ್ತಾರೆ. ಎತ್ತುಗಳ ಮೈಮೇಲೆ ಜೂಲವನ್ನು ಹಾಕುತ್ತಾರೆ. ಕೊಂಬುಗಳಿಗೆ ಚೆಂಡು ಹೂವನ್ನು ಕಟ್ಟಿ ದೇವಸ್ಥಾನಕ್ಕೆ ಕರೆದುಕೊಂಡು ಹೋಗುತ್ತಾರೆ. ಬಂಡಿಗಳಿಗೂ ಕೂಡ ಬಣ್ಣವನ್ನು ಹಚ್ಚುತ್ತಾರೆ. ಈ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. **'ದೀವಳಿಗೆ ಹಬ್ಬ ದೇವೇಂದ್ರನೈಭೋಗ ಬೆಳೆದು ಬೀಗ್ಯಾಳೋ ಭೂಮಿ ತಾಯಿ ತಾನಂದನೊ'**-ಎಂದು ಶಿವಮೊಗ್ಗ ಬೇಡರಲ್ಲಿನ ಜನಪದರು ಹಾಡುವರು. ದೀವಳಿಗೆ ಹೊತ್ತಿಗೆ ಗದ್ದೆಗಳಲ್ಲಿ ಪೈರು ತುಂಬಿ ತುಳುಕುತ್ತಿರುತ್ತದೆ. ಶಿವಮೊಗ್ಗ ಜಿಲ್ಲೆ ಬೇಡರ ಜನಜನನಿತವಾದ ಒಂದು ನಂಬಿಕೆ ಇದೆ. ಅದೇನೆಂದರೆ, ಲಕ್ಷ್ಮಿಯನ್ನು ದೀಪಾವಳಿಯ ಅಮಾವಾಸ್ಯೆಯೆಂದು ಕೂಡಿಸಿದರೆ, ಏನಾದರೂ ಕೆಡಕು ಸಂಭವಿಸುತ್ತದೆಂಬ ನಂಬಿಕೆ ಇದೆ. ಮಾಂಸ-ಮದ್ದು ತಿನ್ನುವವರು ಈ ಹಬ್ಬವನ್ನು ಹೇಗೆ ತಾನೇ ಆಚರಿಸಲು ಸಾಧ್ಯವೆಂಬುದು ಕೆಲವು ಅನಕ್ಷರಸ್ಥ ಕುಟುಂಬದ ಸದಸ್ಯರ ಅನಿಸಿಕೆಯಾಗಿದೆ. ಹಾಗಾಗಿ ಇಡೀ ಶಿವಮೊಗ್ಗ ಬೇಡರ ಪ್ರದೇಶಗಳಲ್ಲಿ ಈ ಹಬ್ಬ ಅಷ್ಟೊಂದು ಕಳೆಯನ್ನು ಕಂಡಿಲ್ಲ ಎಂದು ಅಧ್ಯಯನದ ಸಂದರ್ಭದಲ್ಲಿ ಗುರುತಿಸಲಾಗಿದೆ.

೧೬. ಹೆಣ್ಣು ದೇವತಾ ಜಾತ್ರೆಗಳು

ಶಿವಮೊಗ್ಗಕ್ಕೆ ಹತ್ತಿರವಿರುವ ಶಿರಸಿಯ ಮಾರಿಕಾಂಬ ದೇವಿಯ ದೇವಸ್ಥಾನವಿದೆ. ಪ್ರತಿವರ್ಷವು ಆಗಿ ಹುಣ್ಣಿಮೆಯಾದ ಒಂಬತ್ತು ದಿವಸಕ್ಕೆ ಅಲ್ಲಿ ತುಂಬಾ ಅದ್ದೂರಿಯಾಗಿ ಜಾತ್ರೆ ನಡೆಯುತ್ತದೆ. ಈ ಜಾತ್ರೆಯಲ್ಲಿ ಶಿವಮೊಗ್ಗ ಜಿಲ್ಲೆಯ ಬೇಡರು ಭಾಗವಹಿಸುತ್ತಾರೆ. ಈ ದೇವತೆ ಶಿವಮೊಗ್ಗ ತಾಲೂಕಿನ ಬೇಡರು ಪ್ರದೇಶದಲ್ಲಿ ಹೆಚ್ಚಾಗಿ ಎಲ್ಲರ ಮನೆ ದೇವತೆಯಾಗಿರುವುದರಿಂದ ಈ ದೇವತೆ ನಡೆದುಕೊಳ್ಳುತ್ತಾರೆ. ಅಲ್ಲದೇ ಜಾತ್ರೆಗೆ ಹೋಗಿ ಬರುತ್ತಾರೆ. ಪ್ರತಿ ಮಂಗಳವಾರ ಹಾಗೂ ಶುಕ್ರವಾರ, ಹುಣ್ಣಿಮೆ ದಿನಗಳಲ್ಲಿ ಈ ದೇವತೆಯ ಗುಡಿಗೆ ತೆರಳಿ ದರ್ಶನ ಪಡೆದು ಬರುತ್ತಾರೆ. ಶಿವಮೊಗ್ಗ

ಜಿಲ್ಲೆ ಬೇಡರು ಆ ದೇವತೆಗೆ ಬೇಡಿಕೊಂಡವರು ಜಾತ್ರೆ ಸಂದರ್ಭದಲ್ಲಿ ಅಥವಾ ಹುಣ್ಣಿಮೆ ದಿನಗಳಲ್ಲಿ ದೀಢ್ ನಮಸ್ಕಾರ ಹಾಕುತ್ತಾರೆ. ಇನ್ನೂ ಕೆಲವರು ಹರಕೆ ಹೊತ್ತವರು ಬ್ಯಾಟಿ ಮಾಡುತ್ತಾರೆ. ಬ್ಯಾಟಿಯನ್ನು ಸಾಮಾನ್ಯವಾಗಿ ಮಂಗಳವಾರ ಇಲ್ಲವೇ ಶುಕ್ರವಾರ ದಿನದಂದು ಮಾಡುತ್ತಾರೆ. ಈ ದೇವತೆಗೆ ಕುರಿ, ಕೋಳಿಯನ್ನು ಬಲಿ ಕೊಡುವ ಪದ್ಧತಿ ಶಿವಮೊಗ್ಗ ಜಿಲ್ಲೆಯ ಬೇಡ ಸಮುದಾಯದಲ್ಲಿ ಇದೆ. ಇನ್ನೂ ಕೆಲವರು ಮಕ್ಕಳ ಜವಳ ತೆಗೆಸುವಾಗ ಪರುವು ಮಾಡುತ್ತಾರೆ. ಅಂದರೆ ಸಿಹಿ ಊಟವನ್ನು ಮಾಡಿಸಿ ಸಂಬಂಧಿಕರಿಗೆ ಹಾಕಿಸುತ್ತಾರೆ. ಶಿವಮೊಗ್ಗ ಜಿಲ್ಲೆಯ ತಾಲೂಕಿನಲ್ಲಿ ಬರುವ ಹೆಣ್ಣು ದೇವತೆಗಳ ನೆನಪಾರ್ಥವಾಗಿ ಕೆಲವರಿಗೆ ಮಾರೆಮ್ಮ, ಮಾರೆಪ್ಪ ಎಂಬ ಹೆಸರಿನಿಂದ ಕರೆಯುವುದು ಶಿವಮೊಗ್ಗ ಬೇಡರಲ್ಲಿ ರೂಢಿಯಲ್ಲಿದೆ. ಇನ್ನೂ ಕೆಲವರು ಮನೆಯಲ್ಲಿ ಗಂಡನ ಹೆಸರು ದುರುಗಪ್ಪನೆಂದು, ಹೆಂಡತಿಯ ಹೆಸರು ಮಾರೆಮ್ಮ ಎಂದು ಇರುವುದನ್ನು ಗಮನಿಸಬಹುದಾಗಿದೆ.

**ಕೋಟೆ ಮಾರಿಕಾಂಬೆ ಜಾತ್ರೆ**

ಶಿವಮೊಗ್ಗ ನಗರದಲ್ಲಿ ೨ ವರ್ಷಗಳಿಗೊಮ್ಮೆ ಕೋಟೆ ಮಾರಿಕಾಂಬೆ ಜಾತ್ರೆಯನ್ನು ಮಾಡುತ್ತಾರೆ. ಶಿವಮೊಗ್ಗದ ಬೇಡರ ದೊಡ್ಡ ಹಬ್ಬವು ಇದು ಆಗಿರುತ್ತದೆ. ಮಾರಿಕಾಂಬೆಯ ಹಿನ್ನೆಲೆಯನ್ನು ನೋಡಿದಾಗ ಈಕೆ ಬ್ರಾಹ್ಮಣರ ಮಗಳು. ಚಪ್ಪಲಿ ಹೊಲಿಯುವ ಮಾದಿಗ ಈಕೆಯನ್ನು ಪ್ರೀತಿಸುತ್ತಾನೆ. ಅವನ ಜಾತಿ ಯಾವುದೆಂದು ಗೊತ್ತಿರುವುದಿಲ್ಲ. ಇಬ್ಬರ ನಡುವೆ ವಿವಾಹ ನಡೆಯುತ್ತದೆ. ಒಬ್ಬ ಮಗ ಹುಟ್ಟಿದ. ಈಕೆಯ ಮಗ ಪ್ರತಿ ದಿನ ತಂದೆಯ ಜೊತೆಯಲ್ಲಿ ಚಪ್ಪಲಿ ಹೊಲಿಯುತ್ತಿರುತ್ತಾನೆ. ಇದನ್ನು ನೋಡಿದ ತಾಯಿ ಬೈದು ಅವನನ್ನು ಬಿಡಿಸುತ್ತಾಳೆ. ತನ್ನನ್ನು ಮದುವೆಯಾದ ಮಾದಿಗನ ಮೇಲೆ ಸೇಡು ತೀರಿಸಿಕೊಳ್ಳಲು ಆಕೆ ದೈವ ರೂಪವನ್ನು ತಾಳುತ್ತಾಳೆ. ಹೆದರಿದ ಮಾದಿಗ ಕೋಣದ ದೇಹವನ್ನು ಸೇರುತ್ತಾನೆ. ಮಗ ಮೇಕೆ ಹೊಟ್ಟೆಯನ್ನು ಸೇರುತ್ತಾನೆ. ಮಗ ಸೇರಿದ ಮೇಕೆಯನ್ನು ಗಾವು ಜೀಗಿಯುತ್ತಾರೆ. ಇದನ್ನು ಕಬ್ಬೇರು ಮಾಡುತ್ತಾರೆ. ಇದಿಷ್ಟು ಕೋಟೆ ಮಾರಿಕಾಂಬೆಯ ಹಿನ್ನೆಲೆಯ ವೃತ್ತಾಂತ. ನಾಡಿಗರ ಮಗಳು ಮಾರಿಕಾಂಬೆ ಎಂಬ ಸಂಪ್ರದಾಯವಿದೆ. ಮಾರಿಕಾಂಬೆಯ ಮೂರ್ತಿಯನ್ನು ಮಾಡಲು ಅರಣ್ಯಕ್ಕೆ ಹೋಗಿ ಕಟ್ಟಿಗೆಯನ್ನು ತರುತ್ತಾರೆ. ೧೨ ಅಡಿ ಎತ್ತರ ಅಥವಾ ೧೪ ಅಡಿ ಎತ್ತರದ ಕಟ್ಟಿಗೆಯಿಂದ ಮಾಡಿದ ಮೂರ್ತಿಯೇ ಶ್ರೀ ಮಾರಿಕಾಂಬೆ. ಮಾರಿಕಾಂಬೆಯ ಜಾತ್ರೆ ೫ ದಿನಗಳವರೆಗೆ ನಡೆಯುತ್ತದೆ. ಶಿವಮೊಗ್ಗ ನಗರದ ಗಾಂಧಿ ಬಜಾರನಲ್ಲಿ ಮೂರ್ತಿ ಸ್ಥಾಪಿಸಿ ಜಾತ್ರೆ ಮಾಡುತ್ತಾರೆ. ಶಿವಮೊಗ್ಗ ನಗರದ ಬೇಡರ ದೊಡ್ಡ ಹಬ್ಬವೆಂದರೆ ಕೋಟೆ ಮಾರಿಕಾಂಬೆ ಜಾತ್ರೆ.. ಕೋಟೆ ಮಾರಿಕಾಂಬೆ ನಾಡಿಗರ ಮಗಳು ಎಂಬ ಕಲ್ಪನೆ ಇದೆ. ಆಕೆಯ ತವರು ಮನೆಯಿಂದ ದಂಡೆ, ಉಡಿಯಕ್ಕಿ ಸೀರೆ ಬಾಸಿಂಗ, ರೇಷ್ಮ ಸೀರೆ ಇನ್ನಿತರ ಪೂಜಾಕೈಂಕಾರ್ಯದ ಪೂಜೆಯ ಸಾಮೂನುಗಳನ್ನು ತರುತ್ತಾರೆ. ವೈಭವಯುತವಾದ ಅಲಂಕಾರಯುಕ್ತವಾದ ಕೋಟೆ ಮಾರಿಕಾಂಬೆ ಪೂಜೆಯನ್ನು ಮೊದಲು ಶಿವಮೊಗ್ಗದ ನಾಡಿಗರು ಮಾಡುತ್ತಾರೆ. ನಂತರ ವಿಶ್ವಕರ್ಮರು ಮಾಡುತ್ತಾರೆ. ಸಾರ್ವಜನಿಕರು ಅದರಲ್ಲಿ ಮಹಿಳೆಯರು ಉಡಿಯಕ್ಕಿ ಸೀರೆ, ಕುಬಸದ ಕಣ ಇತ್ಯಾದಿ

ಪೂಜೆಯ ಸಾಮೂನುಗಳನ್ನು ನೀಡಿ ತಮ್ಮ ಮತ್ತೈದೆತನವನ್ನು ಕಾಪಾಡಬೇಕೆಂದು ಈ ದೇವತೆಯ ಮೊರೆ ಹೋಗುತ್ತಾರೆ. ಚೌಟಿಕೆ ಮನೆತನದವರು ಮೊದಲು ಈ ದೇವತೆಗೆ ಕುರಿ ಬಲಿ ನೀಡಿದ ನಂತರ ಎಡೆ ಹಾಕುತ್ತಾರೆ. ಈ ಸಂದರ್ಭದಲ್ಲಿ ಮೊದಲ ಪೂಜೆ ಬೇಡ ಸಮಾಜದವರದು. ನಂತರದ ಪೂಜೆ ಉಪ್ಪಾರ ಸಮುದಾಯದವರದು ಹಾಗೆಯೇ ಮಡಿವಾಳ, ಕುರುಬರು, ವಿಶ್ವಕರ್ಮ ಇತ್ಯಾದಿ ಸಮುದಾಯದವರು ಮಡಿ ಮೈಲಿಗೆಯಿಂದ ಈ ದೇವತೆಯ ಜಾತ್ರೆಯನ್ನು ಮಾಡುತ್ತಾರೆ. ಜಾತ್ರೆಗಿಂತ ಮೊದಲು ತಮ್ಮ ತಮ್ಮ ಮನೆಗಳಿಗೆ ಸುಣ್ಣ ಬಣ್ಣವನ್ನು ಬಳಿಯುತ್ತಾರೆ. ಬಾಗಿಲಿಗೆ ತಳಿರು ತೋರಣಗಳನ್ನು ಕಟ್ಟುತ್ತಾರೆ. ಗೋಮೂತ್ರದಿಂದ ಮನೆಗಳನ್ನು ಶುದ್ಧ ಮಾಡುತ್ತಾರೆ. ಯಾವುದೇ ಕಾರಣಕ್ಕೂ ಈ ದೇವಿಯ ಜಾತ್ರೆಗಿಂತ ಮೊದಲು ಮಾಂಸಾಹಾರವನ್ನು ಸೇವಿಸುವುದಿಲ್ಲ. ಭಯ ಭಕ್ತಿಯಿಂದ ಉಗ್ರ ದೇವತೆಯಾದ ಶ್ರೀ ಕೋಟೆ ಮಾರಿಕಾಂಬೆ ಜಾತ್ರೆಯನ್ನು ಮಾಡುತ್ತಾರೆ.

**ದುರುಗಮ್ಮನ ಜಾತ್ರೆ**

ಉಗ್ರ ದೇವತೆಯಾದ ಶ್ರೀ ದುರುಗಮ್ಮನ ಜಾತ್ರೆಯನ್ನು ಪ್ರತಿ ವರ್ಷ ಶಿವಮೊಗ್ಗದ ಬೇಡ ನಾಯಕರು ಶ್ರದ್ಧೆ ಭಕ್ತಿಯಿಂದ ಮಾಡುತ್ತಾರೆ. ಶಿವಮೊಗ್ಗ ವಿದ್ಯಾನಗರದ ದುರುಗಮ್ಮನ ಕೇರಿಯಲ್ಲಿ ಜಾತ್ರೆ ನಡೆಯುತ್ತದೆ. ಹಿಂದೂ ಭಕ್ತಾಧಿಗಳು ಕುರಿ ಕೋಳಿಗಳನ್ನು ಬಲಿಕೊಟ್ಟು ಈ ದೇವತೆಗೆ ಹೆಡೆ ಹಾಕುತ್ತಾರೆ. ಈ ದೇವಿಯ ಜಾತ್ರೆಯಲ್ಲಿ ಕೂಡ ಬೇಡರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುತ್ತಾರೆ. ಪೂಜೆ ಪುನಸ್ಕಾರಗಳನ್ನು ಹಬ್ಬದ ದಿನದಂದು ರಾತ್ರಿಯಿಂದ ಬೆಳತನಕ ಆಚರಿಸುತ್ತಾರೆ. ಡೊಳ್ಳು ಕುಣಿತ, ಕೋಲಾಟ ಮತ್ತು ಭಜನೆ ಇತ್ಯಾದಿ ಕಲೆಗಳು ಜಾತ್ರೆಗೆ ವಿಶೇಷ ಮೆರಗನ್ನು ನೀಡುತ್ತವೆ. ಈ ದೇವಿಯು ಉಗ್ರ ದೇವತೆಯಾಗಿರುವುದರಿಂದ ಶಕ್ತಿ ದೇವತೆಯಾಗಿರುವುದರಿಂದ ಮಡಿ ಮೈಲಿಗೆಯಿಂದ ಜಾತ್ರೆಯನ್ನು ಮಾಡುತ್ತಾರೆ.

**ಸುಂಕಲ್ಲಮ್ಮನ ಜಾತ್ರೆ**

ಶಿವಮೊಗ್ಗದಿಂದ ಹತ್ತಿರವಿರುವ ಗ್ರಾಮವೆಂದರೆ ನವಿನೆಲಹಳ್ಳಿ ಈ ನವಿನೆಲ್ಲಳ್ಳಿಯ ಅಧಿದೇವತೆಯೇ ಸುಂಕಲ್ಲಮ್ಮ ದೇವಿ. ಈ ದೇವಿಯ ಪೂಜಾರಿ ಮನೆತನದವರು ಬೇಡ ಜನಾಂಗದವರು. ಈ ಗ್ರಾಮದಲ್ಲಿ ಬೇಡರ ಸುಮಾರು ೧೦೦ ಮನೆಗಳಿವೆ. ಸುಂಕಲ್ಲಮ್ಮನ ಜಾತ್ರೆ ನಡೆಯುವುದು ಗ್ರಾಮದ ಮುಖಂಡರ ಪಂಚಾಯಿತಿಯ ಪ್ರಕಾರ ಮಂಗಳವಾರದ ದಿನದಂದು ಹೆಣ್ಣು ದೇವರಿಗೆ ಸೂಕ್ತವಾದ ದಿನವೆಂದರೆ ಮಂಗಳವಾರ ಜಾತ್ರೆಗಿಂತ ಒಂದು ತಿಂಗಳ ಮುಂಚೆ ಗ್ರಾಮದಲ್ಲಿ ಪಂಚಾಯಿತಿ ನಡೆಯುತ್ತದೆ. ನಾಯಕರು, ಕುರುಬರು, ವಡ್ಡರು ಹಾಗೂ ಇನ್ನಿತರ ಸಮುದಾಯದವರು ಸೇರಿ ಪಂಚಾಯಿತಿ ಮಾಡಿ ಮಂಗಳವಾರದಿಂದ ಜಾತ್ರೆ ಮಾಡಲು ನಿರ್ಧರಿಸುತ್ತಾರೆ. ಒಂದೊಂದು ಮನೆಗೆ ಇಂತಿಷ್ಟು ಹಣವೆಂದು ಸಂಗ್ರಹ ಮಾಡುತ್ತಾರೆ. ಉದಾಹರಣೆಗೆ ಎತ್ತು ಬಂಡಿ ಇದ್ದವರು ರೂ. ೨೦೦ ಕೂಲಿ ಮಾಡುವವರು ರೂ. ೧೦೦ ಕಡುಬಡವರು ದೀನ ದಲಿತರು ೫೦ ರೂಪಾಯಿಯಂತೆ ಹಣ ಸಂಗ್ರಹಣೆ ನಡೆಯುತ್ತದೆ. ಪಂಚಾಯಿತಿ ದೈವದ ಮೂಲಕ ೫ ಜನ

ಮುಖಂಡರು ಈ ಜಾತ್ರೆ ಖರ್ಚು ವೆಚ್ಚಗಳನ್ನು ನೋಡಿಕೊಳ್ಳುತ್ತಾರೆ. ಈ ಗ್ರಾಮದ ಪ್ರಮುಖವಾದ ಬೆಳೆಯೆಂದರೆ ಭತ್ತ. ಹರಕೆ ಹೊತ್ತವರು ಒಂದು ಸಕ್ಕರೆ ಚೀಲದ ತುಂಬ ಭತ್ತವನ್ನು ಕೊಡುತ್ತಾರೆ. ಸುಂಕಲ್ಲಮ್ಮ, ಗಾಳಿ ದೇವತೆ, ಶಕ್ತಿ ದೇವತೆ ಉಗ್ರ ದೇವತೆ ಎಂಬ ಭಯ ಗ್ರಾಮಸ್ಥರಲ್ಲಿ ಇದೆ. ಮಕ್ಕಳಿಗೆ ರೋಗ ಬಂದಾಗ, ಗಾಳಿ ಸೋಂಕು ತಾಗಿದಾಗ, ಮಕ್ಕಳಿಗೆ ಅಮ್ಮ ಕಾಣಿಸಿಕೊಂಡಾಗ (ಸಿಡಿ ಅಮ್ಮ) ಈ ದೇವತೆಯ ಮೊರೆ ಹೋಗುತ್ತಾರೆ. ಭೂತ ಪ್ರೇತವಿದೆ ಎಂದು ನಂಬಿದವರು ಈ ದೇವಿಯ ಗುಡಿಯಲ್ಲಿ ಒಂದು ದಿನದ ರಾತ್ರಿಯನ್ನು ಕಳೆಯುತ್ತಾರೆ. ಗ್ರಾಮಕ್ಕೆ ಏನಾದರೂ ಕಂಟಕ ಬಂದರೆ, ಮಳೆಯಾಗದಿದ್ದರೆ, ಬೆಳೆ ಬಾರದಿದ್ದರೆ ಈ ದೇವಿಯ ಮೊರೆ ಹೋಗುತ್ತಾರೆ. ಏಕೆಂದರೆ ಈ ಗ್ರಾಮದಲ್ಲಿರುವ ಇವರೆಲ್ಲರೂ ರೈತ ಕುಟುಂಬದವರಾಗಿದ್ದಾರೆ. ಈ ದೇವಿಯ ಜಾತ್ರೆಯ ದಿನದಂದು ಕುರಿ ಬಲಿಯನ್ನು ಕೊಟ್ಟು ಎಡೆಯನ್ನು ಹಾಕುತ್ತಾರೆ. ಈ ದೇವಿಯ ಜಾತ್ರೆಯ ದಿನ ಬೀಗರು, ಬಿಜ್ಜರು, ಪರ ಊರಿನವರು ಸುತ್ತ ಮುತ್ತಲಿನಗ್ರಾಮದ ಜನರು ಬಂದು ದೇವಿಯ ದರ್ಶನ ಪಡೆಯುತ್ತಾರೆ. ರಾತ್ರಿಯಿಂದ ಬೆಳತನಕ ಈ ದೇವಿಯ ಜಾತ್ರೆ ನಡೆಯುತ್ತದೆ. ಡೊಳ್ಳು ಕುಣಿತ, ಕೋಲಾಟ ಮತ್ತು ಭಜನೆ ಇನ್ನಿತರ ಕಲಾ ವಾದ್ಯಗಳು ರಾತ್ರಿಯಿಂದ ಬೆಳತನಕ ಗ್ರಾಮದ ಜನರಿಗೆ ಹರ್ಷವನ್ನುಂಟು ಮಾಡುತ್ತವೆ.

**ಸಿಗಂದೂರು ಚೌಡೇಶ್ವರಿ ಜಾತ್ರೆ**

ಯಾ ದೇವೀ ಸರ್ವಭೂತೇಸು ಶಕ್ತಿರೂಪೇಣ ಸಂಸ್ಥಿತಾ।
ನಮಸ್ತಸ್ಯೈ, ನಮಸ್ತಸ್ಯೈ, ನಮಸ್ತಸ್ಯೈ, ನಮೋ ನಮಃ॥

ಈ ಜಗತ್ತಿನಲ್ಲಿ ಭಗವತಿಯ ಕೃಪೆಯಿಲ್ಲದಿದ್ದರೆ ಜೀವನವು ದುಸ್ಸಾಧ್ಯ. ಅವಳು ನಾನಾ ರೂಪಗಳಿಂದ, ನಾನಾ ಗುಣಗಳಿಂದ, ನಾನಾ ಶಕ್ತಿಗಳಿಂದ ಈ ಜಗದಲ್ಲಿ ತುಂಬಿಕೊಂಡು ತನ್ನ ಮಾಯೆಯಿಂದ ಈ ಜಗವನ್ನು ತುಂಬಿ ಲೀಲಾಮಯಳಾಗಿ ವಿಹರಿಸುತ್ತಾಳೆ. ನಾನು ಈ ಜಗತ್ತಿನಲ್ಲಿರುವ ವ್ಯಕ್ತಿಗಳಿಗೆ ಶಕ್ತಿಹೀನ ಎನ್ನುತ್ತೇವೆ. ರುದ್ರಹೀನವೆನ್ನುವುದಿಲ್ಲ. ಶ್ರೀ ಹೀನ ಎನ್ನುತ್ತೇವೆ. ವಿಷ್ಣು ಹೀನನೆನ್ನುವುದಿಲ್ಲ. ಅದರಂತೆ ಬುದ್ಧಿಹೀನ, ಶ್ರದ್ಧಹೀನ, ಸ್ಮೃತಿಹೀನ ಧೃತಹೀನ, ಲಜ್ಜಾಹೀನ, ಕಾಂತಿಹೀನ, ಶಾಂತಿ ಹೀನ ಎಂದು ಮುಂತಾಗಿ ಸಂಭೋಧಿಸುತ್ತೇವೆ. ಇದೆಲ್ಲಾ ಭಗವತಿಯ ಆಯಾ ಅಂಶಗಳು ಆಯಾ ವ್ಯಕ್ತಿಗಳಲ್ಲಿ ಹೀನವಾಗಿರುವುದೇ ಕಾರಣ. ಆದ್ದರಿಂದಲೇ ಭಗವತಿಯು ಸ್ವತಃ ಈ ರೀತಿ ಹೇಳುತ್ತಾಳೆ. ಬುದ್ಧಿ, ಶ್ರೀ, ಧೃತಿ, ಕೀರ್ತಿ, ಸ್ಮೃತಿ, ಶ್ರದ್ಧಾ, ಮೇಧಾ, ದಯಾ,ಲಜ್ಜಾ, ಕ್ಷುದಾ, ತೃಷ್ಣಾ, ಕ್ಷಮಾ, ಕಾಂತಿ, ಶಾಂತಿ, ಪಿಪಾಸಾ, ನಿದ್ರಾ, ತಂದ್ರಾ, ಜರಾ, ಅಜರಾ, ವಿದ್ಯಾ, ಸ್ಪೃಹಿ, ವಾಂಛೆ, ಶಕ್ತಿ, ಅಶಕ್ತಿ, ನೆಣ, ಮಜ್ಜಾ, ತ್ವಚೆ, ದೃಷ್ಟಿ, ಮಿಥ್ಯೆ ಮತ್ತು ಸತ್ಯ, ಪರಾ, ಮಧ್ಯಮಾ ಮತ್ತು ಪಶ್ಯಂತಿ ಮುಂತಾದ ವಾಣಿ, ಅನೇಕ ಪ್ರಕಾರವಾದ ನಾಡಿಗಳು ಎಲ್ಲವೂ ನಾನೇ ಆಗಿರುತ್ತೇನೆ. ನಾನು ಯಾವುದಿಲ್ಲ? ಮನು, ದೇವತಾ, ಮನುಪುತ್ರ, ಇಂದ್ರ, ಸಪ್ತರ್ಷಿ ಮತ್ತು ಆ ಭಗವಂತನ ಈ ಆರು ವಿಶೇಷಗಳಿಂದ ಕೂಡಿದ ಮನ್ವಂತರದಲ್ಲಿ ನನ್ನ ಹೊರತು ಏನೂ ಇರುವುದಿಲ್ಲ. ಸಕಲವೂ ನಾನೇ

ಎಂದು. ಅಂದಾಗ ದೇವ-ಯಾ ದೇವಿ ಒಂದೇ ನಾಮ ಮಾತ್ರ ಹಲವು. ಓಂ ಕಾರ್ಕ (ಪ್ರಣವ) ಯಾವ ಸಮಷ್ಠಿಯನ್ನು ಸೂಚಿಸುತ್ತದೋ. ಆ ಸಮಷ್ಠಿಯೇ ಬ್ರಾಹ್ಮಿ. ಬ್ರಾಹ್ಮಿ ಶಕ್ತಿಯಿಂದ ವಿಶ್ವ ಹೊರ ಹೊಮ್ಮಿದರೆ, ವೈಷ್ಣವಿ ಶಕ್ತಿ ಅದಕ್ಕೆ ನಿರ್ದಿಷ್ಟ ರೂಪ ಕೊಡುವುದು. ಈ ಸುಂದರ ವಿಶ್ವದ ಸಾಮ್ಯ, ಸಂಘಟನೆ, ನಿಯಮ ಬದ್ಧತೆ, ಎಲ್ಲವೂ ವೈಷ್ಣವಿ ಶಕ್ತಿಯ ಕುಶಲ ಕೈಚಳಕ. ಸೃಷ್ಟಿಯಾದ ಎಲ್ಲಾ ಜೀವಿಗಳಿಗೂ ತಮ್ಮದೇ ಆದ ವ್ಯಕ್ತಿತ್ವವನ್ನು ಕೊಡುವವಳು ಮಾಹೇಶ್ವರಿ. ಅವಳೇ ಸಕಲ ಜೀವಿಗಳ ಹೃನ್ಮನ ವಾಸಿನಿ. ಜೀವ ಯಂತ್ರಗಳ ಚಾಲಕಿ. ಜಗನ್ನಾಟಕ ಸೂತ್ರಧಾರಿಣಿ. ದೇವಿಯೇ ವಿರಾಟ್ ಶಕ್ತಿಸ್ವರೂಪಳು. ಅವಳಿಂದಲೇ ಈ ವಿಶ್ವವು ಹೊರಹೊಮ್ಮಿದೆ. ಅವಳಿಂದಲೇ ಶಕ್ತಿ ಸಂಪನ್ನವಾಗಿದೆ. ಈ ಜಗತ್ತು, ಅಖಿಲ ಸಿರಿಸಂಪನ್ನಗಳ, ತೇಜಸ್ಸಿನ, ಅಧಿಕಾರದ ರೂಪರಾಶಿಯ ಹಾಗೂ ಸಕಲ ಸದ್ಗುಣಗಳ ಅಧಿದೇವತೆ ದೇವಿ. ಅವಳೇ ಯಜ್ಞ ಸ್ವರೂಪಳು. ಅವಳೇ ಪರ ವಿದ್ಯಾ ಮತ್ತು ಅಪರಾ ವಿದ್ಯೆ ದೇವಿಯೇ ಲೌಕಿಕ ಹಾಗೂ ಆಧ್ಯಾತ್ಮಿಕ ಸಂಪತ್ತನ್ನು ನೀಡುವವಳು. ಅವಳೇ ಕಷ್ಟಹಾರಿಣಿ ದುಷ್ಟ ಸಂಹಾರಿಣಿ. ಪರತತ್ವದ, ಪರಬ್ರಹ್ಮನ, ಪರಮಾತ್ಮನ ವಿಚಾರವಾಗಿ ಉಪದೇಶ ಮಾಡುವ ದೇವಿ ಪುರಾಣಗಳ ಅನುಸಾರ, ದಕ್ಷ ಪ್ರಜಾಪತಿಯ ಮಗಳಾಗಿ ದ್ರಾಕ್ಷಾಯಿಣಿ. ದಕ್ಷನ ಉಪೇಕ್ಷೆಯಿಂದ, ಶಿವನಿಂದಯಿಂದ, ಕುಪಿತವಾಗಿ ಯೋಗಾಗ್ನಿಯಿಂದ ತನ್ನನ್ನು ತಾನೇ ದಹಿಸಿಕೊಂಡ ಸತಿ ಅಂದರೆ ಪರಿಶುದ್ಧಳು. ಮತ್ತೆ ದೇವಿಯ ಪುನರ್ಜನ್ಮ. ಹಿಮವಂತನ ಮಗಳಾಗಿ ಪಾರ್ವತಿ, ಶಿವನನ್ನು ವಲಿಸಿಕೊಳ್ಳಲು ಅತ್ಯುಗ್ರ ತಪಸ್ಸಿನಲ್ಲಿರುವಾಗ ಅಪರ್ಣ ತಾಯಿ ಮೇನಾದೇವಿ ಸೊರಗುತ್ತಿರುವ ಮಗಳನ್ನು ಲಾಡ್-ಮಾ (ಈ ರೀತಿ ಮಾಡಬೇಡ) ಉಮಾ, ಶುಭ್ರ ಧವಳ ಹಿಮವಂತನ ಮಗಳಾದುದರಿಂದ ಗೌರಿ. ಇಡೀ ವಿಶ್ವಕ್ಕೆ ಮಾತೆಯಾದುದರಿಂದ ಅಂಬಾ-ಅಂಬಿಕಾ. ಚಂಡ-ಮುಂಡರನ್ನು ಸಂಹರಿಸಿ ಚಾಮುಂಡಿ. ಹೀಗೆ ಬ್ರಹ್ಮಾಣಿ, ಮಾಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ನಾರಸಿಂಹಿ, ಇಂದ್ರಾಣಿ, ದುರ್ಗಾ ಕೌಶಿಕೀ ದುರ್ಗ, ವಿಂಧ್ಯಾವಾಸಿನಿ, ರಕ್ತದಂತಿಕಾ, ಶತಾಕ್ಷಿ, ಶಾಕಂಬರಿ, ಭೀಮಾ, ಭ್ರಮರಾಂಬ, ಮಹಾಲಕ್ಷ್ಮಿ, ಮಹಾ ಸರಸ್ವತಿ, ಲಲಿತಾ ತ್ರಿಪುರಸುಂದರಿ, ಅನ್ನಪೂರ್ಣ, ಅಪರಾಜಿತಾ, ಬಾಲ, ಭದ್ರಕಾಳಿ, ಭೂತ ಮಾತಾ, ಗಾಯಿತ್ರಿ, ಸಾವಿತ್ರಿ, ಇಂದ್ರಾಕ್ಷಿ, ಕಾಮೇಶ್ವರಿ, ಕಾತ್ಯಾಯಿನಿ, ಮನೋನ್ಮನಿ, ರಾಜರಾಜೇಶ್ವರಿ, ಶಿವದೂತಿ, ತಾರಾ, ಷೋಡಶಿ, ಭುವನೇಶ್ವರಿ, ಭೈರವಿ, ಧೂಮವತಿ, ಬಗಲಾ, ಮಾತಂಗಿ, ಕಮಲ ಮುಂತಾದ ಹಲವು ಹೆಸರುಗಳಿಂದ ಕರೆಯಲ್ಪಟ್ಟರು ಆಕೆ ಒಬ್ಬಳೇ ಶಕ್ತಿ ಮಾತೆ. ಭಾಗ್ಯ ದೇವತೆ, ಏಕಪರಾಶಕ್ತಿ. ಹಿಂದು ಧರ್ಮ ಅನುಯಾಯಿಗಳು ಆಯಾಯ ಊರ ಹೆಸರಿನೊಂದಿಗೆ ದೇವರ ಹೆಸರನ್ನು ಸಾಂಕೇತಿಕವಾಗಿ ಹೆಸರಿಸುವುದು ಸರ್ವೆ ಸಾಮಾನ್ಯ. ಉದಾಹರಣೆಯಾಗಿ ಧರ್ಮ ನೆಲೆನಿಂತ ಸ್ಥಳ ಧರ್ಮಸ್ಥಳ. ರಾವಣ ಆತ್ಮಲಿಂಗವನ್ನು ಕೀಳಲು ಯತ್ನಿಸಿದಾಗ ಸಿಡಿದೊಂದು ಚೂರು ಗೋವಿನ ಕಿವಿಯಾಕಾರದಲ್ಲಿದ್ದರಿಂದ ಗೋಕರ್ಣ ಬಲ ಹಾಕಿ ತಿರುಚಿದಾಗ ಮುರುಟಿ ಸಿಡಿದ ಚೂರು ಮುರಡೇಶ್ವರ, ಹೊರನಾಡಿನಿಂದ ಬಂದ

ಭಕ್ತರಿಗೆ ಸದಾ ಅನ್ನ ನೀಡುವ ಅನ್ನಪೂರ್ಣೇಶ್ವರಿ, ಮಂಗಳದೇವಿಯ ಕೃಪ ಕಟಾಕ್ಷೆಯನ್ನು ಹೊಂದಿದ ಮಂಗಳಪುರ. ಬನಸಿರಿಯ ನಡುವಲ್ಲಿ ರಾರಾಜಿಸಿದ ಬನಶಂಕರಿ, ಕೋಲ ಮಹಾಋಷಿಯು ದೇವಿಯ ಆರಾಧಕನಾದ ಊರು ಕೊಲ್ಲೂರು, ಕಮ್ಮಾಸುರನ ತಪಚ್ಚರ್ಯದ ಫಲ ನಿಶ್ಕ್ರಿಯವಾಗಲು ವಾಗ್ದೇವಿಯಾಗಿ ಆತನ ನಾಲಿಗೆಯಲ್ಲಿ ನೆಲಸಿ ಮಾತಿಲ್ಲದ ಮೂಕನಂತೆ ಮಾಡಿದುದರಿಂದ ಕೊಲ್ಲೂರ ಮೂಕಾಬಿಂಕೆ ಅಂತೆಯೇ ಸದಾ ನಂಬಿದವರಿಗೆ ಇಂಬುಕೊಟ್ಟು ಸಂರಕ್ಷಿಸಲು ನೆಲೆ ನಿಂತ ಸಿಗಂಧೂರಿನಲ್ಲಿ ಸಿಗಂಧೂರೇಶ್ವರಿ. ಆಕೆಯೇ ಚೌಡಮ್ಮ-ಚೌಡೇಶ್ವರಿ.

**ಸಿಗಂಧೂರು ಚೌಡೇಶ್ವರಿ ಜಾತ್ರೆ**

ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನಿಂದ ೩೫ ಕಿ.ಮೀ. ದೂರದಲ್ಲಿ ಲೋಕ ಕಲ್ಯಾಣಮಾತೆ ಸಿಗಂಧೂರು ಚೌಡೇಶ್ವರಿ ದೇವಿಯ ದೇವಾಸ್ಥನವಿದೆ. ಈ ಕ್ಷೇತ್ರಕ್ಕೆ ಸಿಗಂಧೂರು ಎಂದು ಕರೆಯುತ್ತಾರೆ. ಈ ದೇವಸ್ಥಾನಕ್ಕೆ ಹೋಗಬೇಕೆಂದರೆ ಶರಾವತಿ ನದಿ ಹಿನ್ನೀರು ದಾಟಲು ಲಾಂಚ್ ಸಿಗಂಧೂರಿನಿಂದ ಸಾಗರ ಕಡೆಗೆ ಸೌಲಭ್ಯವಿದೆ. ಲಾಂಚ್ ಸುಮಾರು ೨ ಕಿ. ಮೀ. ದೂರ ಶರಾವತಿ ಹಿನ್ನೀರು ದಾಟಬೇಕು. ಯಾವುದೇ ಸೇತುವೆ ಇಲ್ಲದೇ ಇರುವುದರಿಂದ ಲಾಂಚ್ ಸೇವೆಯನ್ನು ಕಲ್ಪಸಲಾಗಿದೆ. ಈ ದೇವಿಯ ಜಾತ್ರೆ ಪ್ರತಿವರ್ಷ ಮಕರ ಸಂಕ್ರಾತಿಯೆಂದು ಸಿಗಂಧೂರಿನಲ್ಲಿ ನಡೆಯುತ್ತದೆ. ಸಿಗಂಧೂರು ಚೌಡೇಶ್ವರಿ ಕ್ಷೇತ್ರಕ್ಕೆ ೩೦೦ ವರ್ಷಗಳ ಇತಿಹಾಸವಿದೆ. ಈ ದೇವಿ ಜಾತ್ರೆಗೆ ಶಿವಮೊಗ್ಗ ಜಿಲ್ಲೆಯ ಸಾಗರ, ಶಿಕಾರಿಪುರ, ತೀರ್ಥಹಳ್ಳಿ, ಹೊಸನಗರ, ಸೊರಬ, ಶಿವಮೊಗ್ಗ ಮತ್ತು ಭದ್ರಾವತಿ ಈ ಎಲ್ಲಾ ತಾಲೂಕುಗಳ ಹಳ್ಳಿ ಅಥವಾ ಗ್ರಾಮಗಳಿಂದ ಸಾವಿರಾರು ಭಕ್ತರು ಪಾಲ್ಗೊಳ್ಳುತ್ತಾರೆ. ಮಡಿ ಮೈಲಿಗೆಯಿಂದ ಈ ದೇವಿಯ ಜಾತ್ರೆಯಲ್ಲಿ ಪಾಲ್ಗೊಳ್ಳುವುದುಂಟು ಉಗ್ರದೇವತೆ ಮತ್ತು ಶಕ್ತಿ ದೇವತೆಯಾಗಿರುವುದರಿಂದ ಭಯ ಭಕ್ತಿಯಿಂದ ಪಾಲ್ಗೊಗ್ಳುತ್ತಾರೆ. ತಮ್ಮ ತಮ್ಮಲ್ಲಿರುವ ಕಷ್ಟ ಕಾರ್ಪಣ್ಯಗಳನ್ನು ದುಃಖ ದುಮ್ಮಾನಗಳನ್ನು ರೋಗ ರುಜಿನಿಗಳನ್ನು, ಬಾಧೆಗಳನ್ನು ಇನ್ನಿತರ ಎಲ್ಲಾ ಸಮಸ್ಯೆಗಳನ್ನು ಈ ದೇವಿ ಪಾರು ಮಾಡುತ್ತಾಳೆ ಎಂಬ ಅಚಲ ನಂಬಿಕೆಯಿಂದ ಈ ಜಾತ್ರೆಯಲ್ಲಿ ಭಕ್ತರು ಪಾಲ್ಗೊಳ್ಳುವುದುಂಟು. ಇಷ್ಟೇ ಅಲ್ಲಾ ಸಿಗಂಧೂರು ಚೌಡೇಶ್ವರಿ ಜಾತ್ರೆಗೆ ಕರ್ನಾಟಕದ ಮೂಲೆ ಮೂಲೆಗಳಿಂದ ದೇವಿಯ ಜಾತ್ರೆಯಲ್ಲಿ ಪಾಲ್ಗೊಳ್ಳುವುದುಂಟು. ಪ್ರತಿ ಅಮಾವಾಸ್ಯೆ ಮತ್ತು ಹುಣ್ಣುಮೆ ದಿನಗಳಂದು ವಿಶೇಷ ಅಲಂಕಾರ, ಪೂಜೆ ಪುನಸ್ಕಾರಗಳು ನಡೆಯುದುಂಟು. ಪಂಚಾಮೃತ ಪೂಜೆ, ಮಹಾಭಿಷೇಕ, ಮಹಾ ಪೂಜೆ, ಶ್ರೀದೇವಿ ಸೂಕ್ತ ಪರಾಯಣ, ಹರಿಕೆ ಪೂಜೆ, ದೇವಿ ಪ್ರಾರ್ಥನೆ, ಚಂಡಿ ಹೋಮ, ಮಂಗಳಾರತಿ, ಅಷ್ಟೋತ್ತರ, ಕುಂಕುಮಾರ್ಚನೆ ಇನ್ನಿತರ ಪೂಜಾ ವಿಧಾನಗಳಲ್ಲಿ ಭಕ್ತರು ತಮಗೆ ಇಷ್ಟವಾದ ಪೂಜಾಕೈಂಕರ್ಯಗಳಲ್ಲಿ ತೊಡಗುವುಂಟು. ಸೂರ್ಯಕಿರಣ ನೀರ ಮೇಲೆ ಚೆಲ್ಲಿ ಬೆಳ್ಳಿ ಬೆಳಕ ಹೊಳಪು ನಮ್ಮ ಬಾಳಿನ ಕತ್ತಲೆ ಕಳೆದು ಬೆಳಕು ನೀಡುವುದು ಎಂಬ ಭಾವನಾ ಪ್ರಪಂಚದಲ್ಲಿ ತೇಲಾಡಿಸುವುದು. ಆ ಎಲ್ಲಾ ಸದ್ಭಾವನೆ ನಮ್ಮಲ್ಲಿ ಮೂಡಿಸಿ ಮುಂದಡಿ ಇಟ್ಟೊಡನೆ ಕೈಬೀಸಿ ಕರೆಯುವವಳು ಮಹಾಮಾತೆ ಸಿಗಂಧೂರೇಶ್ವರಿ. ಬಾ ಕಂದ ನಿನ್ನ

ಕಷ್ಟ ಸಂಕೋಲೆಗಳೆಲ್ಲಾ ದೂರಾದವು ನನ್ನ ಕರುಣೆಯ ಕೃಪೆ ಎಂಬ ಕೃಪಾಶೀರ್ವಾದದಿಂದ ಸುತ್ತಲು ಕಾಡು ಮೇಡುಗಳಿಂದ ಆವೃತವಾಗಿರುವ ಸಿಗಂಧೂರು ಸಣ್ಣ ಊರು. ಯಾವ ಗಲಾಟೆ-ಗದ್ದಲವಿಲ್ಲದ ಪ್ರಶಾಂತ ಊರು ನೆಮ್ಮದಿಯ ತವರೂರು. ಕಾಲಾಟ ಮೇಲಾಟ, ಕೂಗಾಟ ತಿಕ್ಕಾಟಗಳ ತಬ್ಬಿಬ್ಬಿನ ತೊಳಲಾಟವಿಲ್ಲದ ಪ್ರಸನ್ನವದನದ ತಾಯಿ ಸಿಗಂಧೂರೇಶ್ವರಿ. ಗಿಡ ಮರ ಬಳ್ಳಿ ತರುಲತೆಗಳು ಫಲ ಪುಷ್ಪಭರಿತವಾಗಿ ಅಲ್ಲಲ್ಲಿ ಕಾಣುವ ವನಾಂಗಣ ನಾಲ್ಕು ದಿಕ್ಕಿನಿಂದ ಅಮ್ಮ ಎಂದು ಕರೆದೊಡನೆ ಮಾರ್ಧನೆಗೊಳ್ಳುವ ಸ್ಥಳ ಸಿಗಂಧೂರು. ಅದೇ ಸಿಗಂಧೂರೇಶ್ವರಿಯ ಪ್ರಭಾವಿತ ಪುಣ್ಯಕ್ಷೇತ್ರ. ಇಂದು ಸಿಗಂಧೂರು ಒಂದು ಪವಿತ್ರ ಕ್ಷೇತ್ರವಾಗಿ ಬೆಳೆಯಲು ಕಾರಣ ಹೊಳೆಕೊಪ್ಪದ ಶ್ರೀ ರಾಮಪ್ಪನವರು ಜಮೀನ್ದಾರರಾಗಿದ್ದಾರೆ. ಸಂಸಾರವನ್ನು ಅಲ್ಲಿಯೇ ಬಿಟ್ಟು ಸಿಗಂಧೂರೇಶ್ವರಿಯ ಸೇವೆ ಮಾಡುತ್ತಾ ದೇವಸ್ಥಾನದ ಅಭಿವೃದ್ಧಿಗೆ ಶ್ರಮಿಸಿದ ಈಗಿನ ಧರ್ಮದರ್ಶಿ ರಾಮಪ್ಪನವರು ಪರಹಿತದೊಳೆನ್ನ ಹಿತವ ಕಂಡವ ನೀತಂ ಎಂಬ ಏಕ ಬೀಜವಾಕ್ಯ ಇವರಿಗೆ ಅನ್ವಯಿಸುತ್ತದೆ. ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯಂ, ಬಾದಿಪ್ಪ ಕಲಿಗೆ ಕಲಿಯುಗ ವಿಪರೀತನ್ ಎಂಬ ಬಾದಾಮಿ ಶಾಸನದಲ್ಲಿ ಉಲ್ಲೇಖಿಸಿದಂತೆ ರಾಮಪ್ಪನವರು ಮೊದಲು ಸಿಗಂಧೂರೇಶ್ವರಿಯ ದೇವಸ್ಥಾನ ಒಂದು ಸಾಧಾರಣದ ಗುಡಿಯಾಗಿತ್ತು ಇಂದು ದೇಗುಲದ ಎದುರಿಗೆ ವಿಶಾಲವಾದ ಅಂಗಣ ದೇವಸ್ಥಾನದ ಸುತ್ತಲು ಚಂದ್ರಶಾಲೆ ಯಾಂತ್ರಿಕರ ಊಟ ತಿಂಡಿಗಾಗಿ ಉಪಾಹಾರ ಗೃಹ ಅಲ್ಲದೇ ಬರುವ ಭಕ್ತಾಧಿಗಳ ಅನುಕೂಲಕ್ಕೆಂದು ೩೦೦-೪೦೦ ಜನರಿಗೆ ಸಾಕಗುವಷ್ಟು ಗೆಷ್ಟ್ ಹೌಸ್ ಇಷ್ಟೆಲ್ಲಾ ಸಾಧನೆಯಾಗಬೇಕಾದರೆ ಕಷ್ಟ ಸಹನೆ ಅನಿವಾರ್ಯ. ಸಾಧಕರ ಕಾರ್ಯರಂಗ ಹೂವಿನ ಹಾಸಿಗೆಯಲ್ಲಾ ಮುಳ್ಳಿನ ಹಾದಿ. ಕತ್ತಿಯ ಅಲಗೆಯ ಮೇಲೆ ನಡೆದಂತೆ. ದೀಪದ ಬತ್ತಿ ತಾನೂ ಸುಟ್ಟು ಪರರಿಗೆ ಪ್ರಕಾಶ ನೀಡಿದಂತೆ ಅವರ ಜೀವನ ದೇವಸ್ಥಾನದ ಕಟ್ಟಡ ನಿರ್ಮಾಣ ಮಾಡುವಾಗ ಪಟ್ಟ ಶ್ರಮ ಕೇಳಿದರೆ, ನೆನದರೆ ಹೃದಯ ದ್ರವಿಸುತ್ತದೆ. ಹಾಗಾ ತಮಗೆ ಬಂದ ಅಡಚಣೆ ತಮ್ಮಗೆ ಬಂದೋದಗಿದ ಕಷ್ಟಗಳನ್ನು ಶ್ರೀದೇವಿಯ ಪ್ರೇರಣೆಯಂತೆ ವಿರೋಧ ಪ್ರತಿಭಟನೆಗಳನ್ನು ದಿಟ್ಟತನದಿಂದ ಎದುರಿಸಿ ಶ್ರೀಕ್ಷೇತ್ರದ ಧರ್ಮ ಧ್ವಜವನ್ನು ಅತಿ ಎತ್ತರಕ್ಕೆ ಹಾರಾಡುವಂತೆ ಮಾಡಿದರು. ಅದಕ್ಕೆ ಮುಖ್ಯ ಕಾರಣ ರಾಮಪ್ಪನವರು ಸರಳ ಜೀವನ, ನಡೆ ನುಡಿ, ಹಿತ ಮಿತ ಆಹಾರ, ಅಂತರ್ಮುಖತ್ವ ಶ್ರೀದೇವಿಯ ಪ್ರೇರಣೆಯಾಗಿದೆ. ಸುಮಾರು ೩೦೦ ವರ್ಷಗಳ ಇತಿಹಾಸವನ್ನು ಹೊಂದಿರುವ ಸಿಗಂಧೂರು ಕ್ಷೇತ್ರದ ಶ್ರೀ ಸಿಗಂಧೂರು ಚೌಡೇಶ್ವರಿ ದೇವಸ್ಥಾನದ ಕರ್ನಾಟಕ ರಾಜ್ಯದ ಪ್ರಮುಖ ದೇವಸ್ಥಾನಗಳಲ್ಲೊಂದಾಗಿದೆ. ಪುಣ್ಯ ಕ್ಷೇತ್ರ ಎಂಬ ಖ್ಯಾತಿಯನ್ನು ಹೊಂದಿದೆ.

**ಊರಮ್ಮನ ಆರಾಧನೆ**

ಶಿವಮೊಗ್ಗದ ಗಡಿ ದೇವತೆ ಗ್ರಾಮ ದೇವತೆ ಊರಮ್ಮ. (ಆಕೆಯನ್ನು ಮಾರಮ್ಮನೆಂದು ಸಹ ಕರೆಯುತ್ತಾರೆ) ಕೆಳದಿಯ ಶಿವಪ್ಪ ನಾಯಕ ಊರಮ್ಮ ಅಥವಾ ಮಾರಮ್ಮ ದೇವಿಯ ಪೂಜೆಯನ್ನು ಮಾಡಿ ಯುದ್ಧಕ್ಕೆ ಹೋಗುತ್ತಿದ್ದನು. ಯುದ್ಧದಲ್ಲಿ ಜಯಭೇರಿ ನಂತರ ಈ ದೇವತೆಗೆ ವಿಶೇಷವಾಗಿ

ಪೂಜೆ ಮಾಡಿ ಸೈನಿಕರೊಂದಿಗೆ ಕೆಳದಿಗೆ ಹೋಗುತ್ತಿದ್ದನೆಂಬ ಐತಿಹ್ಯವಿದೆ. ಹಾಗೆಯೇ ಶಿವಮೊಗ್ಗ ನಗರದಲ್ಲಿ ಮಳೆಯಾಗದಿದ್ದಾಗ ಈ ದೇವತೆಗೆ ಡೊಳ್ಳು ವಾದ್ಯಗಳ ಸಮೇತ ಹೂವು-ಹಣ್ಣು ಕೊಡುವ ಪದ್ಧತಿ ರೂಢಿಯಲ್ಲಿದೆ. ಮಕ್ಕಳಿಗೆ ಅಮ್ಮ ಕಾಣಿಸಿಕೊಂಡಾಗ ಐದು ದಿನದ ನಂತರ ಅಮ್ಮ ಕಾಣಿಸಿಕೊಂಡ ಮಗುವನ್ನು ಕರೆದುಕೊಂಡು ಬಂದು ಈ ದೇವತೆಯ ಪೂಜೆ ಪುನಸ್ಕಾರಗಳಲ್ಲಿ ತೊಡಗುತ್ತಾರೆ. ಜೋತಿಷ್ಯರು ಶಿವಮೊಗ್ಗ ನಗರಕ್ಕೆ ಯಾವುದಾದರೂ ಗಂಡಾಂತರ ಬಂದಾಗ ಈ ದೇವಿಯ ಮೊರೆ ಹೋಗಲು ತಿಳಿಸುತ್ತಾರೆ. ಇಡೀ ಶಿವಮೊಗ್ಗ ನಗರದ ಅಧಿ ದೇವತೆಯೆಂದರೆ ಊರಮ್ಮ ದೇವತೆ. ಈಕೆಗೆ ಅಮ್ಮ ಎಂದು ಕೂಡ ಬುಡಕಟ್ಟು ಜನರು ಕರೆಯುವುದುಂಟು.

**ಚೌಡಮ್ಮನ ಆರಾಧನೆ**

ಚೌಡಮ್ಮನ ಆರಾಧನೆ ಶಿವಮೊಗ್ಗ ಮತ್ತು ಶಿವಮೊಗ್ಗ ಜಿಲ್ಲೆಯಾದ್ಯಂತ ನಡೆಯುತ್ತದೆ. ಹೊಣ್ಣೆ ಚೌಡಿ, ಮರದ ಚೌಡಿ (ಶಿಕಾರಿಪುರ ತಾಲೂಕು) ಹಲಸಿನ ಚೌಡಿ (ಶಿವಮೊಗ್ಗ) ಮೋಟಾಳ ಚೌಡಿ (ಶಿವಮೊಗ್ಗ) ಸಿಗಂಧೂರಿನ ಚೌಡೇಶ್ವರಿ (ಸಾಗರ ತಾಲೂಕು) ಈ ರೀತಿ ಚೌಡೇಶ್ವರಿ ಆರಾಧನೆ ಅತೀ ಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಶಿವಮೊಗ್ಗದಲ್ಲಿ ಮತ್ತು ಶಿವಮೊಗ್ಗ ಜಿಲ್ಲೆಯ ಗ್ರಾಮಾಂತರ ಕೆಲ ಪ್ರದೇಶಗಳಲ್ಲಿ ಚೌಡಮ್ಮ ದೇವಿಯ ದೇವಸ್ಥಾನಗಳಿವೆ. ಪ್ರತಿವರ್ಷ ಹಿಂದುಳಿದ ಜನಾಂಗದವರು ಮತ್ತು ಬುಡಕಟ್ಟು ಜನಾಂಗದವರು ಈ ದೇವಿಗೆ ಕುರಿ-ಕೋಳಿಯನ್ನು ಬಲಿ ಕೊಟ್ಟು ಈ ದೇವಿಗೆ ಎಡೆ ಹಾಕುವುದರ ಮೂಲಕ ತಮ್ಮ ಭಕ್ತಿಯನ್ನು ಸಮರ್ಪಿಸಿಕೊಳ್ಳುತ್ತಾರೆ. ಕೆಲವರು ಈ ದೇವತೆಯನ್ನು ಗಾಳಿ ದೇವತೆಯೆಂದು ಕೂಡ ಕರೆಯುತ್ತಾರೆ. ಯಾರಿಗಾದರೂ ಗಾಳಿ ಸೋಂಕು ತಗುಲಿದಾಗ ಈ ದೇವತೆಗೆ ಪ್ರತಿ ಮಂಗಳವಾರ ಐದು ವಾರಗಳವರೆಗೆ ನಡೆದುಕೊಳ್ಳುತ್ತಾರೆ. ಚೌಡಮ್ಮ, ಚಂಡಿ-ಚಾಮುಂಡಿ ಎಂಬ ಭಯ ಭಕ್ತರಲ್ಲಿದೆ. ಅಲ್ಲದೇ ಈ ದೇವತೆ ಉಗ್ರ ದೇವತೆಯೆಂಬ ಭಾವನೆ ಕೂಡ ಬುಡಕಟ್ಟು ಸಮುದಾಯಗಳಲ್ಲಿದೆ. ಈ ದೇವತೆಯ ಆರಾಧನೆ ಕುರಿತು ಮಡಿ ಮೈಲಿಗೆಯಿಂದ ಭಯ ಭಕ್ತಿಯಿಂದ ನಡೆದುಕೊಂಡು ಬಂದ ಸಂಪ್ರದಾಯವು ಕೂಡ ಬುಡಕಟ್ಟು ಜನರಲ್ಲಿದೆ.

**ಉಚ್ಚಂಗೆಮ್ಮನ ಜಾತ್ರೆ**

ಶಿವಮೊಗ್ಗ ನಗರದ ವಿದ್ಯಾನಗರದಲ್ಲಿರುವ ಉಚ್ಚಂಗೆಮ್ಮನ ಜಾತ್ರೆ ೨ ವರ್ಷಕ್ಕೊಮ್ಮೆ ಮಾರ್ಚ ತಿಂಗಳಲ್ಲಿ ವಿಜೃಂಭಣೆಯಿಂದ ನಡೆಯುತ್ತದೆ. ೩೦೦೦ ಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಬೇಡನಾಯಕರು ಈ ದೇವಿಯ ಜಾತ್ರೆಯನ್ನು ಮಾಡುತ್ತಾರೆ. ಹರಪನಹಳ್ಳಿ ಪಾಳೇಯಗಾರರ ಅವನತಿ ನಂತರ ಹರಪನಹಳ್ಳಿಯ ಬೇಡ ನಾಯಕರು ಶಿವಮೊಗ್ಗದ ವಿದ್ಯಾನಗರದಲ್ಲಿ ಬಂದು ನೆಲೆಸಿದ್ದಾರೆ. ಹಾಗಾಗಿ ಈ ದೇವತೆಯ ಜಾತ್ರೆಯನ್ನು ಮಾಡುತ್ತಿದ್ದಾರೆ. ಪೂರ್ವ ಕಾಲದಿಂದ ಈ ದೇವತೆಯ ಜಾತ್ರೆಯನ್ನು ಮಾಡುತ್ತಾ ಬಂದಿದ್ದಾರೆ. ಈ ದೇವತೆ ವಿಜಯ ದಶಮಿಯ ದಿನ ಪಲ್ಲಕ್ಕಿಯ ಮೂಲಕ ಬನ್ನಿ ಮುಡಿಯಲು ಹೋಗುತ್ತಾಳೆ. ಅಂದು ರಾತ್ರಿಯಿಂದ ಬೆಳತನಕ ಡೊಳ್ಳು ಕುಣಿತ, ಕೋಲಾಟ ಮತ್ತು ಭಜನೆ ಇತ್ಯಾದಿ ಕಲಾ ತಂಡಗಳ ಭರಾಟೆ ಜೋರಾಗಿ ಇರುತ್ತದೆ.

### ೧೭ ಕುಮಾರರಾಮನ ಹಬ್ಬ

ಕಂಪಿಲರಾಯ ಮತ್ತು ಕುಮಾರರಾಮನ ರಾಜ್ಯ ವಿಸ್ತಾರವು ಇಂದಿನ ಹಾವೇರಿ, ಶಿವಮೊಗ್ಗ, ಉತ್ತರ ಕನ್ನಡ ಜಿಲ್ಲೆಯವರೆಗೂ ವ್ಯಾಪಿಸಿತ್ತೆಂಬುದು ಚರಿತ್ರೆಯ ಮೂಲಕ ತಿಳಿದು ಬರುತ್ತದೆ. ಕುಮಾರರಾಮನು ಸತ್ತ ಸುಮಾರು ನೂರು ವರ್ಷಗಳ ಅಂತರದಲ್ಲಿಯೇ ಶಿವಮೊಗ್ಗದ ಶಿಕಾರಿಪುರ ಮುಂತಾದ ಕಡೆ ಕುಮಾರರಾಮನ ದೇವಾಲಯಗಳು ಅವನ ನೆನಪಿಗಾಗಿ ತಲೆ ಎತ್ತಿರುವುದನ್ನು ಕಾಣುತ್ತೇವೆ. ಬಹುತೇಕ ಶಿವಮೊಗ್ಗ ಜಿಲ್ಲೆಯಾದ್ಯಾಂತ ಕುಮಾರರಾಮನ ಹಬ್ಬವನ್ನು ಗಾಮದೇವರ ಹಬ್ಬ ಅಥವಾ ಗಾಮೇದೇವರ ಹಬ್ಬ ಎಂದು ಆಚರಿಸಲಾಗುತ್ತದೆ. ಇಲ್ಲಿ ಗಾಮ ಎಂಬ ಪದವು ಗ್ರಾಮವೆಂಬ ಪದದಿಂದ ಬಂದುದಾಗಿದೆ ಎಂದು ವಿದ್ವಾಂಸರು ತಿಳಿಸುತ್ತಾರೆ. ಶಿವಮೊಗ್ಗ ಜಿಲ್ಲೆಯಲ್ಲಿ ಗ್ರಾಮದ ಗಡಿಯಂಚಿಗೆ ಅಥವಾ ಗದ್ದೆಗಳ ಗಡಿಭಾಗಕ್ಕೆ ಚಿಕ್ಕಚಿಕ್ಕ ದೇವಾಲಯಗಳಲ್ಲಿ ಕುಮಾರರಾಮನನ್ನು ಪ್ರತಿಷ್ಠಾಪಿಸಿರುವುದನ್ನು ಕಾಣುತ್ತೇವೆ. ಗ್ರಾಮವನ್ನು ಕಾಯುವ ದೇವರೇ ಗಾಮ ದೇವರಾಗಿ ಮಾರ್ಪಟ್ಟಿದೆ ಎಂಬ ವಾದ ಕೇಳಿಬರುತ್ತದೆ. ಬಯಲು ಸೀಮೆಯಲ್ಲಿ ಗಾಮ ಎಂಬ ಪದಕ್ಕೆ ಪರಾಕ್ರಮಿ, ಶೂರ ಎಂಬ ಅರ್ಥಗಳು ಸಹ ಇವೆ. ಪ್ರಾಯಶಃ ಶೂರ, ವೀರ, ಪರಾಕ್ರಮಿ ಎಂಬರ್ಥದಲ್ಲಿ ಗಾಮ ಎಂಬ ಪದ ಬಳಕೆಗೊಂಡಿರುವ ಸಾಧ್ಯತೆಯೂ ಇದೆ. ರಕಾರವು ಗಕಾರವಾಗಿ ಬದಲಾವಣೆಗೊಂಡು ರಾಮ ಎಂಬುದು ಗಾಮವಾಗಿರಬಹುದು. ಶಿವಮೊಗ್ಗ ಜಿಲ್ಲೆಯಲ್ಲಿ ಗಾಮನ ಹೆಸರಿನಲ್ಲಿ ಊರುಗಳು ಇರುವುದು ಕಂಡು ಬರುತ್ತದೆ. ಉದಾಹರಣಗೆ ಹೊಸನಗರ  ತಾಲೂಕಿನಲ್ಲಿ ಗಾಮನಗದ್ದೆ ಹೆಸರಿನ ಊರೊಂದು ಕಾಡಿನ ಮಧ್ಯದಲ್ಲಿದೆ. ಈ ಗಾಮ ದೈವಕ್ಕೆ ಎಲ್ಲಾ ಜಾತಿಯವರೂ ಭಕ್ತರಾಗಿದ್ದಾರೆ. ಇದರಲ್ಲಿ ಹಿಂದೂ, ಮುಸ್ಲಿಂ ಎಂಬ ಯಾವ ಭೇದವೂ ಕಂಡು ಬರುವುದಿಲ್ಲ. ನಾಯಕ, ಕಮ್ಮಾರ, ಕುರುಬ, ದೀವರು, ಮಾದಿಗರು, ಮುಸ್ಲಿಂರು ಮತ್ತು ಇತರ ಎಲ್ಲಾ ಜಾತಿಯವರು ಈ ದೈವಕ್ಕೆ ನಡೆದುಕೊಳ್ಳುವರಾದರೂ ಹೆಚ್ಚಿನ ಪ್ರಮಾಣದಲ್ಲಿ ದೀವರು, ಕುರುಬರು, ಕಮ್ಮಾರರು, ಮಾದಿಗರು ಭಕ್ತರಾಗಿರುವುದು ಕಂಡು ಬರುತ್ತದೆ. ಶಿಕಾರಿಪುರ ತಾಲೂಕಿನಲ್ಲಿ ಗಾಮನ ಹೆಸರಿನ ಊರೊಂದಿದೆ. ಮುಂದುವರಿದು ಇದರಲ್ಲಿ ಮುಖ್ಯವಾಗಿ ಶಿವರ್ಮೊಗ್ಗ ತಾಲೂಕಿನ ಕಾಚಿಕೊಪ್ಪ, ಕೂಡಿ, ಕಲ್ಲುಕೊಪ್ಪ, ಸಂಪಿಗೆಹಳ್ಳಯರಬೀಸು, ತೀರ್ಥಹಳ್ಳಿ ತಾಲೂಕಿನ ಕೋಣಂದೂರು, ಸಾರಗನಜಿಡ್ಡು, ದೊಡ್ಡ ಮಲೆಗಳನ್ನು, ಹೊಸನಗರ ತಾಲೂಕಿನ ಗಾಮನಗದ್ದೆ, ಅಡ್ಡೇರಿ, ಕಳಸಿ, ಹೊರಬೈಲು, ಕೋಣನಜಿಡ್ಡು ಮುಂತಾದ ಗ್ರಾಮಗಳನ್ನು ಹಾಗೂ ಸಾಗರ ತಾಲೂಕಿನ ಬಸಾಪುರ, ಕುಗ್ವೆ, ಮರತ್ತೂರು, ಆಚಾಪುರ ಮುಂತಾದ ಗ್ರಾಮಗಳನ್ನು ಅವಲೋಕಿಸಲಾಗಿದೆ. ಪ್ರಸ್ತುತ ಗಾಮದೇವರ ಹಬ್ಬವನ್ನು ಶಿವಮೊಗ್ಗ ಜಿಲ್ಲೆಯ ಜನರು ಅತ್ಯಂತ ಸಡಗರ ಸಂಭ್ರಮದಿಂದ ಈ ಹಬ್ಬವನ್ನು ಆಚರಿಸುತ್ತಿದ್ದಾರೆ. ಕಾಚಿಕೊಪ್ಪದ ಗಾಮನ ಹಬ್ಬವನ್ನು ಕೂಡ ಶಿವಮೊಗ್ಗ ಜಿಲ್ಲೆಯ ಬೇಡರು ವಿಶಿಷ್ಟ ರೀತಿಯಲ್ಲಿ ಹಬ್ಬವನ್ನು ಆಚರಿಸುತ್ತಾರೆ. ಶಿವಮೊಗ್ಗ ತಾಲೂಕಿನಲ್ಲಿ ಬರುವ ಈ ಗ್ರಾಮ ತಾಲೂಕು ಕೇಂದ್ರದಿಂದ ಸುಮಾರು ೨೫ ಕಿ.ಮೀ. ದೂರದಲ್ಲಿದೆ. ಸುಮಾರು ೮೦–೯೦ ಮನೆಗಳಿಂದ ಕೂಡಿದ ಈ ಚಿಕ್ಕ ಗ್ರಾಮದ ಗದ್ದೆಗಳ

ಬದಿವಿನಲ್ಲಿ ಗಾಮದೇವರು ಮತ್ತು ಸಿದ್ಧರ ಚಿಕ್ಕ ದೇವಾಲಯಗಳು ಇವೆ. ಈ ಗಾಮನ ಹಬ್ಬವನ್ನು ಶಿವಮೊಗ್ಗ ಜಿಲ್ಲೆಯಾದ್ಯಂತ ದೀಪಾವಳಿಗಿಂತ ಒಂದು ವಾರ ಮೊದಲಿಗೆ ಪ್ರಾರಂಭಿಸಲಾಗುತ್ತದೆ. ದೀಪಾವಳಿ ಅಮವಾಸ್ಯೆಗೆ ಗಾಮನ ಹಬ್ಬದ ಆಚರಣೆ ಮಾಡುವುದು ಕೊನೆಗೊಳ್ಳುತ್ತದೆ. (ಕುಗ್ವೆ ಮತ್ತು ಮರತ್ತೂರುಗಳ ಹೊರತಾಗಿ) ಆಯಾಯ ಗ್ರಾಮದವರು ಆ ಒಂದು ವಾರದೊಳಗೆ ತಮಗೆ ಅನುಕೂಲವಾದ ಒಂದು ದಿನವನ್ನು ಹಬ್ಬ ಮಾಡಲು ಆಯ್ಕೆ ಮಾಡಿಕೊಳ್ಳುತ್ತಾರೆ. ಹಬ್ಬ ಮಾಡುವ ಪೂರ್ವದಲ್ಲಿ ಊರಿನವರೆಲ್ಲಾ ಸೇರಿ ಇಂತಹ ದಿನ ಹಬ್ಬ ಮಾಡುವುದೆಂದು ನಿರ್ಣಯಿಸಿಕೊಳ್ಳುತ್ತಾರೆ. ಸಾಮಾನ್ಯವಾಗಿ ಕಾಚಿಕೊಪ್ಪದವರು ಗಾಮನ ಹಬ್ಬವನ್ನು ಪಕ್ಕದ ಗ್ರಾಮವಾದ ತಮ್ಮಡಿ ಹಳ್ಳಿಯವರೊಂದಿಗೆ ಸೇರಿ ಆಚರಿಸುತ್ತಾರೆ. ಕಾಚಿಕೊಪ್ಪದ ಮಾದಿಗರು, ಬೇಡರು ತಮ್ಮಡಿ ಹಳ್ಳಿಯ ಕಮ್ಮಾರರು ಸೇರಿ ಹಬ್ಬವನ್ನು ಮಾಡುತ್ತಾರೆ. ದೀಪಾವಳಿಗೆ ಸರಿಯಾಗಿ ಆರು ದಿನಗಳಿಗೆ ಮೊದಲು ಈ ಎರಡು ಗ್ರಾಮಗಳು ಸೇರಿ ಪ್ರತಿ ಒಂದು ಎಕರೆಗೆ ಗದ್ದೆಗೆ ೩೦೦ ರೂಪಾಯಿ ವಂತಿಗೆ ಹಾಕುತ್ತಾರೆ. ಗದ್ದೆಗಳ ಬದುವಿಗೆ ಈ ದೇವಾಲಯ ಇರುವುದರಿಂದ ಗದ್ದೆಯನ್ನು ಕಾಡು ಪ್ರಾಣಿಗಳಿಂದ ಕಾಪಾಡುವ ಕೆಲಸವನ್ನು ಗಾಮ ದೇವರು ಮಾಡುತ್ತಾನೆ ಎಂಬ ನಂಬಿಕೆ ಇವರದು ಈ ರೀತಿ ಪ್ರತಿ ಕುಟುಂಬಕ್ಕೂ ೩೦೦ ರೂಪಾಯಿಗಳಂತೆ ಪಟ್ಟಿ ಎತ್ತಿದ ಹಣದಿಂದ ಒಂದು ಬಲಿತ ಕುರಿ, ನೂರಾ ಒಂದು ತೆಂಗಿನಕಾಯಿ, ಹೊಸದಾದ ಕರಿಕಂಬಳಿ, ಸಿದ್ದ ದೇವರಿಗೂ ಮತ್ತು ಗಾಮನಿಗೂ ನಡುವೆ ಅಡ್ಡಕ್ಕೆ ಹಿಡಿಯಲು ದೊಡ್ಡದಾದ ಅಡ್ಡ ಪಂಚೆ, ಅಕ್ಕಿ, ಬೇಳೆ, ಇತ್ಯಾದಿಗಳನ್ನು ಕೊಂಡು ತರುತ್ತಾರೆ. ಈ ಗ್ರಾಮದವರು ಗಾಮನ ಹಬ್ಬವನ್ನು ಸಾಯಂಕಾಲದ ತರುವಾಯ ಜನರು ಓಡಾಡದ ಇಳಿ ಹೊತ್ತಿನಲ್ಲಿ ಮಾಡುತ್ತಾರೆ. ಹಬ್ಬದ ದಿನ ಕಾಚಿಕೊಪ್ಪದ ಗ್ರಾಮದಲ್ಲಿ ಗರ್ಭಿಣಿ ಮಹಿಳೆಯರು, ಈಲಿಯಾದ ಆಕಳು, ನಾಯಿ, ಬೆಕ್ಕು ಯಾವುದೇ ಪ್ರಾಣಿ ಇರದಂತೆ ಗ್ರಾಮದ ಗಡಿದಾಡಿಸುತ್ತಾರೆ. ಬಸಿರಾಗಿದ್ದ ಯಾವುದೇ ಹೆಣ್ಣು ಹಬ್ಬದ ದಿನ ಆ ಊರಿನಲ್ಲಿ ಇರುವಂತಿಲ್ಲ ಅಷ್ಟೇಲ್ಲಾ ಬಲಿಷ್ಠೆಯಾದ (ಮೈಲಿಗೆಯಾದ) ಹೆಂಗಸು ಆ ಗ್ರಾಮಗಳಲ್ಲಿ ಇರದಂತೆ ಮುನ್ನಚ್ಚರಿಕೆ ವಹಿಸಿಕೊಳ್ಳಲಾಗುತ್ತದೆ. ಆಕಸ್ಮಾತು ಹೆಂಗಸು ಅಥವಾ ಪ್ರಾಣಿಗಳು ಹೆರಿಗೆಯಾಗಿ ಒಂದು ವಾರದೊಳಗಿದ್ದರೆ ಅಂತಹವರನ್ನು ಸಹ ಗ್ರಾಮದಿಂದ ಗಡಿದಾಟಿಸಿ ಗ್ರಾಮ ಶುದ್ಧಿ ಮಾಡಿಕೊಂಡ ತರುವಾಯವೇ ಹಬ್ಬದ ಆಚರಣೆ ಪ್ರಾರಂಭಗೊಳ್ಳುವುದು. ಕುಮಾರರಾಮನ ಭೀಕರತೆಯನ್ನು ನೋಡಿದರೆ ಬಸಿರು ಹೆಂಗಸು ಹೆದರುತ್ತಾಳೆ ಎಂಬ ಉದ್ದೇಶ ಇದರ ಹಿಂದಿರುವಂತೆ ಕಂಡು ಬರುತ್ತದೆ. ಜೊತೆಗೆ ಮಡಿವಂತನಾದ ಗಾಮನಿಗೆ ಮೈಲಿಗೆಯಾದಿತು ಎಂಬ ಭಯವು ಕಾರಣವಾಗಿರಬಹುದು. ಹಾಗೆಯೇ ಮುಂದುವರಿದು ಮೊದಲಿಗೆ ಕಾಡಿನಲ್ಲಿ ಬೆಳೆದ ಲೆಕ್ಕಿ ಗಿಡದ ಬರಲನ್ನು ತೆಗೆದುಕೊಂಡು ಗುಡಿ ಸುತ್ತಲು ಕಸಗೂಡಿಸಿ ಚಪ್ಪರ ಹಾಕುತ್ತಾರೆ. ತರುವಾಯ ಸೆಗಣೆಯಿಂದ ಆ ಸ್ಥಳವನ್ನು ಸಾರಿಸಲಾಗುತ್ತದೆ. ಇಷ್ಟೆಲ್ಲಾ ಸಿದ್ಧತೆಯನ್ನು ಮಾಡಿದ ನಂತರ ಸಿದ್ಧಪ್ಪ ಮತ್ತು ಗಾಮ ಎರಡು ದೇವರುಗಳ ಮುಂದೆ ಬೆಲ್ಲದ ಹಚ್ಚು ೨೧ ಅಂಗಾರದ ಹೂವು ಹೊಂಬಾಳೆ, ಕಳಸ ಎರಡು ದೊಡ್ಡ ಮಣ್ಣಿನ ಹಣತೆಗಳನ್ನು ದೇವರ ಮುಂದೆ

ಇಡುತ್ತಾರೆ. ದೇವರಿಗೆ ಪೂಜೆ ಸಲ್ಲಿಸಿ ಗಾಮನಿಗೆ ೨೧ ಕಾಯಿಗಳನ್ನು ಹಾಗೂ ಸಿದ್ಧಪ್ಪನಿಗೆ ೨೧ ಕಾಯಿಗಳನ್ನು ಹೊಡೆಯುತ್ತಾರೆ. ಉಳಿದ ಕಾಯಿಗಳನ್ನು ಭಕ್ತರು ತಮ್ಮ ಮನೆಗಳಿಗೆ ಓಯ್ಯುತ್ತಾರೆ. ಸಿದ್ಧಪ್ಪ ಮತ್ತು ಗಾಮರಿಗೆ ಮೊಸರನ್ನ ಚಿನ್ನಿಕಾಯಿ ಪಲ್ಯ ನೈವೇದ್ಯ ಮಾಡುತ್ತಾರೆ. ತರುವಾಯ ತಮ್ಮೊಂದಿಗೆ ಒಯ್ಯುವ ಕುರಿಯನ್ನು ಗಾಮನಿಗೆ ಬಲಿಕೊಡಲಾಗುತ್ತದೆ. ಗಾಮನಿಗೆ ಬಲಿಕೊಡುವ ಕುರಿಯ ರಕ್ತ ಸಿದ್ಧನಿಗೆ ಸಿಡಿಯಬಾರದು ಎಂಬ ಉದ್ದೇಶದಿಂದ ಗಾಮ ಮತ್ತು ಸಿದ್ಧರ ನಡುವೆ ಒಂದು ದೊಡ್ಡ ಅಡ್ಡ ಪಂಜೆಯನ್ನು ಹಿಡಿಯಲಾಗುತ್ತದೆ. ಇದಕ್ಕೆ ಸ್ಥಳಿಯರು ಸಿದ್ಧಪ್ಪನಿಗೆ ಕುರಿ ಬಲಿಯಾಗುವುದಿಲ್ಲ ಅದನ್ನು ಅವನು ನೋಡಬಾರದು ಎಂಬ ಕಾರಣಕ್ಕೆ ಅಡ್ಡ ಪಂಜೆಯನ್ನು ಹಿಡಿಯಲಾಗುತ್ತದೆ ಎಂದು ತಿಳಿಸುತ್ತಾರೆ. ಕುರಿ ಬಲಿಯ ತರುವಾಯ ದೇವರಿಗೆ ಬಲಿಯ ರಕ್ತದ ಅರ್ಪಣೆಯಾಗುತ್ತದೆ. ನಂತರ ಮಂಗಳಾರತಿ ಮಾಡಲಾಗುತ್ತದೆ. ಮಂಗಳಾರತಿಯ ನಂತರ ಜಾತ್ರೆಯ ಕ್ರೀಯ ವಿಧಿಗಳು ಪೂರ್ಣಗೊಳ್ಳುತ್ತವೆ. ಗಾಮನ ಪೂಜೆ ಇಡೀ ಒಂದು ರಾತ್ರಿಯಾಗುತ್ತದೆ. ಗಾಮನಿಗೆ ಕೊಟ್ಟ ಕುರಿಯನ್ನು ಅಲ್ಲಿಯೇ ಕೋಯ್ಯುದು ದೇವಸ್ಥಾನದ ಹತ್ತಿರವೇ ಭಕ್ತಾಧಿಗಳಲ್ಲಿ ಊಟ ಹಾಕಲಾಗುತ್ತಂತೆ ಇತ್ತೀಚಿಗೆ ಇದು ಬದಲಾವಣೆಗೊಂಡಿದೆ. ಬಲಿ ಕೊಟ್ಟ ಕುರಿಯ ಮಾಂಸವನ್ನು ಮುದ್ದೆ ಗಮ್ಮಾರರ ಎಲ್ಲಾ ಕುಟುಂಬಗಳು ಸಮಾನವಾಗಿ ಹಂಚಿಕೊಳ್ಳುತ್ತವೆ. ಜೊತೆಗೆ ತಳವಾರ ಚಪ್ಪರ ಹಾಕಲು ಮತ್ತು ಹಲಗೆ ಬಾರಿಸಲು ಬಂದ ಬೇಡ ಸಮುದಾಯದವರಿಗೂ ಮಧ್ಯೆ ಗಮ್ಮಾರರಿಗೂ ಸಿಕ್ಕಷ್ಟೆ ಮಾಂಸದ ಪಾಲು ಸಿಗುತ್ತದೆ. ಕಾಚಿಕೊಪ್ಪದ ನಾಯಕರಿಗೆ ಕುರಿಯ ಬದಲಾಗಿ ಇಂತಿಷ್ಟು ಅಕ್ಕಿ, ಬೇಳೆ, ಬೆಲ್ಲವನ್ನು ಕೊಡಲಾಗುತ್ತದೆ. ಅವರು ತಮ್ಮ ಮನೆಯೊಳಗೆ ಸಿಹಿ ಅಡುಗೆ ಮಾಡಿಕೊಂಡು ಊಟ ಮಾಡುತ್ತಾರೆ. ಆದರೆ ದೇವರಿಗೆ ಇರಿಸಿದ ೧೧ ಸೇರು ಅಕ್ಕಿ ಬೆಲ್ಲ, ತೆಂಗಿನಕಾಯಿ ಇತ್ಯಾದಿ ಪದಾರ್ಥಗಳು ಹಾಗೂ ಕುರಿಯ ತಲೆ ಮತ್ತು ಬಾಯೊಳಗೆ ಇರಿಸಿದ ಒಂದು ಕಾಲು ಮಾತ್ರ ಪೂಜಾರಿಗೆ ದೊರೆಯುತ್ತದೆ. ಗಾಮನ ಪೂಜಾರಿ ಮುದ್ದೆ ಗಮ್ಮಾರರ ಸಮುದಾದವರಾಗಿರುತ್ತಾರೆ. ಈ ಹಬ್ಬವನ್ನು ಇಡೀ ಒಂದು ದಿನ ರಾತ್ರಿ ಪೂರೈಸುತ್ತಾರೆ. ಗಾಮನ ಹಬ್ಬಕ್ಕೆ ನೋನಿ ಹಬ್ಬ ಎಂದು ಕರೆಯುತ್ತಾರೆ. ನೋನಿ ಎಂಬುದಕ್ಕೆ ಶುದ್ಧವಾಗಿ ಶಿಷ್ಟಚಾರದಿಂದ ಮಾಡುವ ಕ್ರೀಯೆ ಎಂಬ ಅರ್ಥವಿದೆ. ಈ ಹಬ್ಬ ಆಚರಿಸದೆ ಮಳೆ ಬೆಳೆ ಸರಿಯಾಗಿ ಬರುವುದಿಲ್ಲ ಮುಖ್ಯವಾಗಿ ಕಾಡು ಪ್ರಾಣಿಗಳ ಕಾಟದಿಂದ ಬೆಳೆ ನಾಶವಾಗುತ್ತದೆ. ಗಾಮನಿಗೆ ಹಬ್ಬ ಮಾಡಿ ಶಾಂತಿ ಮಾಡಿದರೆ ಮಾತ್ರ ತಮ್ಮ ಗದ್ದೆಗಳ ಬೆಳೆಯು ವೃದ್ಧಿಸುತ್ತವೆ. ಮತ್ತು ಬೆಳೆ ಸುರಕ್ಷಿತವಾಗಿರುತ್ತವೆ. ಎಂಬ ನಂಬಿಕೆ ಇವರಲ್ಲಿದೆ. ಒಟ್ಟಾರೆಯಾಗಿ ಗಾಮನ ಕುರಿತಾಗಿ ಹಿಂದೆ ಇದ್ದ ನಂಬಿಕೆ ಭಕ್ತಿ ಭಯಗಳು ಇತ್ತೀಚಿಗೆ ಜನರಿಂದ ಸ್ವಲ್ಪ ಸ್ವಲ್ಪ ಕಡಿಮೆಯಾಗುತ್ತಿವೆ. ಮತ್ತು ಈ ದೈವಕ್ಕೆ ಹೊಸ ರೀತಿಯ ಆಚರಣೆಗಳು, ಹೆಸರು ಪ್ರವೇಶಗೊಂಡಿರುವುದು ಕಂಡುಬರುತ್ತದೆ. ಹಾಗೆಯೇ ಶಿವಮೊಗ್ಗ ಜಿಲ್ಲೆಯ ಬೇಡರು ಕುಗ್ವೆಯ ಕುಮಾರರಾಮನ ಜಾತ್ರೆಯನ್ನು ಅತ್ಯಂತ ವಿಜೃಂಬಣೆಯಿಂದ ಆಚರಿಸುತ್ತಾರೆ. ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನಲ್ಲಿ ಬರುವ ಕುಗ್ವೆ ಗ್ರಾಮ ಸಾಗರದಿಂದ ಜೋಗಕ್ಕೆ

ಹೋಗುವ ರಾಷ್ಟ್ರೀಯ ಹೆದ್ದಾರಿಯಲ್ಲಿ ಬರುವ ಚಿಕ್ಕ ಗ್ರಾಮ. ಕುಗ್ವೆ ಗ್ರಾಮದ ಮಧ್ಯಭಾಗದಲ್ಲಿ ಕುಮಾರರಾಮನ ದೇವಾಲಯವಿದೆ. ದೇವಾಲಯವು ಕೆಂಪು ಹೆಂಚಿನ ಮೇಲ್ಛಾವಣೆಯನ್ನು ಹೊಂದಿದೆ. ಪೂರ್ವ ದಿಕ್ಕಿಗೆ ಮುಖ ಮಾಡಿಕೊಂಡಿರುವ ಈ ದೇವಾಲಯದ ಸುತ್ತಮುತ್ತ ಜನರ ಮನೆಗಳಿವೆ. ಈ ದೇವಾಲಯವು ಮುಖ್ಯವಾಗಿ ಎರಡು ಭಾಗಗಳಲ್ಲಿ ವಿಭಾಗಿಸಲ್ಪಟ್ಟಿದೆ. ಒಂದು ಗರ್ಭಗೃಹವಾಗಿದ್ದರೆ ಅದರ ಮುಂದಿನ ಭಾಗ ಹಜಾರವಾಗಿದೆ. ಈ ದೇವಾಲಯದ ಮುಂಭಾಗದಲ್ಲಿ ಕುಮಾರರಾಮನ ದೇವಾಲಯ ಎಂಬ ನಾಮಫಲಕವನ್ನು ನೇತು ಹಾಕಲಾಗಿದೆ. ಈ ದೇವಾಲಯದ ಗರ್ಭಗೃಹದ ಸುತ್ತಲೂ ೬ ಅಡಿ ಎತ್ತರದಲ್ಲಿ ಬೋದಿಗೆಯನ್ನು ನಿರ್ಮಿಸಲಾಗಿದೆ. ಬೋದಿಗೆಯ ಮೇಲೆ ಕುಮಾರರಾಮ ಮತ್ತು ಹೋಲಿಕೆರಾಮರ ಮುಖವಾಡಗಳನ್ನು ಇರಿಸಿದ ಕಟ್ಟಿಗೆಯ ಪೆಟ್ಟಿಗೆಯನ್ನು ಇರಿಸಲಾಗಿದೆ. ಆ ಪೆಟ್ಟಿಗೆಯ ಆಚೆ, ಈಚೆ ಒಂದೂವರೆ, ಎರಡು ಅಡಿ ಎತ್ತರದ ಕಟ್ಟಿಗೆಯಿಂದ ತಯಾರಿಸಿದ ಕುದುರೆಗಳನ್ನು ಇರಿಸಲಾಗಿದೆ. ಉತ್ತರಾಭಿಮುಖವಾಗಿ ಇರಿಸಿದ ಈ ಕುದುರೆಗಳಿಗೆ ಬಿಳಿ, ಕೆಂಪು, ಕಂದು ಬಣ್ಣಗಳನ್ನು ಹಚ್ಚಿ ಸಿಂಗರಿಸಲಾಗಿದೆ. ಬೋದಿಗೆಯ ಕೆಳಭಾಗದಲ್ಲಿ ಉತ್ತರಾಭಿಮುಖವಾಗಿ ಜಗುಲಿ ಇದ್ದುಅದರ ಮೇಲೆಯೂ ಕಟ್ಟಿಗೆಯ ಕುದುರೆ, ಮಣ್ಣಿನ ಬಿಂದಿಗೆ(ಕೇಲು), ತ್ರಿಶೂಲ ಮುಂತಾದವುಗಳನ್ನು ಇರಿಸಲಾಗಿದೆ. ಗರ್ಭಗೃಹದ ಮುಂಭಾಗ ಹಜಾರದಲ್ಲಿ ಬಂದ ಭಕ್ತರು ಕೂಡಲು ಬೆಂಚು ಹಾಕಲಾಗಿದೆ. ಗಂಟೆ ನಗಾರಿಗಳನ್ನು ಕಟ್ಟಲಾಗಿದೆ. ಈ ದೇವರಿಗೆ ಪ್ರತಿನಿತ್ಯ ಪೂಜೆ ಇಲ್ಲ. ದೀಪಾವಳಿ ಮತ್ತು ಮೇ-ಜೂನ್ ತಿಂಗಳಿನಲ್ಲಿ ಬರುವ ಗಾಮನ ಹಬ್ಬ ಈ ಎರಡು ಸಂದರ್ಭಗಳಲ್ಲಿ ಮಾತ್ರ ಮುಖವಾಡಗಳನ್ನು ಹೊರತೆಗೆಯಲಾಗುತ್ತದೆ. ಇನ್ನುಳಿದಂತೆ ಈ ರಾಮನ ಪೂಜಾರಿಯಾದ ದೀವರ ಗಾಮಪ್ಪ ಅವರು ಪ್ರತಿದಿನ ಮುಖವಾಡಗಳನ್ನು ಇರಿಸಿದ ಪೆಟ್ಟಿಗೆಗೆ ಪೂಜೆ ಸಲ್ಲಿಸುತ್ತಾರೆ. ದೇವಾಲಯದ ಗರ್ಭಗೃಹಕ್ಕೆ ಮಹಿಳೆರ ಪ್ರವೇಶ ನಿಷೇಧಿಸಲಾಗಿದೆ. ಕೆಂಪು ಮತ್ತು ಹಸಿರು ಬಣ್ಣದ ಮುಖಗಳು ಈ ಪೆಟ್ಟಿಗೆಯಲ್ಲಿರಿಸಿದೆ. ಮುಖವಾಡಗಳಿಗೆ ಅಗಲವಾದ ಕಣ್ಣು, ಚಿಕ್ಕ ಕಿರೀಟ, ಮೀಸೆ,ಹಲ್ಲುಗಳು ಅದರಲ್ಲೂ ಕೋರೆ ಹಲ್ಲುಗಳನ್ನು ಚಿತ್ರಿಸಲಾಗಿದೆ. ಉತ್ತರ ಕನ್ನಡ ಜಿಲ್ಲೆಯ ಬಹುತೇಕ ರಾಮ/ಗಾಮ ದೇವಾಲಯಗಳಲ್ಲಿ ಇದೇ ಮಾದರಿಯ ಮುಖವಾಡಗಳು ಕಂಡು ಬರುತ್ತವೆ. ಮತ್ತು ಕುಗ್ವೆಯಲ್ಲಿಯಂತೆಯೇ ಹಬ್ಬವನ್ನು ಆಚರಿಸಲಾಗುತ್ತದೆ.

ಗಾಮನ ಹಬ್ಬವನ್ನು ಆದ್ರೆ (ಆರಿದ್ರ) ಮಳೆಗೆ ಮಾಡಲಾಗುತ್ತದೆ. ಅಂದರೆ ಮಳೆಗಾಲ ಪ್ರಾರಂಭವಾಗಿ ಬಿತ್ತನೆ ಮಾಡುವ ಕಾಲಕ್ಕೆ (ಬೇಸಾಯ) ಹಬ್ಬ ಮಾಡಲಾಗುವುದು. ಸಾಮಾನ್ಯವಾಗಿ ಭಾನುವಾರ ಅಥವಾ ಸೋಮವಾರ ಹಬ್ಬವನ್ನು ಮಾಡಲಾಗುತ್ತದೆ. ಗಾಮನ ಹಬ್ಬವನ್ನು ಮೊದಲಿಗೆ ಎರಡು ದಿನ ಆಚರಿಸಲಾಗುತ್ತಿತಂತೆ. ಆರಿದ್ರ ಮಳೆ ಕೂಡುವ ದಿನ ಹಬ್ಬ ಪ್ರಾರಂಭವಾಗುತ್ತದೆ. ಮೊದಲ ದಿನ ಬಿಂಗಿ ಹಾಯುವುದು, ಶೂಲಕ್ಕೆ ಏರಿಸುವ ಕಾರ್ಯವನ್ನು ಮಾಡಿದರೆ ಎರಡನೇ ದಿನ ದೇವರನ್ನು ಮೆರವಣಿಗೆ ಮೂಲಕ ಊರಿನಿಂದ ಅರ್ಧ ಕಿ.ಮೀ. ದೂರದಲ್ಲಿರುವ ಗಡಿಕಲ್ಲುಗಳನ್ನು ತಲುಪಿ ತರುವಾಯ ಮೆರವಣಿಗೆಯನ್ನು ಗುಡಿಗೆ ತಲುಪಿಸುವುದು. ದೇವರಿಗೆ ಬಲಿ ಅರ್ಪಿಸುವುದು

ನಡೆಯುತ್ತಿತ್ತು. ಪೂರ್ವದಲ್ಲಿ ರಾಮಸ್ವಾಮಿಗೆ ೨೦೦ ರಿಂದ ೩೦೦ ಕುರಿಗಳನ್ನು ಬಲಿಕೊಡಲಾಗುತ್ತಿತ್ತಂತೆ. ಆದರೆ ಇಂದು ಈ ಮಟ್ಟದಲ್ಲಿ ಕುರಿಗಳನ್ನು ಬಲಿಕೊಡುವುದಿಲ್ಲ. ಈಗ ಹಬ್ಬವನ್ನು ಸಂಕ್ಷೇಪ್ತಗೊಳಿಸಲಾಗಿದೆ. ಎರಡು ದಿನ ಹಬ್ಬವನ್ನು ಒಂದೇ ದಿನಕ್ಕೆ ಸೀಮಿತಗೊಳಿಸಲಾಗಿದೆ. ಹಬ್ಬದ ಹಿಂದಿನ ದಿನ ಗಾಮಪ್ಪ ಪೂಜಾರಿಯು ದೇವರನ್ನು ಮತ್ತು ಊರನ್ನು ಶುದ್ಧಗೊಳಿಸುವ ಕಾರ್ಯವನ್ನು ಮಾಡುತ್ತಾರೆ. ಶುದ್ಧಗೊಳಿಸುವುದು ಎಂದರೆ, ತುಂಬಿದ ಕೊಡದ ನೀರಿಗೆ ಆಕಳ ಸೆಗಣೆಯ ಕುಳ್ಳಿನ ಭಸ್ಮವನ್ನು ಬೆರೆಸುವುದು. ಈ ನೀರಿನಿಂದದೇವರು, ದೇವರ ಸಾಮಾನುಗಳು, ದೇವಾಲಯ ಮತ್ತು ಪ್ರತಿಯೊಂದು ಕುಟುಂಬದ ಮನೆಗಳನ್ನು ಶುದ್ಧಗೊಳಿಸಲಾಗುತ್ತದೆ. ಅದರಲ್ಲಿಯೂ ದೀವರು ಕಡ್ಡಾಯವಾಗಿ ಮನೆಗಳನ್ನು ಶುದ್ಧಗೊಳಿಸಬೇಕು. ಏಕೆಂದರೆ ಇದು ದೀವರ ಅತೀ ಮುಖ್ಯ ಹಬ್ಬಗಳಲ್ಲಿ ಒಂದು. ಈ ರೀತಿ ಗ್ರಾಮದವರೆಲ್ಲಾ ಶುದ್ಧಗೊಂಡ ನಂತರ ಮಾರನೆ ದಿನ ಬೆಳಿಗ್ಗೆ ಪೂಜೆ ಅಣಿ ಮಾಡಲಾಗುತ್ತದೆ. ದೇವಾಲಯದ ಹಜಾರದಲ್ಲಿ ಕರಿ ಕಂಬಳಿಯ ಗದ್ದುಗೆ ಮಾಡಿ ಅದರ ಮೇಲೆ ಪೆಟ್ಟಿಗೆಯಲ್ಲಿಯಿರಿಸಿದ ದೇವರ ಮುಖವಾಡಗಳನ್ನು ಹೊರತೆಗೆದು ಕೂರಿಸಲಾಗುತ್ತದೆ. ಕರಿ ಕಂಬಳಿ ಮೇಲೆ ಕೂಡಿಸಿದ ದೇವರಿಗೆ ಕಂಕಣ ಕಟ್ಟಲಾಗುತ್ತದೆ. ದೇವರೊಂದಿಗೆ ಪೂಜಾರಿ ಮತ್ತು ಇತರ ನಾಲ್ಕು ಜನಕ್ಕೆ ಅಂದರೆ ಆರತಿ ಹಿಡಿಯುವವರು, ಮುಖವಾಡಗಳನ್ನು ಹೊರುವವರು, ಶೂಲಕ್ಕೇರಿಸುವವರು, ಎಲ್ಲರಿಗೂ ಕಂಕಣ ಕಟ್ಟಲಾಗುತ್ತದೆ. ಹಿಂದಿನ ಕಾಲದಲ್ಲಿ ಸಂಜೆ ಹಬ್ಬ ಪ್ರಾರಂಭಗೊಳ್ಳುತ್ತಿತ್ತು. ಪ್ರಸ್ತುತ ಒಂದೇ ದಿನಕ್ಕೆ ಹಬ್ಬವನ್ನು ಮಿತಿಗೊಳಿಸಿರುವುದರಿಂದ ಬೆಳಿಗ್ಗೆಯಿಂದಲೇ ಹಬ್ಬದ ಕ್ರಿಯವಿಧಿಗಳು ಪ್ರಾರಂಭಗೊಳ್ಳುತ್ತವೆ. ದೇವರ ಪೂಜೆಯ ನಂತರ ದೇವಾಲಯದ ಎಡ ಭಾಗಕ್ಕೆ ಕಬ್ಬಿಣದ ಉದ್ದನೆಯ ಶೂಲವನ್ನು ನೆಡಲಾಗುತ್ತದೆ. ಬಲಭಾಗಕ್ಕೆ ಬಿಂಗಿ(ಕೆಂಡ)ಯ ಕೊಂಡವನ್ನು ತೋಡಲಾಗುತ್ತದೆ. ಸಂಜೆ ನಾಲ್ಕು ಗಂಟೆ ಸುಮಾರಿಗೆ ದೇವರಿಗೆ ಪೂಜೆ ಸಲ್ಲಿಸಲಾಗುತ್ತದೆ. ದೇವರ ಪೂಜೆ ಹೊಂಬಾಳೆ ಕಡ್ಡಾಯವಾಗಿರಬೇಕು. ಪೂಜೆಯ ನಂತರ ಪೂಜಾರಿಯು ಊರಿನ ಪ್ರಮುಖರ ಪರವಾನಿಗಿಯ ಮೇರೆಗೆ ದೇವರಿಗೆ ತೆಂಗಿನಕಾಯಿಯನ್ನು ನಿವಾಳಿಸಿ ಸುಳಿಗಾಯಿ(ಸುಳಿಗಾಯಿ ಎಂದರೆ ಪೂಜಾರಿಯು ಕಾಯಿ ಹಿಡಿದ ತನ್ನ ಬಲಗೈಯನ್ನು ಮೇಲೆತ್ತಿ ತನ್ನ ಸುತ್ತ ಕೈಯನ್ನು ಒಂದು ಸುತ್ತು ಕಾಯಿ ಒಡೆಯುವುದು) ಒಡೆಯುತ್ತಾನೆ. ಸುಳಿಗಾಯಿ ಒಡೆದ ತರುವಾಯ ಇಬ್ಬರು ವ್ಯಕ್ತಿಗಳ ಬಲಗೈಗಳಿಗೆ ದೇವರ ಮುಖವಾಡಗಳನ್ನು ಕೊಡಲಾಗುತ್ತದೆ. ದೇವರ ಮುಖವಾಡಗಳನ್ನು ಹಿಡಿದ ವ್ಯಕ್ತಿಗಳ ಮುಂಭಾಗದಲ್ಲಿ ಹೊಂಬಾಳೆ ಹಿಡಿದ ಪೂಜಾರಿ ಆರತಿ ತಟ್ಟೆ ಹಿಡಿದ ವ್ಯಕ್ತಿ ಇರುತ್ತಾರೆ. ಹೊರಗೆ ಡೊಳ್ಳು ಬಾರಿಸುವವರು ಡೊಳ್ಳನ್ನು ಭಾರಿಸುತ್ತಿರುತ್ತಾರೆ. ದೇವರನ್ನು ದೇವಾಲಯದ ಬಾಗಿಲಿಗೆ ತರುತ್ತಿದ್ದಂತೆಯೇ ದೂಳು ಮರಿಯನ್ನು(ಕುರಿಮರಿಯನ್ನು)ಬಲಿಕೊಡಲಾಗುತ್ತದೆ. ದೂಳುಮರಿಯನ್ನು ಬಲಿಕೊಡುತ್ತಿದ್ದತೆಯೇ ಡೊಳ್ಳನ್ನು ತಾರಕಾಸುರದಲ್ಲಿ ಬಾರಿಸುತ್ತಾರೆ. ಮತ್ತು ಸೇರಿದ ಭಕ್ತರು ಕೇಕೆ ಹಾಕುತ್ತಾ ಕುಣಿಯುತ್ತಾರೆ. ಈ ರೀತಿ ದೇವರ ಮುಖವಾಡಗಳನ್ನು ಹೊತ್ತು ಕುಣಿಯುತ್ತಾ ಊರಿನಿಂದ ಅರ್ಧ ಕಿ.ಮೀ. ದೂರದಲ್ಲಿರುವ ಸಿಡಿಬಾನು ಕಲ್ಲಿನತ್ತಾ ರಭಸವಾಗಿ ಹೋಗುತ್ತಾರೆ. ಸಿಡಿಬಾನು ಕಲ್ಲು

ಎಂಬುದು ಮೂಲತಃ ಗಡಿ ಕಲ್ಲಾಗಿ ಮಾರ್ಪಟ್ಟಿದೆ. ಸಿಡಿಬಾನಿಗೆ ಆರ್ಭಟದಿಂದ ಹೋಗುವ ದೇವರು ಮತ್ತು ಪರಿವಾರವು ಮರಳಿ ದೇವಾಲಯದತ್ತ ಬರುವಾಗ ತುಂಬಾ ಶಾಂತವಾಗಿ ಬರುತ್ತಾರೆ. ಈ ಸಿಡಿಬಾನಿಗೆ ಹೋಗಿ ಮರಳಿ ಬರುವ ಹೊತ್ತಿಗೆ ರಾತ್ರಿಯಾಗಿರುತ್ತದೆ. ರಾತ್ರಿ ದೇವಾಲಯಕ್ಕೆ ಮರಳಿದ ದೇವರುಗಳು ದೇವಾಲಯದ ಸುತ್ತಾ ೭ ಸುತ್ತು ಸುತ್ತುತ್ತವೆ. ದೇವರನ್ನು ಸಿಡಿಬಿಲ್ಲಿಗೆ ಕರೆದೊಯ್ಯುವಾಗ ಅಗಸಿ ಬಾಗಿಲನ್ನು ಒಳಗೊಂಡು ಪ್ರಮುಖವಾಗಿ ಮೂರು ನಾಲ್ಕು ಸ್ಥಳಗಳಲ್ಲಿ ದೇವರಿಗೆ ಕುರಿ ಬಲಿ ಕೊಡಲಾಗುತ್ತದೆ. ಹಿಂದೆ ದೇವರ ಗುಡಿಯನ್ನು ಹೊಕ್ಕ ತರುವಾಯ ಭಕ್ತಾದಿಗಳು ತಮ್ಮ ಹರಕೆ ತೀರಿಸಲು ದೇವರಿಗೆ ಕುರಿ ಬಲಿಕೊಡುತ್ತಿದ್ದರು. ದೇವಸ್ಥಾನವನ್ನು ಪ್ರದಕ್ಷಣೆ ಹಾಕಿದ ತರುವಾಯ ಮೊದಲಿಗೆ ದೇವರ ಮುಖವಾಡಗಳನ್ನು ಹಿಡಿದುಕೊಂಡವರು ಬಿಂಗಿ(ಕೆಂಡ) ಹಾಯುತ್ತಾರೆ. ತರುವಾಯ ಇನ್ನೂಳಿದ ಭಕ್ತಾಧಿಗಳು ಕೆಂಡ ಹಾಯುತ್ತಾರೆ. ಕೆಂಡ ಆಯ್ದ ನಂತರ ಎಡಗಡೆ ಇರುವ ಶೂಲಕ್ಕೆ ಎರಿಸುವ ಕ್ರಿಯೆಯನ್ನು ಮಾಡಲಾಗುತ್ತದೆ. ಶೂಲಕ್ಕೆ ಎರಿಸುವುದು ಎಂದರೆ ಜೀವಂತವಾಗಿರುವ ಕೋಳಿಯನ್ನು ಕಬ್ಬಿಣದ ದೊಡ್ಡ ಶೂಲಕ್ಕೆ ಚುಚ್ಚಲಾಗುತ್ತದೆ. ಚುಚ್ಚಿದ ಕೋಳಿಯನ್ನು ಶೂಲದಲ್ಲಿಯೇ ಬಿಡುತ್ತಾರೆ. ಹಿಂದೆ ನಂಬಿಕೆಗೆ ದ್ರೋಹ ಮಾಡಿದ ದೊಂಬರ ರತ್ನಾಜೀಯನ್ನು ಇದೇ ರೀತಿಯಲ್ಲಿ ಶೂಲಕ್ಕೆ ಎರಿಸಲಾಗಿತ್ತಂತೆ. ಅದರ ಪ್ರತೀಕವಾಗಿ ಇಂದು ಕೋಳಿಯನ್ನು ಶೂಲಕ್ಕೆ ಚುಚ್ಚಲಾಗುತ್ತದೆ. ಕೋಳಿಯನ್ನು ಶೂಲಕ್ಕೆ ಎರಿಸಿದ ನಂತರ ಗರ್ಭ ಗುಡಿಯ ಹಜಾರದ ಮುಂಭಾಗದಲ್ಲಿ ಕೂಡಿಸಲಾಗುತ್ತದೆ. ಭಕ್ತಾಧಿಗಳು ಕುರಿ ಕೋಳಿಯನ್ನು ಇತ್ಯಾದಿಗಳನ್ನು ಬಲಿಕೊಟ್ಟು ತಮ್ಮ ಹರಕೆಯನ್ನು ತೀರಿಸುತ್ತಾರೆ. ಮತ್ತು ಹಣ್ಣು ಕಾಯಿ ಮಾಡಿಸುತ್ತಾರೆ. ಮಾರನೆಯ ದಿನ ಬೆಳಿಗ್ಗೆ ದೇವರಿಗೆ ಪೂಜೆ ಸಲ್ಲಿಸಿ ದೇವರನ್ನು ಪೆಟ್ಟಿಗೆಯಲ್ಲಿರಿಸಿ ಗರ್ಭ ಗುಡಿಯ ಬೋದಿಗೆಯ ಮೇಲೆ ಇರಿಸಲಾಗುತ್ತದೆ. ಮರಳಿ ದೇವರನ್ನು ಹೊರ ತೆಗೆಯುವುದು ದೀಪಾವಳಿ ಅಮಾವಾಸ್ಯೆಗೆ.

**ಶುದ್ಧ ಮಾಡುವ ಕ್ರಿಯೆ**

ಮಡಿವಾಳ ಜನಾಂಗದವನು ಅಂದು ಮಡಿ ಸ್ನಾನ ಮಾಡಿ ಮಡಿ ಬಟ್ಟೆಗಳನ್ನು ಉಟ್ಟುಕೊಳ್ಳುತ್ತಾನೆ. ಮತ್ತು ಒಂದೊತ್ತು ಇರುತ್ತಾನೆ. ಮಡಿ ಬಟ್ಟೆಗಳನ್ನು ತೊಟ್ಟುಕೊಂಡ ತರುವಾಯ ಅವನು ಆಕಳ ಸೆಗಣಿಯ ಕುಳಳ್ಳನ್ನು ಸುಟ್ಟು ಅದರ ಬೂದಿಯನ್ನು ತುಂಬಿದ ಕೊಡಕ್ಕೆ ಸೇರಿಸುವುದು ಈ ರೀತಿ ಕುಳ್ಳಿನ ಬೂದಿಯನ್ನು ತುಂಬಿದ ಕೊಡಕ್ಕೆ ಸೇರಿಸುವುದರ ಮೂಲಕ ನೀರನ್ನು ಶುದ್ಧಗೊಳಿಸುತ್ತಾನೆ. ಈ ರೀತಿ ಶುದ್ಧಗೊಳಿಸಿದ ನೀರನ್ನು ತೆಗೆದುಕೊಂಡು ಪ್ರತಿ ಮನೆಗೂ ಹೋಗಿ ಶುದ್ಧ ನೀರನ್ನು ಹಾಕಿ ಮನೆಯನ್ನು ಶುದ್ಧಿಗೊಳಿಸಬೇಕು. ಅಗಸನಿಂದ ಪಡೆದ ಶುದ್ಧ ನೀರನ್ನು ಪ್ರತಿ ಕುಟುಂಬವು ತಮ್ಮ ಮನೆಯ ನೀರು ಆಹಾರ ಇತರ ಪದಾರ್ಥಗಳು ಮತ್ತು ಮನೆಯಲ್ಲೆಲ್ಲ ಚಿಮುಕಿಸಿ ತಮ್ಮ ಮನೆಗಳನ್ನು ಶುದ್ಧಗೊಳಿಸಿಕೊಳ್ಳುತ್ತಾರೆ. ಈ ರೀತಿ ಇಡೀ ಗ್ರಾಮದ ಪ್ರತಿಯೊಂದು ಮನೆಯನ್ನು ಶುದ್ಧಗೊಳಿಸುವ ಕಾರ್ಯವನ್ನು ತಮ್ಮಡಿಹಳ್ಳಿ ಅಗಸ ಮಾಡುತ್ತಾನೆ. ಇವನು ಮನೆಯನ್ನು ಶುದ್ಧಿಗೊಳಿಸಿದಕ್ಕೆ ಪ್ರತಿಯಾಗಿ ಹಬ್ಬದ ದಿನ ಒಂದು ಸೇರು ಅಕ್ಕಿ, ಒಂದು ತೆಂಗಿನಕಾಯಿ ದೇವರಿಗೆ ಬಲಿಕೊಟ್ಟ ಕುರಿಗಳ ಎರಡು

ತಲೆಗಳು ಇವನಿಗೆ ಸಂದಾಯವಾಗುತ್ತದೆ. ಮನೆಯನ್ನು ಹಾಗೂ ಊರನ್ನು ಶುದ್ಧಗೊಳಿಸಿದ ನಂತರ ಅಗಸನ ಮತ್ತೊಂದು ಕಾರ್ಯ ದೇವರಿಗಾಗಿ ಕಕ್ಕಡ ತಯಾರಿಸಿ ಕೊಡುವುದಾಗಿದೆ.

**ಕಕ್ಕಡ ತಯಾರಿಸುವ ಕ್ರಮ**

ಗಾಮ ದೇವರಿಗೆ ಹಳೆಯ ಬಟ್ಟೆಗಳಿಂದ ಕಕ್ಕಡವನ್ನು ತಯಾರಿಸುವಂತಿಲ್ಲ. ಮತ್ತು ಮೈಲಿಗೆಯಾದ ಬಟ್ಟೆಗಳಿಂದ ಕಕ್ಕಡವನ್ನು ತಯಾರಿಸುವಂತಿಲ್ಲ. ದರ್ಜಿಗಳ ಬಳಿಯಲ್ಲಿ ಸಿಗುವ ಹೊಸ ಬಟ್ಟೆಗಳನ್ನು ತರಬೇಕು ಇಲ್ಲವಾದರೆ ಕಮಿಟಿ ಕೊಡಿಸಿದ ಹೊಸ ಬಟ್ಟೆಯಿಂದ ಹಬ್ಬಕ್ಕಾಗಿ ಕಕ್ಕಡಗಳನ್ನು ತಯಾರಿಸಿ ಕೊಡಬೇಕು. ಊರನ್ನು ಶುದ್ಧಿಗೊಳಿಸಿ ಸಾಯಾಂಕಾಲ ೫ ಘಂಟೆ ಸುಮಾರಿಗೆ ಗಾಮ ದೇವರು ಇರುವ ಗುಡಿ ಹತ್ತಿರ ಗ್ರಾಮಸ್ಥರೆಲ್ಲಾ ನೆರೆಯುತ್ತಾರೆ. ಪ್ರತಿ ವರ್ಷ ಗಾಮನ ಹಬ್ಬದ ತರುವಾಯ ದೇವರ ಮೂರ್ತಿ (ಕುದುರೆಯ ಮೇಲೆ ಕುಳಿತ ಕುಮಾರರಾಮನ ಕಂಚಿನ ಚಿಕ್ಕ ಮೂರ್ತಿ) ಮತ್ತು ಆತನ ಹರಕೆಯಾಗಿ ಸಂದ ಬೆಳ್ಳಿ ತೊಟ್ಟಿಲು, ಬಂಗಾರದ ವಸ್ತುಗಳು ಮತ್ತು ಇತರ ಎಲ್ಲಾ ಆಭರಣಗಳನ್ನು ಮಡಿಕೆಯೊಂದರಲ್ಲಿ ಇರಿಸಿ ಎಲ್ಲಾರ ಸಮಕ್ಷಮಗಳಲ್ಲಿ ದೇವರ ಗುಡಿಯ ಮುಂದೆ ತೋಡಿದ ಕುಣಿಯಲ್ಲಿ ಆ ಮಡಿಕೆಯನ್ನು ಇರಿಸಿ ಮಣ್ಣು ಮುಚ್ಚುತ್ತಾರೆ. ಈ ಎಲ್ಲಾ ವಸ್ತುಗಳನ್ನು ವರ್ಷಕ್ಕೆ ಒಮ್ಮೆ ಮಾತ್ರ ಹಬ್ಬದ ಸಂದರ್ಭದಲ್ಲಿ ಸಾರ್ವಜನಿಕರ ಸಮಕ್ಷಮದಲ್ಲಿ ಹೊರತೆಗೆಯಲಾಗುತ್ತದೆ. ಹಬ್ಬ ಪೂರ್ಣಗೊಂಡ ತರುವಾಯ ಮತ್ತೆ ಅದೇರೀತಿ ಕಮಿಟಿ ಮತ್ತು ಊರಿನವರ ಸಮಕ್ಷಮದಲ್ಲಿ ಕುಣಿಯಲ್ಲಿ ಇರಿಸಿ ಮಣ್ಣಿನಿಂದ ಮುಚ್ಚುತ್ತಾರೆ. ಇದನ್ನು ಯಾರು ಕಳ್ಳತನ ಮಾಡುವುದಿಲ್ಲ. ಇಡೀ ಊರನ್ನೆ ರಕ್ಷಿಸುವ ದೈವ ತನ್ನ ವಸ್ತುಗಳನ್ನು ತಾನು ರಕ್ಷಿಸಿಕೊಳ್ಳಲಾರನೆ ಎಂಬ ವಾದ ಹಳ್ಳಿಗರದು. ಈ ಆಭರಣಗಳನ್ನು ಕಳ್ಳತನ ಮಾಡಿದರೆ ಕಳ್ಳನು ರಕ್ತಕಾರಿ ಸಾಯುತ್ತಾನೆ. ಎಂಬ ನಂಬಿಕೆ ಜನರಲ್ಲಿ ಇದೆ. ಸತ್ಯದ ದೈವ ರಾಮ (ಗಾಮನು) ತಪ್ಪು ಮಾಡಿದವರನ್ನು ಶಿಕ್ಷಿಸದೆ ಬಿಡಲಾರನು ಎಂದು ಸ್ಥಳೀಯ ವಕ್ತೃಗಳು ತಿಳಿಸುತ್ತಾರೆ. ದೇವರು ಮತ್ತು ದೇವರ ಆಭರಣಗಳನ್ನು ಕುಣಿಯಿಂದ ಹೊರ ತೆಗೆದ ತರುವಾಯ ಮೊದಲಿಗೆ ಅಗಸನು ಅವುಗಳಿಗೆಲ್ಲಾ ಶುದ್ಧ ನೀರನ್ನು ಹಾಕಿ ಶುದ್ಧಗೊಳಿಸುತ್ತಾನೆ. ಈ ರೀತಿ ಶುದ್ಧ ನೀರನ್ನು ಹಾಕಿಸಿಕೊಂಡ ನಂತರವೇ ದೇವರು ಪೂಜೆಗೆ ಅರ್ಹವಾಗುತ್ತದೆ. ನಂತರ ಕಟ್ಟೆಯ ಮೇಲೆ ಕುಮಾರರಾಮನ ಕಂಚಿನ ಚಿಕ್ಕ ಪ್ರತಿಮೆಯನ್ನು ಇರಿಸಲಾಗುತ್ತದೆ. ಬೇಡ ಬುಡಕಟ್ಟಿನ ಮನೆತನದವರಿಂದ ಮೊದಲಿಗೆ ಪೂಜೆ ಕಾರ್ಯ ನಡೆಯುತ್ತದೆ. ಸದ್ಯಕ್ಕೆ ಬೇಡ ಬುಡಕಟ್ಟಿನ ಮನೆಯವರು ಗಾಮನ ಪೂಜೆಯನ್ನು ಮಾಡುತ್ತಾರೆ. ಪೂಜೆಗೆ ೩೦ ಸೇರು ಅಕ್ಕಿ, ೨೦೦ ತೆಂಗಿನ ಕಾಯಿ, ಬೆಲ್ಲ, ಅವಲಕ್ಕಿ, ಹೊಂಬಾಳೆ, ಬಾಳೆಹಣ್ಣು, ವೀಳದೆಲೆ ಅಡಿಕೆ ಇತ್ಯಾದಿಗಳನ್ನು ಇರಿಸಿ ಪೂಜೆ ಮಾಡಲಾಗುತ್ತದೆ. ಪೂಜೆಯ ಕೊನೆಯಲ್ಲಿ ಮಂಗಳಾರತಿಯನ್ನು ಮಾಡುತ್ತಾರೆ. ಮಂಗಳಾರತಿಯಾಗುತ್ತಿದ್ದಂತೆಯೇ ನಾಮಧಾರಿ ಗೌಡರೊಬ್ಬರಿಗೆ ಮೈಯೊಳಗೆ ಗಣ ಬರುತ್ತದೆ. ಗಣ ಬಂದ ಪೂಜಾರಿ ಹೊಂಬಾಳೆ ಇಡಿದು ಮೈ ನಡುಗಿಸುತ್ತಾ ಕೇಕೆ ಹಾಕಿ ಕಟ್ಟೆಯ ಸುತ್ತ ಸುತ್ತುತ್ತಾನೆ. ತಮ್ಮ ಊರಿಗೆ ಕೆಡಕಾಗಿದ್ದರೆ ಏಕೆ ಕೆಡಕಾಗಿದೆ. ಅದನ್ನು ಸರಿ ಪಡಿಸುವ ಕ್ರಮ ಹೇಗೆ ಎಂದು

ತಿಳಿಸುತ್ತಾನೆ. ಗಾಮನಿಗೆ ಹರಕೆಯನ್ನು ಹೊತ್ತು ಹರಿಕೆಯನ್ನು ತೀರಿಸುವುದನ್ನು ಮರೆತಿದ್ದರೆ ಅಂತಹ ಭಕ್ತರಿಗೆ ಹರಕೆಯ ಕುರಿತು ನೆನಪು ಮಾಡಿಕೊಡಲಾಗುತ್ತದೆ. ಮತ್ತು ಆ ವರ್ಷದ ಮಳೆ ಬೆಳೆ ಅಭಿವೃದ್ಧಿಯ ಕುರಿತು ತಿಳಿಸುತ್ತಾನೆ. ತುಂಬಾ ರುದ್ರವತಾರಿಯಾದ ಗಣವನ್ನು ಆ ಕ್ಷಣ ಶಾಂತಗೊಳಿಸಲು ನಿಂಬೆ ಹಣ್ಣನ್ನು ಕೊಯ್ಯುವುದು ಕಾಯಿ ಒಡೆಯುವುದು ಭಂಡಾರ ಹಚ್ಚುವುದು ಇತ್ಯಾದಿಗಳನ್ನು ಮಾಡುತ್ತಾರೆ. ಸುಮಾರು ೨೦೦ ಕಾಯಿಗಳನ್ನು ಒಡೆಯಲಾಗುತ್ತದೆ. ಹಾಗೂ ಫಲಾಹಾರಗಳನ್ನು ಕೊಡಲಾಗುತ್ತದೆ. ಇಷ್ಟಾಗುವ ವೇಳೆಗೆ ಮುಂಜಾನೆಯ ನಸುಕಾಗಿರುತ್ತದೆ. ನಂತರ ನಸುಕಿನಲ್ಲಿ ಗಾಮನ ಗದ್ದೆಯವರು ಬಂದು ಮೀಸಲು ಕುರಿಗೆ ಪೂಜೆ ಸಲ್ಲಿಸಿ ಕುರಿಗೆ ಶುದ್ಧ ನೀರನ್ನು ಹಾಕಿ ಶುದ್ಧಗೊಳಿಸಿದ ನಂತರ ಮೀಸಲು ಕುರಿಯನ್ನು ಕಡಿಯುತ್ತಾರೆ. ಇವರ ನಂತರ ಗುಬ್ಬಿಗ ಗ್ರಾಮದವರು ತಮ್ಮ ಗ್ರಾಮದ ಪರವಾಗಿ ಮೀಸಲು ಕುರಿಯನ್ನು ಗಾಮನಿಗೆ ಬಲಿಕೊಡುತ್ತಾರೆ. ಈ ಮೀಸಲು ಕುರಿಯನ್ನು ಗಾಮನ ಗದ್ದೆಯವರಲ್ಲಿ ೨೫ ಕುಟುಂಬಗಳು ಮತ್ತು ಗುಬ್ಬಿಗದಲ್ಲಿ ೬ ಕುಟುಂಬಗಳು ಹಂಚಿಕೊಳ್ಳುತ್ತವೆ. ಇನ್ನೂಳಿದ್ದಂತೆ ಹರಕೆ ಹೊತ್ತ ಇತರ ಭಕ್ತರು ತಮ್ಮ ಕುರಿ ಕೋಳಿಗಳನ್ನು ಬಲಿಕೊಡುತ್ತಾರೆ. ಗಾಮನ ಪೂಜೆಯ ತರುವಾಯ ಭೂತಪ್ಪ ಚೌಡಿಯರಿಗೂ ಕೋಳಿ ಕುರಿಗಳನ್ನು ಅರ್ಪಿಸಲಾಗುತ್ತದೆ. ಮಾರನೆಯ ದಿನ ಪ್ರತಿಯೊಂದು ಕುಟುಂಬವು ಮನೆಯಲ್ಲಿ ಮಾಂಸದ ಅಡುಗೆಯನ್ನು ಮಾಡಿಕೊಂಡು ಊಟಮಾಡುತ್ತಾರೆ. ಎರಡು ಗ್ರಾಮದ ಪ್ರತಿಯೊಬ್ಬರು ತಮ್ಮ ಗದ್ದೆಗಳ ಸುತ್ತಲು ಮಾಂಸದ ಚೂರು ಮತ್ತು ಶುದ್ಧ ನೀರನ್ನು ಚಿಮುಕಿಸುತ್ತಾರೆ. ಈ ಹಬ್ಬದಲ್ಲಿ ಮಾದಿಗರು ಹಲಗೆ ಬಡಿಯುವ ಕಾರ್ಯವನ್ನು ಮರಾಠಿಗರು ಮತು ದೀವರು ಪಂಜನ್ನು ಹಿಡಿಯುತ್ತಾರೆ. ಮಹಿಳೆಯರಿಗೆ ಈ ಹಬ್ಬದಲ್ಲಿ ದೇವಸ್ಥಾನದ ಸುತ್ತ ಮುತ್ತ ಪ್ರವೇಶವಿಲ್ಲ. ಮಾರನೆಯ ದಿನ (ಮಾಂಸದ ಅಡುಗೆ ಮಾಡಿದ ದಿನ) ಮಹಿಳೆಯರು ದೂರದಿಂದಲೇ ಗಾಮನಿಗೆ ಕೈಮುಗಿದು ಹೋಗುತ್ತಾರೆ. ಕಳಸವನ್ನು ಸಹ ಪುರಷರೇ ಹಿಡಿಯುತ್ತಾರೆ. ಹಬ್ಬದ ಮಾರನೆಯ ದಿನ ಸಾಯಾಂಕಾಲ ಸೇರಿದ ಭಕ್ತರ ಸಮ್ಮುಖದಲ್ಲಿ ಕಮಿಟಿ ಸದಸ್ಯರು ದೇವರ ಆಭರಣ ಇತರ ವಸ್ತುಗಳನ್ನು ಹೊಸ ಮಣ್ಣಿನ ಮಡಿಕೆಯಲ್ಲಿ ಹಾಕಿ ದೇವರ ಕಟ್ಟೆಯ ಮುಂಭಾಗದ ಭೂಮಿಯಲ್ಲಿ ಊತು ಹಾಕುತ್ತಾರೆ. ಮುಂದಿನ ವರ್ಷದ ಜಾತ್ರೆಗೆ ಈ ವಸ್ತುಗಳನ್ನು ಭೂಮಿಯಿಂದ ಹೊರ ತೆಗೆಯಲಾಗುತ್ತದೆ. ಗಾಮನ ಗದ್ದೆಯವರು ಈ ಹಬ್ಬಕ್ಕೆ ರಾಮನ ಹಬ್ಬ ಗಾಮನ ಹಬ್ಬ ಹಿರಿಯ ನೋನಿ ಎಂದು ಕರೆಯುತ್ತಾರೆ. ಗಾಮನಿರುವ ಸ್ಥಳಕ್ಕೆ ಹೋಗುವವರು ಸರಾಯಿ ಕುಡಿದು ಹೋಗಬಾರದು ಅಥವಾ ಮೈಲಿಗೆಯಾಗಿ ಹೋಗಬಾರದು. ಈ ರೀತಿ ಹೋದರೆ ಬಲಿ ಕೊಡುವಾಗ ಕುರಿ ಕೊಸರಾಡುತ್ತದೆ. ಕುರಿ ಕೊಸರಾಡಿದರೆ ದೇವರಿಗೆ ಅಸಂತೃಪ್ತಿಯಾಗುತ್ತದೆ. ಮತ್ತು ಊರಿಗೆ ಒಳಿತಾಗುವುದಿಲ್ಲ ಎಂಬ ನಂಬುಗೆ ಅವರಲ್ಲಿದೆ. ಹೀಗಾಗಿ ಯಾರೂ ಶೆರೆ, ಹೆಂಡ ಮುಂತಾದ ಮದ್ಯವನ್ನು ಕುಡಿದು ಗಾಮನ ಬಯಲಿಗೆ ಹೋಗುವುದಿಲ್ಲ ಮತ್ತು ಮೈಲಿಗೆಯಾಗಿ ಹೋಗುವುದಿಲ್ಲ. ಅಡ್ಡೇರಿ, ಯರಬೀಸು, ಕೂಡಿ, ಕಳಸಿ, ಹೊರಬೈಲು, ಚಿಲುಮೆ ಜಿಡ್ಡು, ಸಾರಗನ ಜಿಡ್ಡು, ಕೋಣನ ಜಿಡ್ಡು, ಬಸಾಪುರ, ಗುಳೆಗುಳೆ ಶಂಕರ ಮುಂತಾದ

ಗ್ರಾಮಗಳಲ್ಲಿಯೂ ಈ ಹಬ್ಬವು ಹೆಚ್ಚು ಕಡಿಮೆ ಇದೇ ಮಾದರಿಯಲ್ಲಿ ನಡೆಯುತ್ತದೆ. ಬೆಳ್ಳೂರಿನಲ್ಲಿ ಮಾತ್ರ ಮೂರು ವರ್ಷಕ್ಕೊಮ್ಮೆ ಕಡೆಯ ಕಾರ್ತಿಕದ ದಿನ ಗಾಮನ ಹಬ್ಬ ಮಾಡಲಾಗುತ್ತದೆ. ಹೆಚ್ಚು ಕಡಿಮೆ ಬೆಳ್ಳೂರಿನ ಗಾಮನ ಹಬ್ಬವು ಗಾಮನಗದ್ದೆ ಗಾಮನ ಆಚರಣೆಯನ್ನೆ ಹೋಲುತ್ತದೆ. ಬಸಾಪುರದಲ್ಲಿಯೂ ಸಹ ಗಾಮನಗದ್ದೆ ಮಾದರಿಯಲ್ಲಿಯೇ ಗಾಮನ ಹಬ್ಬ ಮಾಡಲಾಗುತ್ತದೆ. ಆದರೆ ಇಲ್ಲಿಯ ವೈಶಿಷ್ಟ್ಯವೆಂದರೆ ಕನಿಷ್ಠ ೫೦ಕ್ಕೂ ಹೆಚ್ಚು ಕುರಿಗಳನ್ನು ಗಾಮನಿಗೆ ಬಲಿ ಕೊಡಲಾಗುತ್ತದೆ. ಕೇವಲ ೪೦-೫೦ ಕುಟುಂಬಗಳಿರುವ ಚಿಕ್ಕ ಗ್ರಾಮ ಬಸಾಪುರ .ಈ ಬಸಾಪುರದಲ್ಲಿ ಕಾಡಿನ ಅಂಚಿಗೆ ಕುಮಾರರಾಮನ(ಗಾಮನ) ಚಿಕ್ಕ ದೇವಾಲಯ ಮರದ ಕೆಳಗಿದೆ. ದೇವಾಲಯದಲ್ಲಿ ಚಿಕ್ಕ ಗುಂಡುಕಲ್ಲುಗಳನ್ನು ಇರಿಸಲಾಗಿದೆ. ಬಲಿಕೊಟ್ಟ ಕುರಿಯನ್ನು ಶುದ್ಧಗೊಳಿಸಲು ಪ್ರತಿಯೊಂದು ಕುಟುಂಬವು ಹಸಿಬೆಯಲ್ಲಿ(ಪುಟ್ಟಿ) ಕುರಿಯನ್ನು ಮತ್ತು ಕುರಿಯ ಕರುಳು ಇತ್ಯಾದಿಗಳನ್ನು ತರುತ್ತಾರೆ. ಆದರೆ ಇಲ್ಲಿ ಯಾರಿಗೂ ಗಣ ಬರುವುದಿಲ್ಲ. ಪ್ರಾಯಶಃ ಗಾಮನಗದ್ದೆಯ ಹೊರತಾಗಿ ಶಿವಮೊಗ್ಗ ಪ್ರಾಂತದ ಯಾವ ಗ್ರಾಮದಲ್ಲಿಯೂ ಪೂಜಾರಿ ಅಥವಾ ಇತರರಿಗೆ ಗಣ ಬರುವುದನ್ನು ಕಾಣಲಾಗುವುದಿಲ್ಲ.

**೧೪. ನ್ಯಾಯದಾನ ಪದ್ಧತಿ**

ನ್ಯಾಯ ಇತ್ಯಾರ್ಥದ ಒಂದು ವ್ಯವಸ್ಥೆಯೇ ಪಂಚಾಯಿತಿ. ಪರಂಪರೆಯಲ್ಲಿ ನ್ಯಾಯ ಪದ್ಧತಿಯು ತನ್ನದೇ ಆದ ವಿಶಿಷ್ಟ ಹಿನ್ನೆಲೆಯನ್ನು ಪಡೆದುಕೊಂಡು ಬಂದಿದೆ. ಪ್ರಪಂಚದ ಎಲ್ಲಾ ಬುಡಕಟ್ಟು ಸಮುದಾಯಗಳು ತನ್ನದೇ ಆದ ವಿಶಿಷ್ಟ ನ್ಯಾಯದಾನ ಪದ್ಧತಿಯನ್ನು ಆಚರಿಸುತ್ತಿರುವುದನ್ನು ಕಾಣಬಹುದಾಗಿದೆ. ನಮ್ಮಲ್ಲಿಯ ಬುಡಕಟ್ಟು ಸಮುದಾಯಗಳು ಇದಕ್ಕೆ ಹೊರತಾಗಿಲ್ಲ. ನ್ಯಾಯ ಪದ್ಧತಿಯಲ್ಲಿ ಎಲ್ಲಾ ಬುಡಕಟ್ಟುಗಳ ಮೂಲೋದ್ದೇಶ ಒಂದೇ ಆಗಿದ್ದರೂ ಈ ಪದ್ಧತಿಯ ರಚನಾ ಕ್ರಮಗಳು ಮಾತ್ರ ಭಿನ್ನತೆಗಳಿಂದ ಕೂಡಿವೆ. ಬುಡಕಟ್ಟುಗಳಲ್ಲಿ ಈ ನ್ಯಾಯದಾನ ಪದ್ಧತಿ ಕ್ರಮವು ತುಂಬಾ ಗೌರವ ಮತ್ತು ನಿಷ್ಠೆಯಿಂದ ನಡೆಯಲ್ಪಡುತ್ತದೆ. ಈ ಬುಡಕಟ್ಟು ಸಮುದಾಯಗಳ ನ್ಯಾಯ ಪದ್ಧತಿಯೂ ಸರಕಾರ ರಚಿಸಿದ ನ್ಯಾಯಲಯಾಗಳಿಗಿಂತ ಹೆಚ್ಚಿನ ಮಹತ್ವವನ್ನು ಹೊಂದಿರುತ್ತವೆ. ಒಂದು ಜನ ಸಮೂಹದ ಆಚರಣೆ, ಆದರ್ಶ, ನಂಬಿಕೆ, ಮೌಲ್ಯಗಳು ನ್ಯಾಯದಾನ ಪದ್ಧತಿಯನ್ನು ರೂಪಿಸುತ್ತದೆ. ಪ್ರಾದೇಶಿಕ, ಸಾಮಾಜಿಕ, ಸಾಂಸ್ಕೃತಿಕ ಕಾರಣಗಳಿಂದಾಗಿ ಈ ನ್ಯಾಯ ಪದ್ಧತಿಯು ಭಿನ್ನತೆಯನ್ನು ಹೊಂದಿರುತ್ತದೆ. ಇತರೆ ಬುಡಕಟ್ಟು ಸಮುದಾಯಗಳಂತೆ ಶಿವಮೊಗ್ಗ ಪ್ರದೇಶದಲ್ಲಿರುವ ಬೇಡ ಸಮುದಾಯವು ಪರಂಪರೆಯಿಂದ ತನ್ನದೇ ಆದ ವಿಶಿಷ್ಟ ನ್ಯಾಯದಾನ ಪದ್ಧತಿಯನ್ನು ರೂಢಿಸಿಕೊಂಡು ಬಂದಿದೆ. ಶಿವಮೊಗ್ಗ ಬೇಡ ಬುಡಕಟ್ಟಿನ ಪ್ರತಿಯೊಂದು ಹಳ್ಳಿಯಲ್ಲಿಯೂ ಒಂದೊಂದು ಪಂಚಾಯಿತಿ ಕಟ್ಟೆಗಳಿವೆ. ಈ ಪಂಚಾಯಿತಿ ಕಟ್ಟೆಯು ಜಾತ್ರೆ, ಹಬ್ಬ, ಮದುವೆ ಮುಂತಾದ ಕಾರ್ಯಗಳಲ್ಲಿ ಪ್ರಮುಖ ಪಾತ್ರವಹಿಸುವಂತೆಯೇ, ನ್ಯಾಯ ತೀರ್ಮಾನದಲ್ಲಿ ಸಹ ಪ್ರಮುಖ ಪಾತ್ರವಹಿಸುತ್ತದೆ. ಹಿಂದಿನಿಂದಲೂ ನ್ಯಾಯ ಪದ್ಧತಿ ಪಂಚಾಯಿತಿ ಕಟ್ಟೆಗಳಲ್ಲಿ ನಡೆಯುತ್ತಾ ಬಂದಿದೆ. ಪಂಚಾಯಿತಿ ಕಟ್ಟೆಗಳಿಗೆ ಚಾವಡಿ ಅಥವಾ ಚೌಡಿಕಟ್ಟೆಗಳು ಎಂದು ಕರೆಯುತ್ತಾರೆ. ಈ ಕಟ್ಟೆಗಳನ್ನು

ಮಹಿಳೆಯರು ಹತ್ತುವಂತಿಲ್ಲ. **ಪಂಚಾಯಿತಿ ಕಟ್ಟೆ ವಿವರಗಳು** ಪ್ರತಿಯೊಂದು ಮನೆತನದಿಂದ ಎಂಟತ್ತು ಜನ ಯಜಮಾನರು ಹತ್ತು ಜನ ಪ್ರಮುಖ ಹಿರಿಯ ಬೇಡರ ಮನೆಗೊಬ್ಬರಂತೆ ಒಟ್ಟು ದೈವದವರು ತಳವಾರ ಶಿವಮೊಗ್ಗ ಬೇಡರ ಪ್ರದೇಶದಲ್ಲಿ ಈ ಹಿಂದೆ ಪ್ರಮುಖರಾದ ಯಜಮಾನರೆನಿಸಿಕೊಂಡವರು ಯಾವುದೇ ತಕರಾರುಗಳು ಇಲ್ಲದೇ ತಂಟೆಗಳನ್ನು ಬಗೆಹರಿಸುತ್ತಿದ್ದರು. ಅಲ್ಲದೇ ಬೇಡ ಸಮುದಾಯದಲ್ಲಿ ಹಲವಾರು ವರ್ಷಗಳಿಂದ ವೈಮನಸ್ಸನ್ನು ಬದಿಗೊತ್ತಿ ಬೇಡ ಸಮುದಾಯಗಳ ಮದ್ಯೆ ಸಹಬಾಳ್ವೆ ನಡೆಯುವಂತೆ ಇವರು ನೋಡಿಕೊಂಡಿದ್ದರು. ಇವರ ಪಂಚಾಯಿತಿಗಳಿಗೆ ಒಂದು ಬೆಲೆ ಹಾಗೂ ಮೌಲ್ಯವಿತ್ತು. ತಪ್ಪು ಮಾಡಿದವರಿಗೆ ಶಿಕ್ಷೆಯನ್ನು ಕೊಡುತ್ತಿದ್ದರು. ಛಡಿ ಏಟು, ಬಹಿಷ್ಕಾರದಂತಹ ಶಿಕ್ಷೆಯನ್ನು ವಿಧಿಸುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಈ ರೀತಿ ಶಿಕ್ಷೆಗಳು ಸಡಿಲಗೊಂಡಿವೆ.

**ನ್ಯಾಯ ನಿರ್ಣಯಕ್ರಮ**

ಸ್ಥಳೀಯವಾಗಿ ಶಿವಮೊಗ್ಗ ಬೇಡರು ತಮ್ಮ ಸಮುದಾಯದಲ್ಲಿ ತಮ್ಮದೇ ಆದ ಆಡಳಿತ ವ್ಯವಸ್ಥೆಯನ್ನು ಹೊಂದಿದ್ದಾರೆ. ಪಂಚಾಯಿತಿಯನ್ನು ಕೂಡಿಸಲು ತಳವಾರನನ್ನು ನೇಮಿಸಿಕೊಳ್ಳುತ್ತಾರೆ. ಭೂಮಿ, ಹಣಕಾಸು, ಸಣಪುಟ್ಟ ಕಳವು , ಸ್ತ್ರೀ–ಪುರುಷ ಲೈಂಗಿಕ ವ್ಯವಹಾರ, ಜಮೀನು, ಅಂತರ್ ಜಾತಿಯ ವಿವಾಹ, ಆಸ್ತಿ ಪ್ರೇರಿತ ಅಪರಾಧಗಳು, ಊರಿಗೆ ಸಂಬಂಧಿಸಿದ ಸಮಸ್ಯೆಗಳು, ಹೊಡೆದಾಟ, ಮನೆ ಹಬ್ಬ, ಜಾತ್ರೆ ಇತ್ಯಾದಿಗಳಿಗೆ ಪಂಚಾಯಿತಿ ನಡೆಯುತ್ತದೆ. ಪಂಚಾಯಿತಿಯು ಗಂಭೀರವಾಗಿ ಆತುರ–ಕಾತುರವಿಲ್ಲದೆ, ಮುಚ್ಚು ಮರೆಯಿಲ್ಲದೇ, ಕೂಲಂಕುಷವಾಗಿ ನಡೆಯುತ್ತದೆ. ಸಾಮಾನ್ಯವಾಗಿ ಶಿವಮೊಗ್ಗ ಬೇಡರಲ್ಲಿ ಹಿರಿಯರ ಅಭಿಪ್ರಾಯವನ್ನು ತಿಳಿದುಕೊಂಡು ನಂತರ ಪ್ರಮುಖ ಮನೆತನಗಳಿಗೆ ಸೇರಿದ ಬೇಡರು ಪರಿಷ್ಕರಿಸುತ್ತಾರೆ. ಅವರ ಮತ್ತು ದೈವದ ಅಭಿಪ್ರಾಯದ ಮೇರೆಗೆ ಮುಖ್ಯ ಮನೆತನಕ್ಕೆ ಸೇರಿದ ಯಜಮಾನರು ನ್ಯಾಯ ತೀರ್ಮಾನ ಕೈಗೊಳ್ಳುತ್ತಾರೆ. ಪ್ರತಿಯೊಂದು ಊರಿನಲ್ಲಿಯೂ ಯಜಮಾನ ಎಂದು ಕರೆಯುತ್ತಾರೆ. ನ್ಯಾಯದಾನದಲ್ಲಿ ಈ ಯಜಮಾನರ ತೀರ್ಪು ಕೊನೆಯದು. ಯಜಮಾನರೆಲ್ಲ ಊರಿನವರೆ ಆಗಿರುವುದರಿಂದ ಜಮೀನು ಮುಂತಾದವುಗಳಲ್ಲಿ ಅವರೆಲ್ಲರಿಗೂ ಅನುಭವವಿದ್ದುದರಿಂದ ಸತ್ಯವನ್ನು ನಿಖರವಾಗಿ ಕಂಡು ಹಿಡಿಯುತ್ತಾರೆ. ಈ ಯಜಮಾನರ ತೀರ್ಪಿಗೆ ಯಾವ ತಪ್ಪಿತಸ್ಥನೂ ತಿರುಗಿ ಬೀಳುವಂತಿಲ್ಲ. ಹಾಗೇನಿದ್ದರೂ ತಿರುಗಿ ಬಿದ್ದರೆ, ಆತನನ್ನು ಜಾತಿಯಿಂದ ಬಹಿಷ್ಕರಿಸುವ ಹಕ್ಕನ್ನು ದೈವವು ಹೊಂದಿರುತ್ತದೆ. ಯಾವುದಾದರೂ ಜಗಳದ ವಿಷಯ ಆ ಊರಿನಿಂದ ಹೊರ ಹೋಗುವಂತಿಲ್ಲ. ಅಲ್ಲೇ ತೀರ್ಮಾನವಾಗಬೇಕೆಂಬ ಪದ್ದತಿ ಇದೆ. ಪಂಚಾಯ್ತಿ ದೈವದವರ ತೀರ್ಮಾನಕ್ಕೆ ಎಲ್ಲರೂ ತಲೆ ಭಾಗಲೇಬೇಕು. ಈ ಪದ್ದತಿಯಿಂದ ಊರಿನ ಎಲ್ಲಾ ಜನರ ನಡುವೆ ಹೆಚ್ಚಿನ ಸೌಹಾರ್ದಯುತವಾದ ವಾತವರಣವಿದೆ. ಶಿವಮೊಗ್ಗ ಬೇಡರಲ್ಲಿಯು ನ್ಯಾಯ ತೀರ್ಮಾನಗಳೆಲ್ಲ ಬರವಣಿಗೆಯ ರೂಪವನ್ನು ಹೊಂದಿರುತ್ತವೆ. ಸಾಮಾನ್ಯವಾಗಿ ಬಹಿಷ್ಕರಿಸಲ್ಪಟ್ಟವನು ಪುನಃ ಸಮುದಾಯ ಅಥವಾ ದೈವಕ್ಕೆ ಸೇರಬೇಕೆಂದರೆ, ಯಜಮಾನರ ಅಭಿಪ್ರಾಯ ಮುಖ್ಯವಾಗಿರುತ್ತದೆ. ಸಣ್ಣ ಪುಟ್ಟ ವೈಷಮ್ಯಗಳಿಂದಾಗಿಯೇ ಶಿವಮೊಗ್ಗ ಬೇಡರಂಥ ಸಮುದಾಯದಲ್ಲಿಯೂ ಸಹ ಪ್ರತಿ

ಊರಿನಲ್ಲಿ, ತಾಲೂಕಿನಲ್ಲಿಯೂ ಎರೆಡರೆಡು ಗುಂಪುಗಳನ್ನು ಕಾಣಬಹುದಾಗಿದೆ. ಆದರೆ ಈ ಎಲ್ಲ ಪರ-ವಿರೋಧ ಗುಂಪುಗಳು ಕುಲ ಸಂಬಂಧಿ ಆಚರಣೆಗಳು ನ್ಯಾಯ ತೀರ್ಮಾನ ಮುಂತಾದ ದೈವಕ್ಕೆ ಸಂಬಂಧಿಸಿದ ಪ್ರಮುಖ ಕಾರ್ಯಗಳಲ್ಲಿ ಒಂದಾಗಿ ಕಾರ್ಯ ನಡೆಸುವುದನ್ನು ಕಾಣಬಹುದಾಗಿದೆ. ಎಲ್ಲಾ ದೃಷ್ಟಿಯಿಂದಲೂ ಇದು ಕ್ಷೇಮವೆಂಬುದು ಅವರಿಗೂ ಸಹ ಮನದಟ್ಟಾಗಿದೆ. ಸಣ್ಣಪುಟ್ಟ ವೈಷಮ್ಯಗಳು ಇವರ ಮುಗ್ಧತೆ ಮತ್ತು ಅನಕ್ಷರತೆಗಳಿಂದ ಹುಟ್ಟಿದವುಗಳು. ಮಾನವೀಯ ಅನುಕಂಪಗಳಿಗೆ ಬೇಗ ಮಾರು ಹೋಗುವ ಈ ಶಿವಮೊಗ್ಗ ಬೇಡರು ಪ್ರೀತಿ ದ್ವೇಷಗಳ ಮದ್ಯೆಯೂ ಸಹಬಾಳ್ವೆಯನ್ನು ಮಾಡುವಂತಹವರಾಗಿದ್ದಾರೆ.

**ಕಟ್ಟೆಮನೆ ಪದ್ಧತಿಗಳು**

ಪ್ರತಿಯೊಂದು ಸಮುದಾಯವು ಒಂದು ಪ್ರದೇಶಕ್ಕೆ ಅನುಗುಣವಾಗಿ ತಮ್ಮದೇ ಆದ ಮನೆಗಳನ್ನು ಹೊಂದಿವೆ. ಅವಿಭಕ್ತ ಕುಟುಂಬದ ಪದ್ಧತಿಯಿಂದಾಗಿ ದೊಡ್ಡ ದೊಡ್ಡ ಕಟ್ಟೆಮನೆಗಳನ್ನು ಇಂದಿಗೂ ನೋಡಬಹುದಾಗಿದೆ. ಸಾಮಾನ್ಯವಾಗಿ ಶಿವಮೊಗ್ಗ ಬೇಡ ಸಮುದಾಯವು ಕೂಡ ಇಂದಿಗೂ ಕಟ್ಟೆಮನೆ ಪದ್ಧತಿಯಲ್ಲಿ ತನ್ನದೇ ಆದ ವಿಶಿಷ್ಟತೆಯನ್ನು ಹೊಂದಿದೆ. ಪ್ರತಿಯೊಂದು ತಾಲೂಕಿನ ಗ್ರಾಮಗಳಲ್ಲಿ ನಾಲ್ಕು ಅಥವಾ ಐದು ಮನೆಗಳು ಕಟ್ಟೆಮನೆಗಳಾಗಿರುತ್ತವೆ. ಸಾಮಾನ್ಯವಾಗಿ ಕಟ್ಟೆಮನೆಗಳಿಂದಾಗಿಯೇ ಯಜಮಾನರು ಪಂಚಾಯಿತಿ ಕಟ್ಟೆಗೆ ಬಂದರೆ, ಹೆಚ್ಚಿನ ಗೌರವವನ್ನು ಕೊಡಲಾಗುತ್ತದೆ. ಕಟ್ಟೆಮನೆಗಳೆಂದರೆ, ಮನೆಯ ಮುಂದೆ ಎತ್ತರವಾಗಿ ಕಟ್ಟೆಗಳನ್ನು ಹಾಕಿರುತ್ತಾರೆ. ಮನೆಗೆ ಬಂದ ಅತಿಥಿಗಳನ್ನು ಕೂಡಿಸಲು ಈ ಕಟ್ಟೆಮನೆಗಳು ಅನುಕೂಲವಾದಂತೆ, ಪಂಚಾಯಿತಿ ನಡೆಸಲು ಬಳಸುತ್ತಾರೆ. ಕಟ್ಟೆಮನೆಗಳು ಹಳೆಯ ಮಾದರಿಗಳಾಗಿರುತ್ತವೆ. ಕಟ್ಟೆಮನೆಗಳು ಮುಖ್ಯವಾಗಿ ನ್ಯಾಯ ನಡೆಯುವ ಸ್ಥಳಗಳಲ್ಲಿಯೇ ಆಗಿರುತ್ತಿದ್ದವು. ಅಲ್ಲಿ ನ್ಯಾಯ ತೀರ್ಮಾನಕ್ಕಾಗಿಯೇ ಯಜಮಾನರು ಇರುತ್ತಿದ್ದರು. ಕಟ್ಟೆಮನೆಗಳ ವಿಶಿಷ್ಟತೆ ಎಂದರೆ ಮನೆಯ ಮುಂದೆ ಅಥವಾ ಮನೆಯ ಮೇಲೆ ಹಂಚುಗಳ ಬದಲಾಗಿ ಕಬ್ಬಿಣದ ತಗಡುಗಳನ್ನು ಹಾಕಿರುತ್ತಾರೆ. 'ಗುಡುಗಿನಿಂದ ಸಿಡಿಲು ಮನೆಯೊಳಕ್ಕೆ' ಪ್ರವೇಶಿಸಬಾರದೆಂಬ ಮುನ್ನೆಚ್ಚರಿಕೆಯಿಂದ ಹಾಕಿರುವುದಾಗಿ ಕಟ್ಟೆ ಮನೆಯ ಯಜಮಾನರು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ತಿಳಿಸುತ್ತಾರೆ. ದಾನ ಧರ್ಮ ಮಾಡುವುದರಲ್ಲಿ ಈ ಕಟ್ಟೆಮನೆಗಳ ಕುಟುಂಬದವರ ಪಾತ್ರ ತುಂಬಾ ಹಿರಿದು. ಇವರನ್ನು ದೊಡ್ಡ ರೈತಾಪಿ ಜನರೆಂದು ಕರೆಯುತ್ತಾರೆ. ಈ ಮನೆಗಳಲ್ಲಿ ಮೊಸರು, ಮಜ್ಜಿಗೆ, ಬೆಣ್ಣೆ ಮತ್ತು ತುಪ್ಪ ಇತ್ಯಾದಿ ಯಾವಾಗಲೂ ಇರುತ್ತದೆ. ಹಿಂದೆಲ್ಲಾ ಅವಿಭಕ್ತ ಕುಟುಂಬಗಳು ಒಂದೇ ಮನೆಯಲ್ಲಿ ವಾಸಿಸುತ್ತಿರುವುದರಿಂದ ವಿಶಾಲವಾಗಿರುವ ಈ ಕಟ್ಟೆಮನೆಗಳನ್ನು ಇಂದಿಗೂ ಕೂಡ ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ಕಾಣಬಹುದಾಗಿದೆ. ಕಟ್ಟೆಮನೆ ಯಜಮಾನರಿಗೆ ವಿಶೇಷವಾದ ಗೌರವಗಳನ್ನು ಕೊಡುತ್ತಿದ್ದರು. ಕಟ್ಟೆಮನೆ ಯಜಮಾನನನ್ನು ಜಮೀನುದಾರ ಎಂದು ಕರೆಯುತ್ತಾರೆ. ಕಟ್ಟೆಮನೆಯ ಒಳಗಡೆ ಎಡಭಾಗ ಮತ್ತು ಬಲಭಾಗದಲ್ಲಿ ಎತ್ತುಗಳನ್ನು ಕಟ್ಟಲು ವ್ಯವಸ್ಥೆಇರುತ್ತದೆ. 'ಗೋದ್ಲಿ' ಎಂದು ಎತ್ತುಗಳನ್ನು ಕಟ್ಟುವ ಜಾಗದ ಮೇಲೆ

ಅಟ್ಟಣಿಗೆಯ ವ್ಯವಸ್ಥೆಯನ್ನು ಮಾಡಿರುತ್ತಾರೆ. ಎತ್ತುಗಳಿಗೆ ಮೇವುನ್ನು ಅಲ್ಲಿಯೇ ಇಡುತ್ತಾರೆ. ಮನೆಯ ಮುಂದುಗಡೆ ವಿಶಾಲವಾದ ಜಾಗವಿದ್ದು, ಎರಡು ಬದಿಗೂ ಕಟ್ಟೆಗಳಿರುವುದರಿಂದ ಬಂದ ಅತಿಥಿಗಳಿಗೆ ಕುರ್ಚಿಹಾಕುವ ಪ್ರಮೇಯವೇ ಇರುವುದಿಲ್ಲ. ಅವಿಭಕ್ತ ಕುಟುಂಬ ಪದ್ಧತಿಗೆ ದೊಡ್ಡ ಮನೆಗಳು ಅಥವಾ ಕಟ್ಟೆ ಮನೆಗಳು ಯೋಗ್ಯವಾಗಿದ್ದವು. ಆದರೆ, ಇಂದು ನಾಗರೀಕತೆಯ ಪ್ರಭಾವದಿದಾಗಿ ವಿಭಕ್ತ ಕುಟುಂಬಗಳಾಗಿ ಮಾರ್ಪಾಡು ಆಗುತ್ತಿರುವುದರಿಮದ ಒಂದೊಂದು ಕಟ್ಟೆಮನೆಗಳಲ್ಲಿ ಅಣ್ಣ-ತಮ್ಮಂದಿರು ಇತ್ಯಾದಿ ಸೇರಿ ಮೂರ್‍ನಾಲ್ಕು ಕುಟುಂಬಗಳು ವಾಸಿಸುತ್ತಿವೆ. ಚಿಕ್ಕ-ಚಿಕ್ಕ ಕುಟುಂಬಗಳು ತಲೆ ಎತ್ತುತ್ತಿವೆ. ಹಾಗಾಗಿ ಕಟ್ಟೆಮನೆಗಳಿಗೆ ಹಿಂದೆ ಇದ್ದ ಮಹತ್ವ ಇಂದು ಇಲ್ಲವಾಗಿದೆ. ಇರುವ ಕಟ್ಟೆಮನೆಗಳು ಬಹಳ ಚೆಂದವಾಗಿ, ನೋಡುಗರಿಗೆ ಆಕರ್ಷಕವಾಗಿ ಇವೆ. ಒಮ್ಮೆ ನೋಡಿದರೆ ಮತ್ತೊಮ್ಮೆ ನೋಡುವಂತೆ ಹಿಂದಿನ ತಮ್ಮ ಆಕರ್ಷಣೆಯನ್ನು ಹೊಂದಿವೆ.

**ನ್ಯಾಯಪದ್ದತಿ ಮತ್ತು ಲಿಂಗ ಸಂಬಂಧಗಳು**

ಬಹಳ ಮುಖ್ಯವಾಗಿ ಶಿವಮೊಗ್ಗ ಜಿಲ್ಲೆಯ ಆದಿವಾಸಿ ಜನಾಂಗವಾದ ಬೇಡ ಬುಡಕಟ್ಟು ಜನಾಂಗವು ಗುಂಪು ಜೀವನವನ್ನು ನಡೆಸುತ್ತಿರುವುದನ್ನು ಶಿವಮೊಗ್ಗ ಜಿಲ್ಲೆಯಾದ್ಯಂತ ಕಂಡುಕೊಳ್ಳಬಹುದಾಗಿದೆ. ಗ್ರಾಮ ಮತ್ತು ಹಳ್ಳಿ ಪರಿಸರದಲ್ಲಿ ಗುಂಪು ಜೀವನಕ್ಕೆ ಬಹಳಷ್ಟು ಮನ್ನಣೆ ಇದ್ದು ನಗರಮಟ್ಟದ ಬೇಡ ಬುಡಕಟ್ಟು ಜನಾಂಗದಲ್ಲಿ ಗುಂಪು ಜೀವನದ ಸಂಘಟನೆ ಅಷ್ಟಾಗಿ ಕಂಡು ಬರುವುದಿಲ್ಲ. ನಗರೀಕರಣ, ಆಧುನಿಕರಣ,ಜಾಗತೀಕರಣ ಈ ಸಂದರ್ಭದಲ್ಲಿ ಗುಂಪು ಜೀವನಕ್ಕೆ ಅಷ್ಟಾಗಿ ಮಹತ್ವ ಕೊಡುವುದಿಲ್ಲ ಗ್ರಾಮೀಣ ಮಟ್ಟದಲ್ಲಿ ಕುಟುಂಬದ ಹಿರಿಯರು ಯಜಮಾನರಾಗಿರುತ್ತಾರೆ. ಅದೇ ರೀತಿಯಲ್ಲಿ ಕುಟುಂಬದ ಹಿರಿಯ ಮಹಿಳೆಯು ಯಜಮಾನಿ ಯಾಗಿರುತ್ತಾಳೆ. ಗ್ರಾಮಾಂತರಮಟ್ಟದಲ್ಲಿ ನ್ಯಾಯಾಂಗ ವ್ಯವಸ್ಥೆಗೆ ಬಹಳ ಮಹತ್ವ ಕಂಡು ಬರುತ್ತದೆ. ತಮ್ಮದೇ ಆದ ಗುಂಪು ಜೀವನದಲ್ಲಿ ಪಂಚಾಯಿತಿಗಳ ಮೂಲಕ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುತ್ತಾರೆ. ಪ್ರತಿಯೊಂದು ಮನೆಯ ಹಿರಿಯರು ಯಜಮಾನರಾಗಿರುತ್ತಾರೆ. ನ್ಯಾಯ ಪಂಚಾಯಿತಿ ಗ್ರಾಮೀಣಮಟ್ಟದಲ್ಲಿ ದೇವಸ್ಥಾನದಲ್ಲಿ ಮತ್ತು ಚೌಡಿಕಟ್ಟೆಯಲ್ಲಿ ಮತ್ತು ಆಲದ ಮರದ ಕೆಳಗಡೆ ಸೇರುವುದರ ಮೂಲಕ ಪಂಚಾಯಿತಿಗಳ ಮೂಲಕ ಬಗೆಹರಿಸಿಕೊಳ್ಳುತ್ತಾರೆ. ತಮ್ಮದೇ ಆದ ಗುಂಪು ಜೀವನದಲ್ಲಿ ಪಂಚಾಯಿತಿ ನಡೆಸುವುದಕ್ಕೆ ಒಬ್ಬ ತಳವಾರನನ್ನು ನೇಮಕ ಮಾಡಿಕೊಳ್ಳುತ್ತಾರೆ. ಆ ತಳವಾರನು ಪ್ರತಿಯೊಂದು ಮನೆಗೆ ಭೇಟಿಕೊಟ್ಟು ಯಜಮಾನರನ್ನು ಬರಮಾಡಿಕೊಳ್ಳುವುದರ ಮೂಲಕ ಪಂಚಾಯಿತಿ ನಡೆಯುತ್ತದೆ. ಇದಕ್ಕೆ ಒಂದು ಗುಂಪಿನ ಸಂಘಟನೆ ಎಂದರು ತಪ್ಪಾಗಲಾರದು. ಒಬ್ಬ ಪುರುಷ ಒಬ್ಬ ಮಹಿಳೆಯನ್ನು ಅತ್ಯಾಚಾರ ಮಾಡಿದಾಗ ಅವನಿಗೆ ಶಿಕ್ಷೆ ಕೊಡುವುದರ ಮೂಲಕ ಅತ್ಯಾಚಾರಕ್ಕೆ ಒಳಗಾದ ಮಹಿಳೆಯನ್ನು ಅವರಿಬ್ಬರಿಗೂ ವಿವಾಹ ಮಾಡುವುದರ ಮೂಲಕ ಸಾಮಾಜಿಕ ನ್ಯಾಯವನ್ನು ಎತ್ತಿ ಹಿಡಿಯುತ್ತಾರೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಪಂಚಾಯಿತಿಯಲ್ಲಿ ಮಹಿಳೆಯರು ಪಾಲ್ಗೋಳ್ಳವುದಕ್ಕೆ ನಿಷೇಧವಿರುತ್ತದೆ. ಪುರುಷರು ಸೇರಿಕೊಂಡೆ ನ್ಯಾಯ ಅನ್ಯಾಯಗಳ

ಬಗ್ಗೆ ಕೂಲಂಕುಷವಾಗಿ ಅಧ್ಯಯನ ಮಾಡಿ ನ್ಯಾಯ ತೀರ್ಮಾನವನ್ನು ನೀಡುತ್ತಾರೆ. ತಮ್ಮ ಗ್ರಾಮೀಣ ಬದುಕಿನಲ್ಲಿ ಪುರುಷರಿಗೆ ಇದ್ದಷ್ಟು ಬೆಲೆ ಮಹಿಳೆಯರಿಗೂ ಇರುತ್ತದೆ. ನಗರಮಟ್ಟದಲ್ಲಿ ಒಂಟಿ ಮಹಿಳೆಯ ಕೂಗು ಯಾರಿಗೂ ಕೇಳಿಸಲಾಗದು ಪೋಲೀಸ್ ಸ್ಟೇಷನ್, ಕೋರ್ಟಗಳಲ್ಲಿ ನ್ಯಾಯ ನೀಡುವ ಪದ್ಧತಿ ಬೆಳೆದುಕೊಂಡು ಬಂದರೆ ಗ್ರಾಮೀಣ ಮಟ್ಟದಲ್ಲಿ ಯಜಮಾನರು ನೀಡಿದ ತೀರ್ಪು ಅಂತಿಮವಾಗಿರುತ್ತದೆ. ಹೆಣ್ಣು ಗಂಡು ಎಂಬ ಬೇಧ ಭಾವವಿಲ್ಲದೆ ನ್ಯಾಯ ತೀರ್ಮಾನ ನಡೆಯುತ್ತದೆ. ಗ್ರಾಮೀಣ ಭಾಗದ ಬೇಡ ಬುಡಕಟ್ಟುಗಳಲ್ಲಿ ಯಜಮಾನನಿಗೆ ಇದಷ್ಟೆ ಗೌರವ ಯಜಮಾನಿಗೂ ಇರುತ್ತದೆ. ಆದರೆ ಪಂಚಾಯಿತಿ ವ್ಯಾಪ್ತಿಯಲ್ಲಿ ಸ್ಥಾನ ಮಹಿಳೆಯರಿಗೆ ನಿಷೇಧವಾಗಿರುತ್ತದೆ. ಬೇಡ ಬುಡಕಟ್ಟು ಈ ರೀತಿಯಾಗಿ ಪಂಚಾಯಿತಿಯ ಗ್ರಾಮೀಣ ಭಾಗದ ಬೇಡ ಬುಡಕಟ್ಟು ಸಮುದಾಯದಲ್ಲಿ ಹಿಂದಿನಿಂದ ಇಂದಿನವರೆಗೆ ನಡೆದುಕೊಂಡು ಬಂದ ಪದ್ಧತಿಯಾಗಿರುತ್ತದೆ. ಈ ಬೇಡ ಬುಡಕಟ್ಟು ಬೇಡರ ಮನೆತನಗಳು ಬಹು ಮುಖ್ಯ ಪಾತ್ರವಹಿಸುತ್ತವೆ. ದೊಡ್ಡ ಮನೆತನವಾದರೆ ಅವರಿಗೆ ಕಟ್ಟೆ ಮನೆತನದವರು ಎಂದು ಕರೆಯುತ್ತಾರೆ. ಅದೇ ರೀತಿ ಪಡೆಸಾಲೆ ಮನೆತನದವರು ಗೌಡ ಮನೆತನದವರು ಎಂದು ಕರೆಯುತ್ತಾರೆ. ಪಂಚಾಯಿತಿ ಹೇಳುವ ಸಂದರ್ಭದಲ್ಲಿ ಪಂಚಾಯಿತಿ ಕಟ್ಟೆಗೆ ಹೋಗುವಾಗ ಪಾದರಕ್ಷೆಗಳನ್ನು ಕೆಳಗೆ ಬಿಟ್ಟು ಹೋಗುತ್ತಾರೆ. ಪ್ರತಿ ಬಾರೀ ಪಂಚಾಯಿತಿ ನಡೆಯುವಾಗ ಮುಖ ತೊಳೆದುಕೊಂಡು ದೇವರ ಕೋಣೆಯಲ್ಲಿ ದೇವರಿಗೆ ಕೈಮುಗಿದು ಪಂಚಾಯಿತಿ ನಡೆಸುತ್ತಾರೆ. ಪಂಚಾಯಿತಿಗೆ ಸೇರಿರುವ ಯುವ ರೈತರು ಯುವಕರು ಯಜಮಾನರನ್ನು ಅತ್ಯಂತ ಪೂಜ್ಯನೀಯ ಸ್ಥಾನದಲ್ಲಿ ಕಾಣುತ್ತಾರೆ. ಬೇಡ ಜನಾಂಗದ ಕೆಲ ಮನೆತನಗಳು ಗೌಡ ಮನೆತನಗಳು ಎಂದು ಕೂಡ ಇಟ್ಟುಕೊಂಡಿರುವುದನ್ನು ನಾವು ಕಾಣಬಹುದಾಗಿದೆ. ನಗರ ಮಟ್ಟದಲ್ಲಿ ವಿಭಕ್ತ ಕುಟುಂಬಗಳು ಹೆಚ್ಚಾದಂತ್ತೆಲ್ಲಾ ಗ್ರಾಮೀಣ ಮಟ್ಟದಲ್ಲಿ ಅವಿಭಕ್ತ ಕುಟುಂಬಗಳು ಹೆಚ್ಚಾಗುವುದನ್ನು ಗಮನಿಸಬಹುದಾಗಿದೆ. ತಂದೆ ತಾಯಿ, ಅಣ್ಣ ತಮ್ಮ, ಅಕ್ಕ ತಂಗಿ, ಅಳಿಯ ಮಾವ ಹೀಗೆ ಸಾಕಷ್ಟು ಜನರು ಇರುವುದನ್ನು ಅವಿಭಕ್ತ ಕುಟುಂಬದಲ್ಲಿ ಕಾಣಬಹುದಾಗಿದೆ. ಎಲ್ಲಿ ಅವಿಭಕ್ತ ಕುಟುಂಬ ಹೆಚ್ಚಾಗಿರುತ್ತದೆಯೋ ಅಲ್ಲಿ ಆತ್ಮಹತ್ಯೆಯ ಪ್ರವೃತ್ತಿ ಕಡಿಮೆಯಾಗಿರುತ್ತದೆ. ಎಲ್ಲಿ ವಿಭಕ್ತ ಕುಟುಂಬಗಳು ಹೆಚ್ಚಾಗಿರುತ್ತವೆ. ಅಲ್ಲಿ ಆತ್ಮಹತ್ಯೆಯ ಪ್ರವೃತ್ತಿ ಹೆಚ್ಚಾಗಿರುತ್ತದೆ. ಖ್ಯಾತ ಮಾನಸಿಕ ತಜ್ಞರ ಅಭಿಪ್ರಾಯ ಇದೇ ಆಗಿರುತ್ತದೆ. ಬೇಡ ಬುಡಕಟ್ಟು ಸಮುದಾಯದಲ್ಲಿ ಪಿತೃಪ್ರಧಾನ ಕುಟುಂಬ ಒಂದು ದೊಡ್ಡ ಕುಟುಂಬವಾಗಿರುತ್ತದೆ. ಊರಿನ ಅಥವಾ ಗ್ರಾಮದ ಜಾತ್ರೆಗಳು, ಹಬ್ಬ ಹರಿದಿನಗಳು ನಿರ್ಧಾರವಾಗುವುದು ಪಂಚಾಯಿತಿ ಮೂಲಕವೇ ಆಗಿರುತ್ತದೆ. ಹಬ್ಬ ಅಥವಾ ಜಾತ್ರೆ ಒಂದು ತಿಂಗಳು ಇರುವಂತೆಯೇ ಮುಂಚಿತವಾಗಿಯೇ ಪಂಚಾಯಿತಿ ಮಾಡಿ ದಿನವನ್ನು ದಿನಾಂಕವನ್ನು ನಿರ್ಧಾರ ಮಾಡುತ್ತಾರೆ. ಗ್ರಾಮೀಣ ಭಾಗದಲ್ಲಿ ನಡೆಯುವ ಹಬ್ಬ ಅಥವಾ ಜಾತ್ರೆ ಗಳಿಗೆ ವಿಶೇಷವಾದ ಸ್ಥಾನವಿರುತ್ತದೆ. ಮನಃಪೂರ್ವಕವಾಗಿ ಗ್ರಾಮೀಣಮಟ್ಟದ ಹಬ್ಬ-ಜಾತ್ರೆಗಳಿಗೆ ತಮ್ಮನ್ನು ತೊಡಗಿಸಿಕೊಂಡಿರುತ್ತಾರೆ. ಆದರೆ ನಗರಮಟ್ಟದಲ್ಲಿ ಹಬ್ಬ-ಹರಿದಿನ , ಜಾತ್ರೆ ಉತ್ಸವಗಳು ಕೇವಲ ನಾಮಕಾವಸ್ಥೆಯಾಗಿರುತ್ತವೆ.

ಬಹುಮುಖ್ಯವಾಗಿ ನ್ಯಾಯದಾನ ಪದ್ಧತಿ ಮತ್ತು ಲಿಂಗ ಸಂಬಂಧಗಳು ಒಂದು ನಿರ್ದಿಷ್ಟವಾದ ನ್ಯಾಯ ಸಂಧಾನ ಮೂಲಕ ಬಗೆಹರಿಯುತ್ತವೆ. ಮದುವೆಯಾದ ಮಹಿಳೆಯರು ಇರಬಹುದು, ವಿಧವೆಯರು ಇರಬಹುದು, ಅಕ್ಕ-ತಂಗಿಯರ ಜಗಳವಾಗಿರಬಹುದು, ಅಣ್ಣ-ತಂಗಿಯ ಜಗಳ, ಅಕ್ಕ-ತಮ್ಮ ಜಗಳ , ಅತ್ತೆ ಸೊಸೆಯ ಜಗಳ, ತಂದೆ ಮಗಳ ಜಗಳ, ಮಾವ ಸೊಸೆ ಜಗಳ ಇನ್ನಿತರ ಆಸ್ತಿ, ಬಂಗಾರ, ಬೆಳ್ಳಿ, ಪಂಪ್‌ಸೆಟ್ಟುಗಳ ಇನ್ನಿತರ ವಿಷಯಗಳು ತಮ್ಮ ತಮ್ಮ ಮನೆಗಳಲ್ಲಿ ಬಗೆಹರಿಯದೆ ಇದ್ದಾಗ ನ್ಯಾಯ ಪದ್ಧತಿಯ ಮೂಲಕ ಯಜಮಾನರು ಇವುಗಳನ್ನು ಪರಿಹರಿಸುತ್ತಾರೆ. ಆ ಮೂಲಕ ಗ್ರಾಮೀಣ ಭಾಗದಲ್ಲಿ ನಡೆಯುವ ನ್ಯಾಯ ಪದ್ಧತಿಗೆ ಮತ್ತು ನ್ಯಾಯದಾನಕ್ಕೆ ಒಂದು ವಿಶೇಷವಾದ ಅರ್ಥವಿರುವುದನ್ನು ನಾವಿಂದು ಕಾಣಬಹುದದಾಗಿದೆ. ಶಿವಮೊಗ್ಗ ಜಿಲ್ಲೆಯ ಎಷ್ಟೋ ಹಳ್ಳಿಗಳಲ್ಲಿ ಜನರು (ಗ್ರಾಮೀಣ ಜನರು) ಪೋಲಿಸ್ ಸ್ಟೇಷನ್ ಮತ್ತು ಕೋರ್ಟಗೆ ಹೋದ ಪ್ರಸಂಗಗಳು ಇಲ್ಲವೆ ಇಲ್ಲ. ಹಾಗಾಗಿಯೂ ಸರ್ಕಾರಗಳು ಕೋರ್ಟ ಮತ್ತು ಪೋಲಿಸ್ ಸ್ಟೇಷನ್‌ಗೆ ಹೋಗದೆ ಬೇಡ ಬುಡಕಟ್ಟು ತಮ್ಮದೇ ಆದ ನ್ಯಾಯ ತೀರ್ಮಾನ ಮಾಡಿಕೊಳ್ಳುವುದರ ಮೂಲಕ ಅನ್ಯಾಯವನ್ನು ಮೆಟ್ಟಿ ನಿಂತು ನ್ಯಾಯಕ್ಕೆ ತೀರ್ಮಾನವನ್ನು ನೀಡುವುದನ್ನು ತಮ್ಮದೇ ಆದ ನ್ಯಾಯ ಪದ್ದತಿ, ಸಂಘಟನಾ ಶಕ್ತಿ ಸರ್ಕಾರಕ್ಕೆ ತಲೆ ನೋವಾಗದೆ ಆಯಾಯ ಗ್ರಾಮಗಳಲ್ಲಿ ನ್ಯಾಯ ತೀರ್ಮಾನಗಳನ್ನು ಮಾಡಿಕೊಳ್ಳುವುದನ್ನು ನೋಡಿ ಅದಕ್ಕೆ ತನ್ನದೇ ಆದ ಮಹತ್ವವನ್ನು ನೀಡಿದೆ. ಇಂದಿಗೂ ಕೂಡ ಶಿವಮೊಗ್ಗ ಜಿಲ್ಲೆಯಲ್ಲಿ ಎಷ್ಟೋ ಬೇಡ ಬುಡಕಟ್ಟುಗಳಲ್ಲಿ ಕೋರ್ಟ ಮತ್ತು ಪೋಲೀಸ್ ಸ್ಟೇಷನ್ ಹತ್ತಿದ ಉದಾಹರಣೆಗಳು ಇಲ್ಲ.

**ಹಜರತ್ ಸೈಯ್ಯದ್ ಸಾದಾತ್ ವಲಿದರ್ಗಾ ಮತ್ತು ಚೌಡೇಶ್ವರಿ**

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ ಹಣಗೇರ ಕಟ್ಟೆ ಗ್ರಾಮದಲ್ಲಿ ಹಜರತ್ ಸೈಯ್ಯದ್ ಸಾದಾತ್ ವಲಿದರ್ಗಾವಿದೆ. ಈ ದರ್ಗಾ ಮಸೀದಿಯನ್ನು ಹೊಂದಿದ್ದು ಈ ಮಸೀದಿಯಲ್ಲಿ ಶ್ರೀ ಚೌಡೇಶ್ವರಿ ದೇವಿ ಮತ್ತು ಶ್ರೀ ಭೂತರಾಯ ಸ್ವಾಮಿ ಮೂರ್ತಿ ಶಿಲ್ಪಗಳಿವೆ. ಈ ದರ್ಗಾವು ಪುರಾತನವಾದದ್ದು. ಹಿಂದು ಮತ್ತು ಮುಸ್ಲಿಂ ಭಕ್ತರು ಸಾಕಷ್ಟು ಸಂಖ್ಯೆಯಲ್ಲಿ ಈ ದರ್ಗಾಕ್ಕೆ ಬಂದು ಹೋಗುತ್ತಾರೆ. ಶಿವಮೊಗ್ಗ ಮಾತ್ರವಲ್ಲದೇ ಹಾಸನ, ಚಿಕ್ಕಮಂಗಳೂರು, ಮಡಿಕೇರಿ, ಮೈಸೂರು, ಚಾಮರಾಜನಗರ, ಮತ್ತು ಚಿತ್ರದುರ್ಗದಿಂದ ಭಕ್ತಾದಿಗಳು ಈ ದರ್ಗಾಕ್ಕೆ ಭೇಟಿ ನೀಡುತ್ತಾರೆ. ಶಿವಮೊಗ್ಗ ಜಿಲ್ಲೆಯ ಬೇಡ ಬುಡಕಟ್ಟು ಮತ್ತು ಹಸಲರು ಈ ದರ್ಗಾಕ್ಕೆ ಸಾಕಷ್ಟು ಸಂಖ್ಯೆಯಲ್ಲಿ ಭಕ್ತಾಧಿಗಳು ಬಂದು ಹೋಗುತ್ತಾರೆ. ತಮಗೆ ಕಾಡುವ ರೋಗರುಜಿನಗಳಿಗಾಗಿ, ಕಷ್ಟ ದುಃಖಗಳಿಗಾಗಿ, ತಾವು ಬೆಳೆಯುವ ಬೆಳೆ ಹುಲುಸಾಗಿ ಬೆಳೆಯುವುದಕ್ಕಾಗಿ, ಮಾಟ, ಮಂತ್ರ ಗಾಳಿ ಸೋಂಕು, ದೆವ್ವ ಭೂತ, ಪ್ರೇತಗಳ ನಿವಾರಣೆಗಾಗಿ ಈ ದರ್ಗಾಕ್ಕೆ ಭಯ ಭಕ್ತಿಯಿಂದ ಭೇಟಿ ನೀಡಿ ನಾಲ್ಕಾರು ದಿನಗಳ ವರೆಗೆ ದರ್ಗಾದಲ್ಲಿಯೇ ಇದ್ದು ತಾವು ಅಂದುಕೊಂಡ ಕೆಲಸ, ಕಾರ್ಯ ಈಡೇರಿದರೆ ಕುರಿ, ಕೋಳಿಯನ್ನು ಬಲಿ ನೀಡಿ ಎಡೆ ಹಾಕುವ ಸಂಪ್ರದಾಯವಿದೆ. ಪ್ರವಾಸಿಗರು, ಭಕ್ತರು ಮತ್ತು

ಬೇರೆ ಬೇರೆ ಜಿಲ್ಲೆಗಳಿಂದ ಆಗಮಿಸುವ ಜನರಿಗೆ ಈ ದರ್ಗಾದಲ್ಲಿ ಉಳಿದುಕೊಳ್ಳುವುದಕ್ಕಾಗಿ ಬಾಡಿಗೆ ಕೊಠಡಿಗಳಿವೆ. ಚೌಡೇಶ್ವರಿ ಶಿವಮೊಗ್ಗ ಜಿಲ್ಲೆಯಲ್ಲಿ ನೆಲೆಸಿರುವ ಅದಿ ದೇವತೆ. ಈ ದೇವತೆಯ ಗುಡಿಗಳನ್ನು ಶಿವಮೊಗ್ಗ, ಸಾಗರ, ತೀರ್ಥಹಳ್ಳಿ, ಸೊರಬ, ಇನ್ನಿತರ ತಾಲೂಕುಗಳಲ್ಲಿ ಕಾಣಬಹುದಾಗಿದೆ. ಈ ದೇವತೆ ಶಾಂತಿ ದೇವತೆ ಎನ್ನುವುದಕ್ಕಿಂತಲೂ ಉಗ್ರ ದೇವತೆ ಎಂದು ಕರೆಯುವುದು ಈ ಜಿಲ್ಲೆಯ ವಾಡಿಕೆಯಾಗಿದೆ. ದರ್ಗಾದಲ್ಲಿ ಹಜರತ್ ಸೈಯ್ಯದ್ ಸಾದಾತ್ ವಲಿ, ಮತ್ತು ಚೌಡೇಶ್ವರಿ ದೇವತೆ ಎದುರಿನಲ್ಲಿ ಭೂತಪ್ಪನ ಮೂರ್ತಿ ಇದೆ. ಚೌಡೇಶ್ವರಿ ಮತ್ತು ಭೂತಪ್ಪನಿಗೆ ಹಿಂದೂ ಮತ್ತು ಮುಸ್ಲಿಂ ಭಕ್ತಾದಿಗಳು ನಡೆದುಕೊಳ್ಳುವುದುಂಟು. ಚೌಡೇಶ್ವರಿ ಮತ್ತು ಭೂತಪ್ಪನ ಪಕ್ಕದಲ್ಲಿ 'ಹಜರತ್" ದರ್ಗಾವಿದೆ. ಈ ಮೂರು ದೇವತೆಗಳ ಸಮ್ಮಿಲನವೇ ಹಜರತ್ ದರ್ಗಾವಾಗಿದೆ.

ಶಿವಮೊಗ್ಗ ಜಿಲ್ಲೆಯಲ್ಲಿ ನೆಲೆಸಿರುವ ಬೇಡರು ಚೌಡೇಶ್ವರಿಗೆ ಭಕ್ತಿಯಿಂದ ನಡೆದುಕೊಳ್ಳುವುದುಂಟು. ಅದರಂತೆ ಶಿವಮೊಗ್ಗದಲ್ಲಿ ನೆಲೆಸಿರುವ ಹಸಲರು ಕೂಡ ಯತ್ತೆಚ್ಛವಾಗಿ ಭೂತಪ್ಪನಿಗೆ ನಡೆದುಕೊಳ್ಳುತ್ತಾರೆ. ಇನ್ನೂ ಮುಸ್ಲಿಂ ಬಾಂಧವರು ಹಜರತ್ ದರ್ಗಾಕ್ಕೆ ಭಕ್ತಿಯಿಂದ ನಡೆದುಕೊಳ್ಳುತ್ತಾರೆ ಈ ಮೂರು ಸಮುದಾಯಗಳ ಸಂಗಮ ಹಜರತ್ ದರ್ಗಾವಾಗಿದೆ. ಈ ಹಜರತ್ ದರ್ಗಾವು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ ಹಣಗೇರಕಟ್ಟೆಯಲ್ಲಿದೆ. ಹಸಲರು ಭೂತವನ್ನು ಕೂಡ ದೈವ ಎಂಬ ಪರಿಕಲ್ಪನೆಯಲ್ಲಿ ಪೂಜಿಸುತ್ತಾರೆ. ಪುರುಷರೇ ಆಗಲಿ, ಮಹಿಳೆಯರೇ ಆಗಿರಲಿ ದೆವ್ವ ಭೂತಗಳನ್ನು ತೊಲಗಿಸಲು ದರ್ಗಾಕ್ಕೆ ಕರೆದುಕೊಂಡು ಬರುವುದುಂಟು. ಭೂತಪ್ಪ ದೇವನಿಗೆ ನಡೆದುಕೊಂಡರೆ ದೆವ್ವ ಭೂತ ಗಾಳಿಯ ಸೋಂಕು ಮಾಟ ಮಂತ್ರ ಇತ್ಯಾದಿಗಳಲ್ಲೆವು ತೊಲಗುತ್ತವೆ ಎಂಬ ನಂಬಿಕೆ ಹಸಲರು ಬುಡಕಟ್ಟಿನಲ್ಲಿದೆ. ಅದರಂತೆ ಚೌಡೇಶ್ವರಿಗೆ ನಡೆದುಕೊಳ್ಳುವ ಬೇಡರು ಮಾಟ ಮಂತ್ರವನ್ನು ಅಷ್ಟಾಗಿ ನಂಬದವರು. ಭೂತ ಮತ್ತು ದೆವ್ವಗಳ ಬಗ್ಗೆ ಅಷ್ಟಾಗಿ ನಂಬದ ಬೇಡರು ಈ ದೇವತೆಗೆ ನಡೆದುಕೊಳ್ಳುವುದುಂಟು. ಹಸಲರು ಮತ್ತು ಬೇಡರಲ್ಲಿ ಗಾಳಿ ಸೋಂಕು ಭೂತ ಪ್ರೇತಗಳು ಏನಾದರೂ ತಗುಲಿದರೆ ಅವುಗಳ ನಿರ್ವಹಣೆಗಾಗಿ ಹಜರತ್ ದರ್ಗಾದಲ್ಲಿರುವ ಹಜರತ್ ಹುಸೇನ್‌ರ ತಾಯಿತಗಳನ್ನು ಕೊರಳಲ್ಲಿ ಮತ್ತು ಕೈಗಳಲ್ಲಿ ಮತ್ತು ಕೈತೋಳಿನಲ್ಲಿ ಕಟ್ಟಿಕೊಳ್ಳುವುದುಂಟು ಹಜರತ್ ದರ್ಗಾದಲ್ಲಿ ಪ್ರತಿವರ್ಷ ಫ್ರೆಬ್ರವರಿ ತಿಂಗಳಲ್ಲಿ ಉರುಸು ನಡೆಯುತ್ತದೆ. ಈ ಉರುಸುನಲ್ಲಿ ಶಿವಮೊಗ್ಗದ ಬೇಡರು, ಹಸಲರು, ಈಡಿಗರು, ದೀವಳಿಗರು, ಬ್ರಾಹ್ಮಣ ಮತ್ತು ಲಿಂಗಾಯತ ಸಮುದಾಯದ ಅದರಲ್ಲೂ ಹಿಂದುಳಿದ ಸಮುದಾಯದವರು, ಹಿಂದುಗಳು ಯತ್ತೆಚ್ಚವಾಗಿ ಈ ಉರುಸುನಲ್ಲಿ ಪಾಲ್ಗೊಂಡು ಭಯ, ಭಕ್ತಿ ಶ್ರದ್ಧೆಯಿಂದ ನಡೆದುಕೊಳ್ಳುವುದುಂಟು. ಈ ದೇವಸ್ಥಾನವು ಅಥವಾ ಮಸೀದಿಯು ಇಡೀ ಭಾರತದಲ್ಲಿಯೇ ಪ್ರಸಿದ್ದವಾದ ಪ್ರೇಕ್ಷಣೀಯ ಪುಣ್ಯ ಕ್ಷೇತ್ರ ಸ್ಥಳವಾಗಿದೆ. ಮತ್ತು ಪೂಜ್ಯನೀಯ ಸ್ಥಳವೆಂದು ಹೆಗ್ಗಳಿಕೆಯನ್ನು ಪಡೆದುಕೊಂಡಿದೆ.

**ಕೊನೆಟಿಪ್ಪಣಿ**

೧. ಥಂಗ. ಡಿ.ಬಿ : ಬೇಡ ಜನಾಂಗ ಪರಿಚಯ, ಸಪ್ತಪುರ, ಪೆರಿಯಾರ್ ಪ್ರಕಾಶನ, ಧಾರವಾಡ, ೧೯೮೮. ಪು.ಸಂ.೪೧

೨. ಅದೇ, ಪು.ಸಂ.೪೫

೩. ಕರಿಶೆಟ್ಟಿ ರುದ್ರಪ್ಪ, ಮ್ಯಾಸ ನಾಯಕರು: ಒಂದು ಜನಾಂಗಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್, ೧೯೯೫, ಪು.ಸಂ.೪೩

೪. ವೀಣಾ.ಎಂ.ಪಿ, ಮನೆ ಸಮಾಜ ಸಂಸ್ಕೃತಿ (ಮ್ಯಾಸ ನಾಯಕ ಹಾಗೂ ಊರನಾಯಕ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫. ಪು.ಸಂ.೪೬

೫. ಹೆಂಡಿ. ಬಿ.ಬಿ, ಜಾನಪದ ಶಾಸ್ತ್ರ, ಅನುಭವ ಪ್ರಕಾಶನ, ಕಲುಬುರ್ಗಿ, ೧೯೯೯. ಪು.ಸಂ.೫೮

೬. ಅದೇ, ಪು.ಸಂ.೬೯

೭. ಗೋವಿಂದರಾಜ್ ಟಿ., ಗೊಂಬೆ ರಾಮರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩, ಪು.೬೦

ಅಧ್ಯಾಯ ನಾಲ್ಕು

# ಆದಿವಾಸಿ ಆಚರಣೆಗಳ ವಿಶ್ಲೇಷಣೆ: ಹಸಲರು ಬುಡಕಟ್ಟು

೪.೧. ಬುಡಕಟ್ಟಿನ ಹಿನ್ನೆಲೆ
೪.೨. ಶಿವಮೊಗ್ಗ ಜಿಲ್ಲೆಯಲ್ಲಿರುವ ಹಸಲರು
೪.೩. ಗೃಹ ಪ್ರವೇಶ
೪.೪. ಉಡುಗೆ-ತೊಡುಗೆಗಳು
೪.೫. ಆಹಾರ ಮತ್ತು ಬೇಟೆ
೪.೬. ಮದುವೆ ಪದ್ಧತಿ
೪.೭. ಹಬ್ಬ ಮತ್ತು ಆಚರಣೆಯ ನಂಬಿಕೆಗಳು
೪.೮. ಅಂಟಿಗೆ-ಪಂಟಿಗೆ
೪.೯. ಹಸಲರು ಮತ್ತು ತುಳಸಿ ಪೂಜೆ
೪.೧೦. ಜೀವನ ಚಕ್ರ
೪.೧೧. ಜನನ ಮತ್ತು ಮರಣ
೪.೧೨. ಸಾಮಾಜಿಕ ಜೀವನ
೪.೧೩. ಮಾಟ ಮಂತ್ರ
೪.೧೪. ಉದ್ಯೋಗ
೪.೧೫. ನಾಟಿ ವೈದ್ಯ ಪದ್ಧತಿ
೪.೧೬. ಹಸಲರು ಮತ್ತು ಭಾಷೆ

ಅಧ್ಯಾಯ ೪

# ಆದಿವಾಸಿ ಆಚರಣೆಗಳ ವಿಶ್ಲೇಷಣೆ: ಹಸಲರು ಬುಡಕಟ್ಟು

ಪ್ರಸ್ತುತ ಅಧ್ಯಯನದಲ್ಲಿ ಕರ್ನಾಟಕದ ಬುಡಕಟ್ಟು ಜನಾಂಗಗಳಲ್ಲಿ ಹಸಲರು ಒಂದು ಪ್ರಮುಖವಾದ ಸಮುದಾಯ. ಹಸಲರು ಅಥವಾ ಹುಲಸವಾರರು ಹಿಂದಿನ ಕಾಲದಲ್ಲಿ ರಾಜ್ಯದ ಅರಣ್ಯ ಪ್ರದೇಶಗಳಲ್ಲಿ ಆಹಾರ ಹುಡುಕುತ್ತಾ ಅಲೆಯುತ್ತಿದ್ದ ಒಂದು ಪ್ರತ್ಯೇಕ ಬುಡಕಟ್ಟು ಪಂಗಡ. ಇವರು ಸಾಂಪ್ರದಾಯಿಕವಾಗಿ ಬೇಟೆಗಾರರಾಗಿದ್ದರೂ ಕಾಫಿ, ಅಡಿಕೆ, ತೋಟಗಳಲ್ಲಿ ಕೂಲಿ ಕೆಲಸ ಮಾಡುತ್ತಿದ್ದರು. ಕೆಲವರು ಬೇಸಾಯಗಾರರೂ, ಕೃಷಿ ಕಾರ್ಮಿಕರೂ, ಮೀನುಗಾರರೂ ಆಗಿದ್ದಾರೆ. ಜೀತ ನಿರ್ಮೂಲನೆ ಕಾನೂನು ಬರುವವರೆಗೆ ಹುಟ್ಟಾಳುಗಳಾಗಿದ್ದರು. ಹಾಗೆಯೇ, ಮುಂದುವರಿದು, ಈ ಬುಡಕಟ್ಟಿನ ಕುರಿತು ಅಧ್ಯಯನ ನಡೆದಿರುವುದು ತುಂಬಾ ಕಡಿಮೆ. ಮಾನವಶಾಸ್ತ್ರ ಕುರಿತಂತೆ ಕರ್ನಾಟಕದಲ್ಲಿ ಆಳವಾದ ಅಧ್ಯಯನ ನಡೆಸಿದವರು ತುಂಬಾ ವಿರಳ. ಸ್ವಾತಂತ್ರ್ಯಪೂರ್ವದಲ್ಲಿ ಆಂಗ್ಲ ಅಧಿಕಾರಿಗಳು, ಪ್ರವಾಸಿಗಳು ಬರೆದ ದಿನಚರಿ, ಪ್ರವಾಸಕಥನ ಮತ್ತು ಕೆಲವು ಪುಸ್ತಕಗಳಲ್ಲಿ ಬುಡಕಟ್ಟು ಜನಾಂಗಗಳ ಸಂಸ್ಕೃತಿ ಮತು ಜೀವನವಿಧಾನ ಕುರಿತಂತೆ ಅಲ್ಪಸ್ವಲ್ಪ ಮಾಹಿತಿ ಕಾಣುತ್ತದೆ. ಆದರೆ ಬ್ರಿಟಿಷ್ ಸರ್ಕಾರ ಹೊರತಂದ ಜಿಲ್ಲಾ ಗೆಜೆಟಿಯರ್‌ಗಳಲ್ಲಿಯೂ ಪ್ರತಿ ಹತ್ತು ವರ್ಷಕ್ಕೊಮ್ಮೆ ನಡೆಸುವ ಜನಗಣತಿ ವರದಿಗಳಲ್ಲಿ ಜನಾಂಗೀಯ ಅಧ್ಯಯನ ಒಂದು ಭಾಗವಾಗಿ ಅಳವಡಿಸಲಾಗಿದೆ. ಈ ಹಿನ್ನೆಲೆಯಲ್ಲಿ ಹಲವು ಅಧ್ಯಯನಗಳಲ್ಲಿ ಅವರ ಆರ್ಥಿಕ, ಸಾಮಾಜಿಕ ಸ್ಥಿತಿಗತಿಗಳ ಮಾಹಿತಿ ದೊರೆಯುವುದೇ ವಿನಃ ಅವರ ಸಂಸ್ಕೃತಿ, ಸಂಪ್ರದಾಯಗಳನ್ನು ಕುರಿತು ವಿಷಯ ದೊರಕದೆ ಇರುವುದರಿಂದ ಅದರ ಸಮಗ್ರ ಮಾಹಿತಿಯನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ಕರ್ನಾಟಕದ ಹಸಲರು ಕುರಿತು ಆಳವಾದ ಅಧ್ಯಯನ ಇಲ್ಲಿಯವರಿಗೂ ನಡೆದಿರುವುದು ಅತಿ ಕಡಿಮೆ. ಕೆಲವು ಗ್ರಂಥಗಳಲ್ಲಿ ಉಲ್ಲೇಖವಾಗಿರುವುದನ್ನು ಬಿಟ್ಟರೆ, ಈ ಜನಾಂಗವನ್ನು ಕುರಿತು ಸಮಗ್ರ ಅಧ್ಯಯನ ನಡೆದಿರುವುದಿಲ್ಲ. ೧೮೭೬ರಲ್ಲಿ ಎಂ.ಎ. ಷೇರಿಂಗ್ ಬರೆದ ಹಿಂದೂ ಟ್ರೈಬ್ಸ್ ಅಂಡ್ ಕ್ಯಾಸ್ಟ್ ಎಂಬ ಗ್ರಂಥದ ಮೂರನೇ ಸಂಪುಟದಲ್ಲಿ ಹಸಲರು ಕುರಿತ ಸ್ವಲ್ಪ ಮಾಹತಿಯನ್ನು ನೋಡಬಹುದಾಗಿದೆ. ಆರ್.ಇ. ಎಂಥೋವನ್ ೧೯೨೨ರಲ್ಲಿ ರಚಿಸಿದ ದಿ ಟ್ರೈಬ್ಸ್ ಅಂಡ್ ಕ್ಯಾಸ್ಟ್ ಆಫ್ ಬಾಂಬೆ ಎಂಬ ಗ್ರಂಥದ ಎರಡನೆಯ ಸಂಪುಟದಲ್ಲಿ ಹಸಲರು ಅವರನ್ನು ಕುರಿತ ಉಲ್ಲೇಖವಿದೆ. ೧೯೦೧ರ ಜನಗಣತಿಯಂತೆ ಹಸಲರ ಸಂಖ್ಯೆ ೨೨೭೭ ಎಂದಿದೆ.

ಎಚ್. ವಿ. ನಂಜುಡಯ್ಯ ಮತ್ತು ಎಲ್.ಕೆ. ಕೃಷ್ಣ ಅಯ್ಯರ್‌ರವರು ಕರ್ನಾಟಕ ಬುಡಕಟ್ಟುಗಳ ಅಧ್ಯಯನ ನಡೆಸಿ ೧೯೩೦ರಲ್ಲಿ ಪ್ರಕಟಿಸಿರುವ "ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್" ಗ್ರಂಥದ ಸಂಪುಟದಲ್ಲಿ ಹಳೆ ಮೈಸೂರು ಭಾಗದಲ್ಲಿ ವಾಸಿಸುವ ಹಸಲರು ಜೀವನ ವಿಧಾನಗಳ ಪರಿಚಯವಿದೆ. ಇವರ ಸಾಹಿತ್ಯ, ಸಂಸ್ಕೃತಿಗಳ ಮೇಲೆ ಹೆಚ್ಚಿನ ಮಾಹಿತಿ ದೊರಕುವುದಿಲ್ಲ. ಆದರೆ ಹಸಲರು ಬುಡಕಟ್ಟಿನ ಮೇಲೆ ಪ್ರಾಥಮಿಕ ಮಾಹಿತಿ ನೀಡಬಲ್ಲ ಗ್ರಂಥ ಎಂಬುದರಲ್ಲಿ ಸಂದೇಹವಿಲ್ಲ.

ಇ. ಥರ್ಸ್ಟನ್ ಮತ್ತು ರಂಗಚಾರಿಯವರು ರಚಿಸಿದ "ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸೌತ್ ಇಂಡಿಯಾ" ಎಂಬ ಗ್ರಂಥದಲ್ಲಿ ಹಸಲರು ಬುಡಕಟ್ಟಿನ ಬಗ್ಗೆ ಮಾಹಿತಿಯಿದೆ.

೧೯೬೧ರ ಜನಗಣತಿಯನ್ನ ಆಧರಿಸಿ ಸರ್ಕಾರ ಪ್ರಕಟಿಸಿದ "ಎಥ್ನಾಜಿಕಲ್ ನೋಟ್ಸ್ ಆಫ್ ಷೆಡ್ಯೂಲ್ಡ್ ಟ್ರೈಬ್ಸ್" ಎಂಬ ಗ್ರಂಥದಲ್ಲಿ ಹಸಲರು ಬುಡಕಟ್ಟಿನ ಬಗ್ಗೆ ಸುಮಾರು ಇಪ್ಪತ್ತು ಪುಟಗಳಷ್ಟು ವಿವರಗಳಿವೆ. ಇದು ಜನಗಣತಿ ಸಂದರ್ಭದಲ್ಲಿ ಕ್ಷೇತ್ರಕಾರ್ಯದ ಬಳಿಕ ರೂಪಗೊಂಡ ವರದಿ. ಹಸಲರು ಬುಡಕಟ್ಟಿನ ಮೂಲ, ಜನಸಂಖ್ಯೆ ಅವರ ಶಾರೀರಕ ಗುಣಗಳು, ಕುಟುಂಬ, ವೇಷಭೂಷಣ, ಆಭರಣ, ಆಹಾರ, ಪಾನೀಯ, ಗೃಹೋಪಕರಣಗಳು, ಭಾಷೆ, ಆರೋಗ್ಯ, ಪರಿಸರ, ಆರ್ಥಿಕ ಜೀವನ ಧಾರ್ಮಿಕ ಆಚರಣೆ, ಸಾಮಾಜಿಕ ಸುಧಾರಣೆಗಳ ಬಗ್ಗೆ ಸಮಗ್ರ ಮಾಹಿತಿ ಇದೆ.

೧೯೮೫-೯೦ರಲ್ಲಿ ಎಥ್ನಾಲಿಜಿಕಲ್ ಸರ್ವೆಯನ್ನು ಅವಲಂಬಿಸಿ ಪೀಪಲ್ಸ್ ಆಫ್ ಇಂಡಿಯಾ ಸರಣಿಯಲ್ಲಿ ಕೆ.ಎಸ್.ಸಿಂಗ್ ಸಂಪಾದಿಸಿರುವ ನ್ಯಾಷನಲ್ ಸೀರೀಸ್ ಆಫ್ ಕಮ್ಯುನಿಟೀಸ್ ಡಿಸ್ಕ್ರಿಪ್ಟ್ಯೂ, ಸಂಪುಟ ೨ರಲ್ಲಿ ಹಸಲರು ಬುಡಕಟ್ಟಿನ ಬಳಿ ಅವರು ಅನುಸರಿಸಿರುವ ಅಳಿಯ ಸಂತಾನದ ಕಾನೂನು, ಸರ್ಕಾರದ ಯೋಜನೆಯಿಂದ ಅವರು ಪಡೆದ ಇವುಗಳನ್ನು ವಿಶ್ಲೇಷಣೆ ಮಾಡಲಾಗಿದೆ. ಕೆ.ಪಿ. ಕೊಪ್ಪಡ್ ಅವರ ಜನಗಣತಿ ಆಧಾರದಿಂದ ಹಸಲರು ಬುಡಕಟ್ಟಿನ ಕುರಿತಂತೆ ಸ್ವಲ್ಪ ಮಾಹಿತಿ ನೀಡಿದ್ದಾರೆ.

ಜೆ.ಎಚ್. ಹಟ್ಟನ್ ಅವರ ಕ್ಯಾಸ್ಟ್ ಆಫ್ ಇಂಡಿಯಾ(೧೯೫೧) ದಲ್ಲಿಯೂ ಹಸಲರು ಬುಡಕಟ್ಟಿನ ಬಗ್ಗೆ ಮಾಹಿತಿ ಇದೆ. ೧೯೧೧ರ ಜನಗಣತಿ ೧೧ನೇ ಸಂಪುಟ, ಮೈಸೂರು, ಭಾಗ-೧ರಲ್ಲಿ ಹಸಲರು ಬುಡಕಟ್ಟಿನ ಬಗ್ಗೆ ಒಂದು ಪುಟದೊಷ್ಟು ಮಾಹಿತಿಯಿದೆ. ಎ.ಪಿ. ಲೂಯಿಸ್ ಅವರು ಪ್ರಕಟಿಸಿರುವ ಟ್ರೈಬ್ಸ್ ಆಫ್ ಮೈಸೂರು ಎಂಬ ಗ್ರಂಥದಲ್ಲಿ ಹಸಲರು ಬುಡಕಟ್ಟಿನ ಕುರಿತು ಉಲ್ಲೇಖಿಸಲಾಗಿದೆ. ೧೯೦೧ರಲ್ಲಿ ಪ್ರಕಟವಾದ ಮದ್ರಾಸ್ ಜನಗಣತಿ ವರದಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಹಸಲರು ಬುಡಕಟ್ಟಿನ ಬಗ್ಗೆ ಮಾಹಿತಿಗಳಿವೆ.

ಕರ್ನಾಟಕ ರಾಜ್ಯ ಗೆಜೆಟಿಯರ್ ಮೊದಲನೆಯ ಭಾಗದಲ್ಲಿ ಹಸಲರು ಹಿಂದಿನ ಕಾಲದಲ್ಲಿ ಅರಣ್ಯ ಪ್ರದೇಶಗಳಲ್ಲಿ ಆಹಾರ ಹುಡುಕತ್ತಾ ಅಲೆಯುತ್ತಿದ್ದ ಒಂದು ಪ್ರತ್ಯೇಕ ಬುಡಕಟ್ಟು ಆಗಿದ್ದರಬಹುದೆಂದು ಹೇಳಲಾಗಿದೆ. ಸರ್ಕಾರ ಪ್ರಕಟಿಸಿರುವ ಉತ್ತರ ಕನ್ನಡ, ದಕ್ಷಿಣ ಕನ್ನಡ,

ಚಿಕ್ಕಮಗಳೂರು, ಬೆಳಗಾವಿ, ಧಾರವಾಡ, ಶಿವಮೊಗ್ಗ ಮತ್ತು ಬಳ್ಳಾರಿ ಜಿಲ್ಲಾ ಗೆಜೆಟಿಯರಗಳಲ್ಲಿ ಹಸಲರು ಬುಡಕಟ್ಟಿನ ಬಗ್ಗೆ ಮಾಹಿತಿ ಲಭ್ಯವಾಗುತ್ತದೆ.

೧೯೭೭ರಲ್ಲಿ ಕರ್ನಾಟಕದ ಹಿಂದುಳಿದ ಜಾತಿ ಮತ್ತು ಬುಡಕಟ್ಟುಗಳನ್ನು ಅಧ್ಯಯನ ನಡೆಸಿ ಎಲ್.ಜಿ. ಹಾವನೂರು ಸಿದ್ದಪಡಿಸಿದ ಕರ್ನಾಟಕದ ಪ್ರಥಮ ಹಿಂದುಳಿದ ಆಯೋಗದ ವರದಿಯಲ್ಲಿಯೂ ಹಸಲರು ಬುಡಕಟ್ಟನ್ನು ಉಲ್ಲೇಖಿಸಲಾಗಿದೆ.

ಡಾ. ಚಂದ್ರಶೇಖರ ಕಂಬಾರರ ಸಂಪಾದಕತ್ವದಲ್ಲಿ ಕನ್ನಡ ಸಾಹಿತ್ಯ ಪರಿಷತ್ತ್‌ನವರು ಹೊರತಂದ ಕನ್ನಡ ಜಾನಪದ ವಿಶ್ವಕೋಶದ ಎರಡನೆಯ ಅಧ್ಯಯನದಲ್ಲಿ(೧೯೮೫) ಹಸಲರು ಬುಡಕಟ್ಟಿನ ಬಗ್ಗೆ ಸಾಕಷ್ಟು ಮಾಹಿತಿಯನ್ನು ನೀಡಿದ್ದಾರೆ.

ಪಿ. ಕಮಲಾಕ್ಷಮ್ಮ ಅವರು ಬರೆದಿರುವ ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಗಿರಿಜನ ಸಾಮಾಜಿಕ ಇತಿಹಾಸ ಎಂಬ ಪುಸ್ತಕದಲ್ಲಿ (೧೯೬೮) ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ಸುತ್ತಮುತ್ತಲಿನ ಹಸಲರು ಬುಡಕಟ್ಟಿನ ಬಗ್ಗೆ ಮಾಹಿತಿ ಇದೆ. ಕಾಡಿನ ಉತ್ಪನ್ನಗಳನ್ನು ಸಂಗ್ರಹಿಸುವುದು, ಮರ ಕಡಿಯುವುದು ಇವರ ಉದ್ಯೋಗ ಎನ್ನಲಾಗಿದೆ. ಸರಳ ವಿವಾಹ ಪದ್ಧತಿಯು, ಅವರು ಆರಾಧಿಸುವ ದೈವಗಳು, ಉಡುಗೆ ತೊಡಗೆಗಳ ಬಗ್ಗೆ ಪರಿಚಯವಿದೆ.

ಬೆಂಗಳೂರಿನ ಐ.ಬಿ.ಎಚ್.ಪ್ರಕಾಶನದವರು ಪ್ರಕಟಿಸಿರುವ ಜಿ.ಎಸ್.ಭಟ್ ಬರೆದಿರುವ ಕಿರುಹೊತ್ತಿಗೆ ಹಸಲರು ಮತ್ತು ಇದೇ ಲೇಖಕರು ಕರ್ನಾಟಕ ಸಾಹಿತ್ಯ ಆಕಾಡೆಮಿಯ ಉಪಸಂಸ್ಕೃತಿ ಯೋಜನೆಗೆ ಬರೆದ ಹಸಲರು ಬುಡಕಟ್ಟಿನ ಸಂಸ್ಕೃತಿ ಸಾಕಷ್ಟು ಮಾಹಿತಿಗಳನ್ನು ನೀಡುವಂತಹ ಪುಸ್ತಕಗಳು. ಕರ್ನಾಟಕ ರಾಜ್ಯ ವಯಸ್ಕರ ಸಮಿತಿಯವರು ಪ್ರಕಟಿಸಿರುವ ಎನ್. ಹುಚ್ಚಪ್ಪ ಮಾಸ್ತ್‌ರವರ ಹಸಲರು ಎಂಬ ಕಿರುಹೊತ್ತಿಗೆ ಹಸಲರು ಬುಡಕಟ್ಟಿನ ಜೀವನವನ್ನು ಹೊಸದಾಗಿ ಓದು ಕಲಿತ ನವಸಾಕ್ಷರರಿಗೆ ಪರಿಚಯಿಸುತ್ತದೆ.

ಡಾ. ಎನ್.ಆರ್. ನಾಯಕರ್‌ರವರ ಮಹಾಪ್ರಬಂಧ ಕಾರವಾರ ಜಿಲ್ಲೆಯ ಜನಪದ ಗೀತೆಗಳು ಗ್ರಂಥದಲ್ಲಿ ಹಸಲರು ಹೇಳುವ ಭಿಂಗಿ ಪದಗಳನ್ನು ಕುರಿತು ಉಲ್ಲೇಖಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು ಪ್ರಕಿಸಿರುವ ಕರ್ನಾಟಕ ಜನಪದ ಕಲೆಗಳು ಗ್ರಂಥದಲ್ಲಿ ಹಸಲರು ಬುಡಕಟ್ಟಿನ ಭಿಂಗಿ ಪದಗಳ ಬಗ್ಗೆ ಮಾಹಿತಿಯಿದೆ. ಹಂಪೆಯ ಕನ್ನಡ ವಿಶ್ವವಿದ್ಯಾಲಯದವರು ಪ್ರಕಟಿಸಿರುವ ಕರ್ನಾಟಕ ಜನಪದ ಕಲೆಗಳ ಕೋಶ (೧೯೯೬) ದಲ್ಲಿ ಹಸಲರು ಹಬ್ಬ ಹಾಡುವ ಸಂಪ್ರದಾಯ ಮತ್ತು ಹಾಡುಗಳನ್ನು ಕುರಿತು ಪ್ರಸ್ತಾಪ ಮಾಡಿದ್ದಾರೆ. ಉದಾಯವಾಣಿ ದಿನಪತ್ರಿಕೆಯಲ್ಲಿ ೧೯೮೬ ಡಿಸೆಂಬರ್ ೧೪ರಂದು ಪ್ರಕಟವಾದ ನಾ. ಡಿಸೋಜರವರು ಕತ್ತಲೆಯಿಂದ ಬಳಕಿಗೆ ಹಸಲರು ಎಂಬ ಲೇಖನದಲ್ಲಿ ಹಸಲರು ಬುಡಕಟ್ಟಿನ ಪುನರ್ವಸತಿ, ಆಶ್ರಮ ಶಾಲೆ, ಹಸಲರು ಬುಡಕಟ್ಟಿನ ಅಭಿವೃದ್ಧಿ ಬಗ್ಗೆ ಸರ್ಕಾರದ ಯೋಜನೆಗಳ ಸಫಲತೆ–ವಿಫಲತೆಗಳ ಬಗ್ಗೆ ಪ್ರಸ್ತಾಪ ಮಾಡಿದ್ದಾರೆ.

ಮಾವಿನಕುಳಿ ಶ್ರೀನಿವಾಸ ಅವರು ೧೯೭೭ ಡಿಸೆಂಬರ್ ೧೦ರಂದು ಪ್ರಜಾವಾಣಿಯಲ್ಲಿ ಬರೆದ ಮಲೆನಾಡಿನ ಆಚರಣೆಗಳು ಎಂಬ ಲೇಖನದಲ್ಲಿ ಹಸಲರು ಬುಡಕಟ್ಟಿನ ಪೌರಾಣಿಕ ಹಿನ್ನೆಲೆ, ಧಾರ್ಮಿಕ ಆಚರಣೆಗಳು, ಜನಪದ ವೈದ್ಯ, ಶಿಕಾರಿಯನ್ನು ಕುರಿತಂತೆ ಮಾಹಿತಿಗಳು ಇವೆ. ಆದರೆ ಈ ಲೇಖನದಲ್ಲಿ ಸಾಕಷ್ಟು ತಪ್ಪುಗಳಿವೆ. ಗಾಂಧೀಜಿಯವರು ಹಿರೇಮನೆಗೆ ಭೇಟಿ ನೀಡಿದ್ದು ಮತ್ತು ಇವರ ಭಾಷೆ ಮರಾಠಿ ಎಂದು ಬರೆದದ್ದು ತಪ್ಪು. ಗಾಂಧೀಜಿಯವರು ಯಾವಾಗಲೂ ಹಿರೇಮನೆಗೆ ಭೇಟಿ ನೀಡಿಲ್ಲ ಮತ್ತು ಹಸಲರು ಬುಡಕಟ್ಟಿನ ಭಾಷೆ ಕನ್ನಡ, ದಕ್ಷಿಣ ಕನ್ನಡ, ಚಿಕ್ಕಮಗಳೂರು ಜಿಲ್ಲೆಗಳ ಹಸಲರು ತುಳು ಮಾತಾನಾಡುತ್ತಾರೆ.

ಹಸಲರು ಬುಡಕಟ್ಟಿನ ಜನಪದ ಸಾಹಿತ್ಯವನ್ನು ಕುರಿತು ಇದುವರೆಗೂ ಸಮಗ್ರವಾದ ಅಧ್ಯಯನ ನಡೆದಿಲ್ಲ. ಜಾನಪದ ವಿದ್ವಾಂಸರಾದ ಡಾ. ಎಲ್. ಆರ್. ಹೆಗಡೆಯವರು ಪ್ರಕಟಿಸಿರುವ ಓಗಟುಗಳು ಮತ್ತು ಕಥೆಗಳು ಎಂಬ ಪುಸ್ತಕದಲ್ಲಿ ಹಸಲರು ಬುಡಕಟ್ಟಿನ ಪದರೂಪದ ಒಗಟುಗಳನ್ನು ಸಂಗ್ರಹಿಸಿದ್ದಾರೆ.

ಜಿ.ಎನ್. ಮೋಹನ್‌ರವರು ಹಸಲರು ಬುಡಕಟ್ಟಿನ ಬದುಕಿನ ಕೈದೀಪ ಎಂಬ ಪುಟ್ಟ ಲೇಖನವನ್ನು ಪ್ರಜಾವಾಣಿಯಲ್ಲಿ ಬರೆದಿದ್ದಾರೆ. ಹಸಲರು ಬುಡಕಟ್ಟಿನ ಜೀತ, ಅಡಿಕೆ ತೋಟದಲ್ಲಿ ಮತ್ತು ಮರ ಹತ್ತುವ ಕೌಶಲ್ಯ, ಮರದಿಂದ ಮರಕ್ಕೆ ಜಿಗಿಯುವ ಸಹಾಸವನ್ನು ಪ್ರಸ್ತಾಪ ಮಾಡಿದ್ದಾರೆ.

ಕುಂದಾಪುರ ಭಂಡಾರ್‌ಕರ್ ಕಾಲೇಜಿನ ವಾರ್ಷಿಕಾಂತ ದರ್ಶನದಲ್ಲಿ ಮಡಾಮಕ್ಕಿ ಶಶಿಧರ ಶೆಟ್ಟಿ ಅವರು ಮಲೆಯ ಮಕ್ಕಳು ಹಸಲರು ಎಂಬ ಲೇಖನವನ್ನು ಬರೆದಿದ್ದಾರೆ. ಈ ಲೇಖನದಲ್ಲಿ ಕುಂದಾಪುರ, ಕೊಲ್ಲೂರು ಮಡಾಮಕ್ಕಿ ಪ್ರದೇಶಗಳಲ್ಲಿ ವಾಸಿಸುವ ಹಸಲರು ಬುಡಕಟ್ಟಿನ ಧಾರ್ಮಿಕ ಆಚರಣೆ, ಹವ್ಯಾಸ ಮತ್ತು ನೈರ್ಮಲ್ಯ ಕುರಿತು ತಿಳಿಸಿದ್ದಾರೆ.

ದೀಪಕ್ ಸಾಗರವರು ೧೯೯೬ ಸೆಪ್ಟೆಂಬರ್ ೨೨ರ ಸುಧಾ ವಾರಪತ್ರಿಕೆಯಲ್ಲಿ ಹಸನು ಬದುಕಿನ ಹೊಂಗನಸಿನಲ್ಲಿ ಹಸಲರು ಮತ್ತು ಸೆಪ್ಟೆಂಬರ್ ೨೮ರ ಡೆಕ್ಕನ್ ಹೆರಾಲ್ಡ ಪತ್ರಿಕೆಯಲ್ಲಿ ಹಸಲ್ಸ್ ಆಫ್ ಮಲ್‌ನಾಡ್ ಎಂಬ ಎರಡು ಲೇಖನಗಳನ್ನು ಬರೆದಿದ್ದಾರೆ. ಈ ಲೇಖನಗಳಲ್ಲಿ ಹಸಲರು ಬುಡಕಟ್ಟಿನ ಜೀವನ, ಪಂಗಡ, ಉದ್ಯೋಗ ಇತ್ಯಾದಿ ವಿಷಯಗಳ ಕುರಿತು ಮಾಹಿತಿ ನೀಡಿದ್ದಾರೆ.

### ೪.೧. ಶಿವಮೊಗ್ಗ ಜಿಲ್ಲೆಯಲ್ಲಿರುವ ಹಸಲರು

ಬುಡಕಟ್ಟು ಸಮುದಾಯವನ್ನು ಹೊಂದಿರುವ ವಿಶ್ವದ ರಾಷ್ಟ್ರಗಳಲ್ಲಿ ದಕ್ಷಿಣ ಆಫ್ರಿಕಾ ದೇಶವನ್ನು ಬಿಟ್ಟರೇ ಭಾರತ ದೇಶವು ಎರಡನೆಯ ರಾಷ್ಟ್ರವೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ೨೦೧೧ರ ಜನಗಣತಿಯ ಪ್ರಕಾರ ದೇಶದ ಒಟ್ಟು ಜನಸಂಖ್ಯೆಯ ಶೇ. ೯.೫ರಷ್ಟು ಬುಡಕಟ್ಟು ಜನಸಂಖ್ಯೆ ನಮ್ಮ ದೇಶದಲ್ಲಿ ಕಂಡು ಬರುತ್ತದೆ. ಬುಡಕಟ್ಟುಗಳ ಬಗ್ಗೆ ನಿರ್ದಿಷ್ಟವಾದ ವ್ಯಾಖ್ಯಾನ ನೀಡುವಲ್ಲಿ ಬಹಳಷ್ಟು ಸಾಮಾಜಶಾಸ್ತ್ರಜ್ಞರು ಅಸಮರ್ಥರಾಗಿದ್ದಾರೆ. ಆದರೂ ಅವರು ತಮ್ಮದೇ ಆದ ಜೀವನ ಶೈಲಿ ಸಂಪ್ರಾದಾಯಕ ಆಚರಣೆಗಳ ಅನುಕರಣೆ ವೇಷಭೂಷಣ ಮುಂತಾದ ವಿಷಯಗಳಲ್ಲಿ ವಿಭಿನ್ನ

ವ್ಯಾಖ್ಯಾನ ನೀಡಿರುವುದು ಕಂಡು ಬಂದಿದೆ. ಪ್ರಮುಖ ಸಂಶೋಧಕರಾದ ಹರ್ಬರ್ಟ್ ರಿಸ್ಲೆ ವೆರಿಯರ್ ಎಲವಿನ್ ಥಕ್ಕರ್ ಬಾಪಾರವರು ತಿಳಿಸಿರುವಂತೆ ಬುಡಕಟ್ಟುಗಳು ಭಾರತದ ಮೂಲ ನಿವಾಸಿಗಳೆಂದ್ದಿದ್ದಾರೆ. ಹರ್ಬರ್ಟರವರು ಇವರನ್ನು ಪ್ರಾಚೀನ ಬುಡಕಟ್ಟುಗಳು ಎಂದು ವ್ಯಾಖ್ಯಾನಿಸಿದ್ದಾರೆ. ಬುಡಕಟ್ಟುಗಳು ಭಾರತದ ಮೂಲ ನಿವಾಸಿಗಳು ಹಾಗೂ ಹಿಂದುಳಿದ ಹಿಂದೂಗಳು ಸಹ ಆಗಿರುತ್ತಾರೆ.

ಬುಡಕಟ್ಟು ಸಮೂಹದಲ್ಲಿ ಹಸಲರು ಬುಡಕಟ್ಟು ಒಂದು ಸಮೂಹವಾಗಿದ್ದು ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರಿದ ಒಂದು ಬುಡಕಟ್ಟು ಸಮುದಾಯ ಎಂದೇ ಹೇಳಬಹುದು. ಕರ್ನಾಟಕ ಸರ್ಕಾರ ದಿವಂಗತ ದೇವರಾಜು ಅರಸುರವರ ನೇತೃತ್ವದಲ್ಲಿ ಹಸಲರು ಬುಡಕಟ್ಟು ಸಮುದಾಯವನ್ನು ಸಮಾಜದ ಮುಖ್ಯವಾಹಿನಿಗೆ ತರಲು ಹಾಗೂ ಅವರನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸಿ ಸಕಲ ಸಂವಿಧಾನಾತ್ಮಕ ಸವಲತ್ತುಗಳನ್ನು ನೀಡಲು ಸಹಕರಿಸಿತು. ಆದರೆ ಅವರ ಆಚಾರ ವಿಚಾರ ರೂಢಿ ಸಂಪ್ರದಾಯ, ಧಾರ್ಮಿಕ ವಿಧಿವಿಧಾನ, ಭಾಷೆ, ವೈವಾಹಿಕ ಪದ್ದತಿ ಇವುಗಳನ್ನೆಲ್ಲಾವನ್ನು ನೋಡಿದಾಗ ಶಿವಮೊಗ್ಗ ಜಿಲ್ಲೆಯಲ್ಲಿರುವ ಹಸಲರು ಬುಡಕಟ್ಟು ಸಮುದಾಯ ಮೂಲತಃ ಬುಡಕಟ್ಟಿನವರೇ ಆಗಿದ್ದು, ಅವರ ಚಾರಿತ್ರಿಕ, ಸಂಪ್ರದಾಯಿಕ ಹಿನ್ನೆಲೆಯನ್ನು ಮಾನವಶಾಸ್ತ್ರೀಯ ದೃಷ್ಟಿಕೋನದ ಮೂಲಕ ಸ್ಥೂಲ ಪರಿಚಯ ಮಾಡಿಕೊಳ್ಳುವುದು. ಈ ಸಂಶೋಧನಾ ಅಧ್ಯಯನದ ದೃಷ್ಟಿಯಲ್ಲಿ ಸೂಕ್ತವೆನಿಸುತ್ತದೆ. ಈ ಜಗತ್ತಿನ ಪ್ರತಿಯೊಂದು ಮಾನವ ಜನಾಂಗದ ಸೃಷ್ಟಿಯಂತೆ ಹಸಲರು ಬುಡಕಟ್ಟಿನ ಸೃಷ್ಟಿಯಾಗಿರುತ್ತದೆ. ಹಸಲರು ಬುಡಕಟ್ಟಿನ ಮೂಲತಃ ಗುಂಪು ಜೀವನ ನಡೆಸುವ ಜನಾಂಗವಾಗಿದೆ. ಮೊದಮೊದಲು ಬೇಕೆಂದಾಗ ಬಟ್ಟೆಗಳ ಡೇರುಗಳನ್ನು ತಮಗೆ ಅನುಕೂಲವಾದಲ್ಲಿ ಸಾಗಿಸಿ ಅದನ್ನೆ ತಮ್ಮ ತಾತ್ಕಲಿಕ ವಾಸ ಸ್ಥಳವನ್ನಾಗಿ ಮಾಡಿಕೊಂಡಿದ್ದಾರೆ. ಕಾಲ ಬದಲಾದಂತೆ ಗುಡಿಸಲುಗಳನ್ನು ಕಟ್ಟಿಕೊಂಡು ಹಾಡಿಗಳಲ್ಲಿ ವಾಸ ಮಾಡುತ್ತಿದ್ದಾರೆ. ಹಸಲರು ವಾಸಿಸುವ ಜಾಗವನ್ನು ಅಥವಾ ಗುಂಪು ಜೀವನವನ್ನು ನಡೆಸುವ ಸಮೂಹವನ್ನು ಜೀವನ ಪದ್ದತಿಯನ್ನು ಹಾಡಿಗಳೆಂದು ಕರೆಯುತ್ತಾರೆ. ಸಾಮಾನ್ಯವಾಗಿ ಹಳ್ಳಿ ಅಥವಾ ಗ್ರಾಮಗಳಲ್ಲಿ ಕಾಡು ಮೇಡು, ಕೊಳ್ಳ ಕಣಿವೆ, ಗುಡ್ಡಗಾಡುಗಳಲ್ಲಿ ಈ ಸಮುದಾಯ ಶಿವಮೊಗ್ಗ ಜಿಲ್ಲೆಯಲ್ಲಿ ನೆಲೆಸಿದೆ. ಶಿವಮೊಗ್ಗ ಜಿಲ್ಲೆಯಲ್ಲಿರುವ ಹಸಲರು ಬುಡಕಟ್ಟಿನ ಸಮುದಾಯವು ಪೂರ್ವ ಕಾಲದಿಂದಲೂ ತನ್ನದೇ ಆದ ಸಂಪ್ರಾದಾಯದೊಂದಿಗೆ ಗುಂಪು ಜೀವನವನ್ನು ನಡೆಸುತ್ತಿದೆ. ಬುಡಕಟ್ಟು ಸಮುದಾಯಗಳೇ ಹೆಚ್ಚಾಗಿರುವ ಶಿವಮೊಗ್ಗದಲ್ಲಿ ಹಸಲ ಬುಡಕಟ್ಟು ತನ್ನದೇ ಆದ ಕೃಷಿ ಚಟುವಟಿಕೆ ಸಾಮಾಜಿಕ ಕಟ್ಟುಪಾಡುಗಳು ನಂಬಿಕೆ, ವಿಧಿ ನಿಷೇಧಗಳು, ಸಾಂಸ್ಕೃತಿಕ ಆಚರಣೆಗಳು, ಹಬ್ಬ ಹರಿದಿನಗಳು, ಜಾತ್ರೆ ಉತ್ಸಾವಗಳೊಂದಿಗೆ ಕೌಟಂಬಿಕ ಜೀವನ ಪದ್ಧತಿಯೊಂದಿಗೆ ಬದುಕನ್ನು ಸಾಗಿಸುತ್ತಿದೆ. ಈ ಸಮುದಾಯ ಶಿಕ್ಷಣದಿಂದ ವಂಚಿತವಾಗಿದ್ದು ಅನಕ್ಷರತೆ ಮತ್ತು ಕಡುಬಡತನ, ಆನಾರೋಗ್ಯ, ಕೃಷಿ, ಕೂಲಿ ಕೆಲಸ ಸರಕಾರದ ಸೌಲಭ್ಯಗಳಿಂದ ವಂಚಿತವಾದ ಬದುಕು ಸಂಘಟನೆಯ ಕೊರತೆ ಹೋರಾಟವಿಲ್ಲದ ಜೀವನ ಮತ್ತು ಇನ್ನಿತರ ಮೂಲಭೂತ ಸೌಲಭ್ಯಗಳ ಕೊರತೆಯಿಂದ ಹಸಲರು ಬುಡಕಟ್ಟು ಶಿವಮೊಗ್ಗ ಜಿಲ್ಲೆಯಾದ್ಯಂತ

ಅಂದರೆ ಸೊರಬ, ಸಾಗರ, ಭದ್ರಾವತಿ, ಹೊಸನಗರ, ತೀರ್ಥಹಳ್ಳಿ ಮತ್ತು ಶಿವಮೊಗ್ಗದಲ್ಲಿ ಹಸಲರ ಸಮುದಾಯವು ತನ್ನ ಜೀವನವನ್ನು ಕಂಡುಕೊಂಡಿದೆ. ಶಿವಮೊಗ್ಗ ಜಿಲ್ಲೆಯಾದ್ಯಂತ ಹಸಲ ಬುಡಕಟ್ಟು ಜನಸಂಖ್ಯೆ ಅಂದಾಜು ಸುಮಾರು ೧೦,೦೦೦ ಕ್ಕಿಂತಲೂ ಜನಸಂಖ್ಯೆಯನ್ನು ಒಳಗೊಂಡಿದೆ. ಶಿವಮೊಗ್ಗದಲ್ಲಿ ಅತೀ ಹೆಚ್ಚಿನ ಸಂಖ್ಯೆಯಲ್ಲಿ ಹಸಲರು ಬುಡಕಟ್ಟಿನವರು ಇದ್ದಾರೆ. ಉದಾಹರಣೆಗೆ ಹಾಲಕೊಳ ಮತ್ತು ವಿನೋಬಾನಗರ ಶಿವಮೊಗ್ಗದ ಕಲ್ಯಾಣಿಚೌಕ ಮತ್ತು ಮಾಯನಗುಡ್ಡೆ ಗ್ರಾಮದಲ್ಲಿ ಹೆಚ್ಚಿನ ಹಸಲರು ಬುಡಕಟ್ಟಿನ ಕುಟುಂಬಗಳಿವೆ. ಶಿವಮೊಗ್ಗ ಜಿಲ್ಲೆಯ ೬೫ ಹಾಡಿಗಳಲ್ಲಿ ಈ ಸಮುದಾಯವು ಗುಂಪುಜೀವನವನ್ನು ನಡೆಸುತ್ತಿದೆ. ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನಲ್ಲಿ ಅಂದಾಜು ೩೩೬ ಹಸಲರು ಬುಡಕಟ್ಟಿನ ಕುಟುಂಬಗಳು ಜೀವನವನ್ನು ಸಾಗಿಸುತ್ತಿವೆ. ಹಸಲರು ಬುಡಕಟ್ಟು ವಾಸಿಸುವ ಗ್ರಾಮಗಳು ಬೆಳ್ಳಣ್ಣೆ, ಜಡೆಗದ್ದೆ, ಗಿಣಿಗಾರು, ಹಂಸಗಾರು, ಮರಣಕುಳಿ, ಕಾಂತೋಟ, ಕ್ವಾಟ್‌ಸೇರು, ಕಂಡಿಕಾ, ಹುಳಿಗಾರು ಮೇಲಿನ ಗೊಳಗೋಡು, ಕೆಳಗಿನ ಗೊಳಗೋಡು, ಜಿಜೀಗಾರು, ಸೆಟ್ಟಿಸೇರು, ಕರ್ಕಿಕೊಪ್ಪ, ಹಕ್ಕರೇ, ಗುಗೋಳು-ಇವೆಲ್ಲವುಗಳನ್ನು ಗ್ರಾಮ ಅಥವಾ ಹಾಡಿಗಳೆಂದು ಕರೆಯುತ್ತಾರೆ. ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿಯ ಗ್ರಾಮೀಣ ಭಾಗದಲ್ಲಿ ಉದಾಹರಣೆಗೆ ಕನ್ನಂಗಿ, ಶಿಲೆಕೋನೆ, ಹೊಗೆಹಕ್ಕಲು, ಕಳ್ಳಿಗದ್ದೆ, ದಿಂಡಾ, ಮೇಗರಳ್ಳಿ, ಕೊಂಡ್ಲೂರು, ಸಂತೆಕೊಪ್ಪ, ಕುಡುತಾಕಾರು, ಜಿಗಳೂರು, ಕಾನಮನೆ, ಗುರುಲುಕೊಪ್ಪ ಇತ್ಯಾದಿ ಗ್ರಾಮಗಳಲ್ಲಿ ಅಥವಾ ಹಾಡಿಗಳಲ್ಲಿ ಹಸಲರು ಗುಂಪು ಜೀವನವನ್ನು ನಡೆಸುತ್ತಿವೆ. ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲೂಕಿನ ಗ್ರಾಮಗಳಲ್ಲಿ ಒಟ್ಟು ೫೫೮ ಕುಟುಂಬಗಳು ಇವೆ. ಇನ್ನೂ ಹೊಸನಗರ ತಾಲೂಕಿನ ನಗರ ಪ್ರದೇಶದಲ್ಲಿ ೧೦ ಕುಟುಂಬಗಳು ತಮ್ಮ ಜೀವನವನ್ನು ನಡೆಸುತ್ತಿವೆ. ಅಲ್ಲದೇ ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನಲ್ಲಿ ೩೭೫ ಕುಟುಂಬಗಳು ನಗರ ಮತ್ತು ಗ್ರಾಮ ಭಾಗದಲ್ಲಿ ಜೀವನವನ್ನು ನಡೆಸುತ್ತಿವೆ. ಸೊರಬ ತಾಲೂಕಿನಲ್ಲಿ ಮಾತ್ರ ಹಸಲರು ಕೆಲವರು ಲಾಯರ್, ನರ್ಸ, ವಿವಿಧ ಸರ್ಕಾರಿ ಉದ್ಯೋಗದಲ್ಲಿದ್ದಾರೆ. ಇನ್ನೂ ಅಲ್ಪ ಸ್ವಲ್ಪ ಓದಿರುವ ಹಸಲರು ಯುವಕರು ಕಾರು, ಬೈಕು, ಟ್ರಾಕ್ಟರ್, ಆಟೋ-ಇನ್ನಿತರ ವಾಹನಗಳನ್ನು ಹೊಂದಿದ್ದಾರೆ. ನಾಲ್ಕೈದು ಜನರು ನೀರಾವರಿ ಜಮೀನುಗಳನ್ನು ಹೊಂದಿ ಶ್ರೀಮಂತರಾಗಿದ್ದಾರೆ. ಉದಾ ಹಿರೆಯಣಪ್ಪ ಸುಮಾರು ೩೦ ಎಕರೆ ನೀರಾವರಿ ಜಮೀನನ್ನು ಹೊಂದಿದ್ದಾರೆ. ಕೃಷಿ ಕೂಲಿ ಆಳುಗಳು ಸಂಖ್ಯಾ ಹಸಲರಲ್ಲಿ ಹೆಚ್ಚಿನ ಮಟ್ಟದಲ್ಲಿ ಇದೆ.

ಶಿವಮೊಗ್ಗ ಜಿಲ್ಲೆಯಲ್ಲಿ ನೆಲೆಸಿರುವ ಹಸಲರು ಬುಡಕಟ್ಟಿನ ಸಮುದಾಯದ ಮೂಲ ವೃತ್ತಿ ಕೃಷಿಕೂಲಿ. ಪುರುಷರು ಅಡಿಕೆ ಬಿಡಿಸಲು, ಅಡಿಕೆ ಮರ ಏರುವ ವೃತ್ತಿಯಲ್ಲಿ ತೊಡಗಿಕೊಂಡರೆ, ಮಹಿಳೆಯರು ಅಡಿಕೆ ಸುಲಿಯುವ, ಕಳೆ ಕೀಳುವ ನಿರತರಾಗಿರುತ್ತಾರೆ. ಗಂಡು ಆಳು ಕೂಲಿ ೧ ದಿನಕ್ಕೆ ರೂ. ೪೦೦. ಹೆಣ್ಣು ಆಳು ಕೂಲಿ ೧ ದಿನಕ್ಕೆ ರೂ. ೧೫೦ ಆಗಿರುತ್ತದೆ. ಸಾಗರ ತಾಲೂಕಿನಲ್ಲಿ ಬ್ರಾಹ್ಮಣರ ಅಡಿಕೆ ಹೊಲ ಗದ್ದೆಗಳಲ್ಲಿ ಅಡಿಕೆ ಮರ ಏರುವುದು ಮತ್ತು ಅಡಿಕೆ

ಸುಲಿಯುವ ಕೆಲಸ, ಶಿಕಾರಿಪುರ ತಾಲೂಕಿನಲ್ಲಿ ಲಿಂಗಾಯತರ ಹೊಲಗದ್ದೆಗಳಲ್ಲಿ ಅಡಿಕೆ ಮರ ಏರುವುದು ಮತ್ತು ಅಡಿಕೆ ಸುಲಿಯುವ ಕೆಲಸ, ಸೊರಬ ತಾಲೂಕಿನಲ್ಲಿ ಈಡಿಗರ ಹೊಲಗದ್ದೆಗಳಲ್ಲಿ ಅಡಿಕೆ ಮರ ಏರುವುದು ಮತ್ತು ಅಡಿಕೆ ಸುಲಿಯುವ ಕೆಲಸ ತೀರ್ಥಹಳ್ಳಿ ತಾಲೂಕಿನಲ್ಲಿ ನಾಮದಾರ ಗೌಡರ ಹೊಲಗದ್ದೆಗಳಲ್ಲಿ ಅಡಿಕೆ ಮರ ಏರುವುದು ಮತ್ತು ಅಡಿಕೆ ಸುಲಿಯುವ ಕೆಲಸ ಹೊಸನಗರ ತಾಲೂಕಿನಲ್ಲಿ ಬ್ರಾಹ್ಮಣ ಹೊಲಗದ್ದೆಗಳಲ್ಲಿ ಅಡಿಕೆ ಮರ ಏರುವುದು ಮತ್ತು ಅಡಿಕೆ ಸುಲಿಯುವ ಕೆಲಸ ಜೊತೆಗೆ ತರಕಾರಿ ಬಿಡಿಸುವುದು ಕಬ್ಬು ಕಡಿಯುವುದು ಭತ್ತ ಕೊಯ್ಯುವುದು ಬಾಳೆಗೊನೆ ಕಡಿಯುವುದು, ಏಲಕ್ಕಿ ಮೆಣಸು ಮತ್ತು ಶುಂಟಿ ಸಂಗ್ರಹಣೆ, ಕೂಲಿ ಕೆಲಸ ಹಸಲರು ಬುಡಕಟ್ಟಿನ ದುಡಿಮೆಯಾಗಿದೆ. ಬಡತನ ಮತ್ತು ಕಡುಬಡತನದಲ್ಲಿ ಬೆಂದಿರುವ ಹಸಲರು ಸರ್ಕಾರಿ ನಿರ್ಮಿತ ಜನತಾಮನೆಗಳಲ್ಲಿ ನೆಲೆಸಿದ್ದಾರೆ.

**೪.೨. ಬುಡಕಟ್ಟಿನ ಹೆಸರು**

"ಹಸಲ ಎಂಬುದು ಕನ್ನಡದ 'ಹಸುಳೆ; ಎಂಬುದರಿಂದ ಬಂದಿದೆ. ಹಸುಳೆ ಎಂದರೆ ಮಗು, ಹಸಲರ ಮುಗ್ಧತೆಯಿಂದಾಗಿಯೂ ಮತ್ತು ಇವರು ಸೇವಾಕಾರ್ಯದಲ್ಲಿ ತುಂಬಾ ಪ್ರಾಮಾಣಿಕ ರಾಗಿರುವುದರಿಂದಲೂ ಇವರನ್ನು ಹಸುಳೆಗಳೆಂದು ಕರೆದಿರಬಹುದು. ಇವರ ಭಾಷೆ ಕನ್ನಡ, ಶಿವಮೊಗ್ಗ, ಉತ್ತರಕನ್ನಡ ಜಿಲ್ಲೆಯ ಹಸಲರು ಕನ್ನಡ ಮಾತನಾಡುವರು, ಚಿಕ್ಕಮಗಳೂರು, ದಕ್ಷಿಣಕನ್ನಡ ಜಿಲ್ಲೆಯ ಹಸಲರು ಕನ್ನಡ ಭಾಷೆಯ ಜೊತೆಗೆ ತುಳು ಭಾಷೆಯನ್ನು ಮಾತನಾಡುತ್ತಾರೆ. ಹಸಲರು ಪಶ್ಚಿಮ ಮಲೆನಾಡಿನ ದಟ್ಟ ಅರಣ್ಯದಲ್ಲಿ ವಾಸವಾಗಿರುವ ಗುಡ್ಡಗಾಡು ಜನಾಂಗ ಎಂದು ೧೮೯೧ರ ಮೈಸೂರು ಜನಗಣತಿಯಲ್ಲಿ ಉಲ್ಲೇಖಿಸಲಾಗಿದೆ. ಇವರು ಆದಿಕರ್ನಾಟಕ, ಆದಿದ್ರಾವಿಡ ಜನಾಂಗದವರಿಗಿಂತ ಮೇಲಿನ ಉಲ್ಲೇಖಿಸಲಾಗಿದೆ. ಎಂದು ಹೇಳುತ್ತಾರೆ. ಹಸಲರ ಸಂಖ್ಯೆ ತುಂಬಾ ಕಡಿಮೆ. ಹಸಲರು ತುಂಬಾ ಶಕ್ತಿಶಾಲಿಗಳು, ಮಲೆನಾಡಿನ ಅಡಿಕೆ ತೋಟಗಳಲ್ಲಿ ಕೆಲಸ ಮಾಡಲು ದಕ್ಷಿಣಕನ್ನಡದಿಂದ ವಲಸೆ ಬಂದವರು ಎಂದು ಜನಗಣತಿಯಲ್ಲಿ ಹೇಳಲಾಗಿದೆ"[೧](ಹುಚ್ಚಪ್ಪ ಮಾಸ್ತರು, ಹಲಸರು, ಪು.೧, ೨೦೧೪) ೧೮೮೩ರ ಕೆನರಾ ಗೆಜೆಟಿಯರ್‌ನಲ್ಲಿ ಕ್ಯಾಂಪ್‌ಬೆಲ್ ೧೮೮೧ರ ಜನಗಣತಿ ಪ್ರಕಾರ ಹಸಲರು ಬುಡಕಟ್ಟಿನ ಸಂಖ್ಯೆ ೨,೬೯, ಹೊನ್ನಾವರ ತಾಲ್ಲೂಕುಗಳಲ್ಲಿ ಅಲ್ಲಲ್ಲಿ ವಾಸವಾಗಿದ್ದಾರೆ. ವಾಯುವ್ಯದ ಮೈಸೂರು ಪ್ರದೇಶದ ಶಿವಮೊಗ್ಗೆಯಿಂದ ವಲಸೆ ಬಂದರು ಎಂದು ಹೇಳಿದ್ದಾನೆ. ಆರ್. ಇ. ಎಂಥೋವನ್ 'ದಿ ಟ್ರೈಬ್ಸ್ ಅಂಡ್ ಕ್ಯಾಸ್ಟ್ ಆಫ್ ಬಾಂಬೆ' ಗ್ರಂಥದಲ್ಲಿ ಎರಡನೆಯ ಸಂಪುಟದಲ್ಲಿ ೧೯೦೧ರಲ್ಲಿ ಹಸಲರು ಬುಡಕಟ್ಟಿನ ಸಂಖ್ಯೆ ೨,೨೭೭ ಎಂದು ಉಲ್ಲೇಖಿಸಿದ್ದಾನೆ. ಅವರು ಶಿರಸಿ, ಹೊನ್ನಾವರ ಪ್ರದೇಶದಲ್ಲಿ ವಾಸಿಸುತ್ತಿದ್ದು ಅವರು ಊರ ಹೊರಗಿರುವ ಅಸ್ಪೃಶ್ಯರು, ಶಿವಮೊಗ್ಗ ಜಿಲ್ಲೆಯಿಂದ ಉತ್ತರಕನ್ನಡ ಜಿಲ್ಲೆಗೆ ವಲಸೆ ಬಂದಿರುವವರು. ಶಿವಮೊಗ್ಗ ಮತ್ತು ಉತ್ತರಕನ್ನಡ ಜಿಲ್ಲೆಯ ಹಸಲರು ಬುಡಕಟ್ಟಿನ ಸಂಪ್ರದಾಯಗಳಲ್ಲಿ ವ್ಯತ್ಯಾಸ ಕಾಣದು ಎಂದು ಅಭಿಪ್ರಾಯಪಟ್ಟಿದ್ದಾನೆ. ಹಿಂದೆ ಉತ್ತರಕನ್ನಡ ಜಿಲ್ಲೆ ಮುಂಬಯಿ ಪ್ರಾಂತ್ಯಕ್ಕೆ

ಸೇರಿದ್ದರಿಂದ ಈ ಜಿಲ್ಲೆಯ ಹಸಲರು ಬುಡಕಟ್ಟಿನ ಸಂಖ್ಯೆಯು ಇದಾಗಿರಬೇಕು. ಸಮಗ್ರ ಕರ್ನಾಟಕದ ಹಸಲರ ಸಂಖ್ಯೆ ಆಗಿರಲಾರದು.

"೧೯೦೧ರ ಮೈಸೂರ ಗೆಜೆಟಿಯರನ್ನು ಉಲ್ಲೇಖಿಸಿ ಫ್ರಾನ್ಸಿಸ್ ಹಸಲರು ಬುಡಕಟ್ಟಿನ ಸಂಖ್ಯೆ ೫೫೨, ಅವರು ಕೆನರಾದ ಕೃಷಿ ಕಾರ್ಮಿಕರು, ಗುಡ್ಡಗಾಡುಗಳಲ್ಲಿ ವಾಸಿಸುವ ಬುಡಕಟ್ಟಿನವರು ಎಂದು ಹೇಳಿದ್ದಾನೆ. ಹಸಲರು ಬುಡಕಟ್ಟಿನ ಸಂಖ್ಯೆ ಕಡಿಮೆ ಇದ್ದುದಕ್ಕೆ ಕಾರಣ ೧೯೦೧ರ ಮೈಸೂರು ಜನಗಣತಿ ವರದಿಯಲ್ಲಿ ಅವರನ್ನು ಪ್ರತ್ಯೇಕವಾಗಿ ತೋರಿಸಿಲ್ಲ. ಇರುಳರು ಮತ್ತು ಸೋಲಿಗರೊಂದಿಗೆ ಸೇರಿರಬಹುದು ಎಂದು ಊಹಿಸಲಾಗಿದೆ. ೧೮೯೧-೧೯೦೧ರ ಅವಧಿಯಲ್ಲಿ ಇರುಳರ ಸಂಖ್ಯೆ ಹಚ್ಚಿರುವುದೇ ಈ ವಾದಕ್ಕೆ ಪುಷ್ಟಿ ನೀಡುತ್ತದೆ."[೨] ೧೯೦೧ರ ಮದ್ರಾಸು ಜನಗಣತಿ ವರದಿಯಲ್ಲಿ ಹಸಲರು ಬುಡಕಟ್ಟನ್ನು ಪ್ರತ್ಯೇಕವಾಗಿ ತೋರಿಸಲಾಗಿದೆ. "೧೯೧೧ರ ಮೈಸೂರು ಜನಗಣತಿಯ ಪ್ರಕಾರ ಹಸಲರು ಬುಡಕಟ್ಟನ್ನು ಪ್ರತ್ಯೇಕವಾಗಿ ಗಣನೆಗೆ ತೆಗೆದುಕೊಂಡಾಗ ಅವರ ಸಂಖ್ಯೆ ಕೇವಲ ೧೧೪. ೧೯೫೧ರಲ್ಲಿ ಜಾತಿವಾರು ಸಂಖ್ಯೆಯನ್ನು ಕರ್ನಾಟಕ ಸರ್ಕಾರ ಪ್ರಕಟಿಸಿತು. ಆ ವರದಿಯಲ್ಲಿ ಹಿಂದುಳಿದ ಬುಡಕಟ್ಟುಗಳ ಸಂಖ್ಯೆ ವೃದ್ಧಿಯಾಗಿದೆ. ಇವುಗಳಲ್ಲಿ ಉಲ್ಲೇಖನೀಯವಾದದ್ದು ಹಸಲರದು. ಬಹುಸಂಖ್ಯಾತ ಹಸಲರು ಉತ್ತರ ಮತ್ತು ದಕ್ಷಿಣಕನ್ನಡ ಜಿಲ್ಲೆಯಿಂದ ಮೈಸೂರು ಸಂಸ್ಥಾನಕ್ಕೆ ಬಂದುದೇ ಅವರ ಸಂಖ್ಯೆಯ ಹೆಚ್ಚಳಕ್ಕೆ ಕಾರಣ ಎಂದು ಮಲ್ಲಾರಾಧ್ಯ ಅವರು ಅಭಿಪ್ರಾಯಪಟ್ಟಿದ್ದಾರೆ. ೧೯೭೧ರ ಜನಗಣತಿಯ ಪ್ರಕಾರ ಕರ್ನಾಟಕ ರಾಜ್ಯ ಗೆಜೆಟಿಯರ್‌ನಲ್ಲಿ ಹಸಲರು ಬುಡಕಟ್ಟಿನ ಜನಸಂಖ್ಯೆ ಕರ್ನಾಟಕದಲ್ಲಿ ೧೧,೨೧೩ ಎಂದು ನಮೂದಿಸಲಾಗಿದೆ."[೩] ಬುಡಕಟ್ಟಿನ ಮೂಲವನ್ನು ನೋಡಲಾಗಿ ಕರ್ನಾಟಕ ರಾಜ್ಯದ ಉತ್ತರಕನ್ನಡ, ದಕ್ಷಿಣಕನ್ನಡ, ಶಿವಮೊಗ್ಗ, ಚಿಕ್ಕಮಗಳೂರು, ಬಳ್ಳಾರಿ, ಬೆಳಗಾವಿ ಜಿಲ್ಲೆಗಳಲ್ಲಿ ಹಸಲರು ಇದ್ದಾರೆ. ಹಸಲರು ಕೆಲವು ಜಿಲ್ಲೆಗಳಲ್ಲಿ ಹಸಾರು, ಹುಲ್ಸ್‌ವಾರರು ಎಂದು ಕರೆಯಲಾಗಿದೆ. ಬೆಳಗಾವಿ, ವಿಜಾಪುರ, ಧಾರವಾಡಗಳಲ್ಲಿ ಹಲಸಾರ, ಹುಲಸ್ವಾರ ಅಥವಾ ಹುಲಸವಾರ ಎಂದು ವಿವಿಧ ಹೆಸರುಗಳಿಂದ ಕರೆಯಲ್ಪಡುತ್ತಾರೆ. ಉತ್ತರಕನ್ನಡ, ದಕ್ಷಿಣಕನ್ನಡ, ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಗಳ ಹಸಲರು, ಉತ್ತರಕರ್ನಾಟಕದ ಹಲಸಾರ್ ಇವರೆಲ್ಲ ಒಂದೇ ಗುಂಪಿಗೆ ಸೇರಿದವರೆಂದು ಹೇಳಬಹುದು. ಸಂವಿಧಾನದ ಆದೇಶದ ಪ್ರಕಾರ ಬುಡಕಟ್ಟು ಜನಾಂಗ ೧೯೫೦ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟು ಪಟ್ಟಿಯ ಆದೇಶ ಹಾಗೂ ಪರಿಷ್ಕರಿಸಲ್ಪಟ್ಟ ೧೯೫೬ ಆದೇಶದ ಪ್ರಕಾರ ಹಸಲರು ಜನಾಂಗವನ್ನು ಬೆಂಗಳೂರು ಬಳ್ಳಾರಿ, ಚಿಕ್ಕಮಗಳೂರು, ಚಿತ್ರದುರ್ಗ, ಹಾಸನ, ಕೋಲಾರ, ಮಂಡ್ಯ, ಮೈಸೂರು, ಶಿವಮೊಗ್ಗ ಮತ್ತು ತುಮಕೂರು ಜಿಲ್ಲೆಗಳಲ್ಲಿ ಪರಿಶಿಷ್ಟ ಬುಡಕಟ್ಟು ಎಂದು ಆದೇಶಿಸಲಾಗಿದೆ. ರಾಷ್ಟ್ರಪತಿಗಳ ಆದೇಶದಲ್ಲಿ 'ಹಸಲರು'ಪದಕ್ಕೆ ಬೇರಾದ ಪರ್ಯಾಯ ಪದವನ್ನು ನಮೂದಿಸಿಲ್ಲ. ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಬುಡಕಟ್ಟು ಪಟ್ಟಿ(ಪರಿಷ್ಕೃತ) ೧೯೫೬ರ ಪ್ರಕಾರ ದಕ್ಷಿಣಕನ್ನಡ ಜಿಲ್ಲೆಯಲ್ಲಿರುವ ಹಸ್ಲ ಜನಾಂಗವು ಪರಿಶಿಷ್ಟ ಜಾತಿ ಹಾಗೂ ಬೆಳಗಾಂ, ವಿಜಾಪುರ, ಧಾರವಾಡ ಮತ್ತು ಉತ್ತರಕನ್ನಡ

ಜಿಲ್ಲೆಗಳಲ್ಲಿರುವ ಹಸ್ಲರ್, ಹುಲಸ್ವಾರ್ ಅಥವಾ ಅಸಲ್ವರ್ ಜನಾಂಗ ಪರಿಶಿಷ್ಟ ಜಾತಿಯೆಂದು ಪರಿಗಣಿಸಲ್ಪಟ್ಟಿದೆ. ಧಾರವಾಡ ಜಿಲ್ಲಾ ಗೆಜೆಟಿಯರ್‌ನಲ್ಲಿ ಹಸಲರು ಹಾನಗಲ್‌ನಲ್ಲೂ ಇದ್ದಾರೆ. ಅವರ ಧಾರ್ಮಿಕ ಗುರು ಲಿಂಗಾಯಿತ, ಆತ ಶಿಕಾರಿಪುರದ ಜೊಗರ್ಸಿಯಲ್ಲಿರುತ್ತಾನೆ. ಉತ್ತರಕನ್ನಡ ಜಿಲ್ಲೆಯ ಶಿರಸಿ, ಸಿದ್ದಾಪುರ, ಹೊನ್ನಾವರ ಹಾಗೂ ಶಿವಮೊಗ್ಗ ಜಿಲ್ಲೆಯ ಸಾಗರ, ಸೊರಬ ತಾಲ್ಲೂಕುಗಳು ಪಕ್ಕಪಕ್ಕದವು. ಹಾಗೆಯೇ ಉತ್ತರಕನ್ನಡ ಜಿಲ್ಲೆಯ ಶಿರಸಿ, ಸಿದ್ದಾಪುರ, ಧಾರವಾಡ ಜಿಲ್ಲೆಯ ಹಾನಗಲ್ಲು ತಾಲ್ಲೂಕಿನ ನೆರೆಯ ತಾಲ್ಲೂಕುಗಳಾಗಿವೆ. ಆದ್ದರಿಂದ ಹಸಲರು ಒಂದು ಕಡೆಯಿಂದ ಇನ್ನೊಂದು ಕಡೆಗೆ ವಲಸೆ ಹೋಗಿರುವ ಸಾಧ್ಯತೆಗಳಿವೆ. ವಿಜಾಪುರ, ಬೆಳಗಾವಿ, ಬಳ್ಳಾರಿಗಳಿಗೂ ಅವರು ಕೂಲಿಯನ್ನು ಅರಸಿ ತೆರಳಿರಬಹುದು ಎಂದು ಉಲ್ಲೇಖಿಸಲಾಗಿದೆ. ಎಂ.ಎ. ಷೇರಿಂಗ್‌ರವರು 'ಹಿಂದೂ ಟ್ರೈಬ್ಸ್ ಮತ್ತು ಕ್ಯಾಸ್ಟ್'ನಲ್ಲಿ ಹಸಲರು ಅರಣ್ಯವಾಸಿಗಳು, ಮರಕಡಿಯುವುದೇ ಅವರ ಕಸುಬೆಂದು ಬಣ್ಣಿಸಿದ್ದಾರೆ. ಲೂಯಿಸ್ ರೈಸ್‌ರ 'ಟ್ರೈಬ್ಸ್ ಆಫ್ ಮೈಸೂರು' ಗ್ರಂಥದಲ್ಲಿ ಹಸಲರು ಮತ್ತು ಸೋಲಿಗರು ಪರಸ್ಪರ ಹೋಲುತ್ತಾರೆ. ಅವರು ಪಶ್ಚಿಮಘಟ್ಟದಲ್ಲಿ ಕಂಡುಬರುತ್ತಾರೆ. ದಕ್ಷಿಣ ಕನ್ನಡದಿಂದ ಬಂದ ಅವರು ಮಾತನಾಡುವುದು ತುಳು ಭಾಷೆಯನ್ನು ಎಂದು ಬರೆದಿದ್ದಾನೆ. ಹಸಲರು ಬುಡಕಟ್ಟಿನ ಮೂಲ ನೆಲೆ ದಕ್ಷಿಣ ಕನ್ನಡ ಜಿಲ್ಲೆ. ಬಹುಶಃ ಅವರು ಪೂರ್ವ ಮತ್ತು ಉತ್ತರದ ಕಡೆಯೂ ವಲಸೆ ಹೋಗಿರಬಹುದು. ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳ ತಾಲ್ಲೂಕಿನಲ್ಲಿ ಹೆಚ್ಚಾಗಿದ್ದಾರೆ. ಕೇರಳದ ಕಾಸರಗೋಡಿನಲ್ಲೂ ಹಸಲರು ಕಂಡು ಬರುತ್ತಾರೆ. ಕಾಸರಗೋಡು ೧೯೫೬ರ ಮೊದಲು ದಕ್ಷಿಣಕನ್ನಡ ಜಿಲ್ಲೆಗೆ ಸೇರಿತ್ತು. ಆದಕಾರಣ ಕಾಸರಗೋಡಿನಲ್ಲೂ ನೆಲೆಸಿದ್ದಾರೆ. ಅಲ್ಲಿ ಅವರನ್ನು ಪರಿಶಿಷ್ಟ ಜಾತಿಗೆ ಸೇರಿಸಲಾಗಿದೆ. "ಹಸ್ಲರ್, ಹಲ್ಸರ್, ಹಾಲ್ಸುವರ್, ಹಾಸವರ್ ಎಂಬ ಹೆಸರಿನಲ್ಲಿ ಇವರು ಗುಜರಾತ್, ಮಹಾರಾಷ್ಟ್ರ ಮತ್ತು ರಾಜಸ್ಥಾನಗಳಲ್ಲಿ ಕಂಡುಬರುತ್ತಾರೆ. ಮಹಾರಾಷ್ಟ್ರದಲ್ಲಿ ಇವರನ್ನು ಪರಿಶಿಷ್ಟ ಜಾತಿಗೆ ಸೇರಿಸಲಾಗಿದೆ. ದಕ್ಷಿಣ ಕರ್ನಾಟಕದ ಭಾಗದ ಹಸಲರು ಬುಡಕಟ್ಟನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸಲಾಗಿದೆ. ಉತ್ತರ ಕರ್ನಾಟಕ ಭಾಗ ಹಾಗೂ ದಕ್ಷಿಣಕನ್ನಡ ಜಿಲ್ಲೆಯ ಹಸಲರನ್ನು ಪರಿಶಿಷ್ಟ ಜಾತಿಗೆ ಸೇರಿಸಲಾಗಿದೆ. ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿಸಲಾಗಿದೆ."[೪] ಮುಖ್ಯವಾಗಿ ಹಸಲರು ಕರ್ನಾಟಕದ ಉತ್ತರ ಕನ್ನಡ, ದಕ್ಷಿಣಕನ್ನಡ, ಶಿವಮೊಗ್ಗ, ಚಿಕ್ಕಮಗಳೂರುಗಳಲ್ಲಿ ಹೆಚ್ಚಾಗಿ ಹರಡಿಕೊಂಡಿದ್ದಾರೆ. ಶಿವಮೊಗ್ಗ ಜಿಲ್ಲೆಯ ಸಾಗರ, ಸೊರಬ, ಶಿಕಾರಿಪುರ, ಹೊಸನಗರ, ತೀರ್ಥಹಳ್ಳಿ, ಉತ್ತರಕನ್ನಡ ಜಿಲ್ಲೆಯ ಶಿರಸಿ, ಸಿದ್ದಾಪುರ, ಹೊನ್ನಾವರ; ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ, ಮೂಡಿಗೆರೆ, ನರಸಿಂಹರಾಜಪುರಗಳಲ್ಲಿ ಹಸಲರು ಬಹುಸಂಖ್ಯೆಯಲ್ಲಿದ್ದಾರೆ. ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಹಿರೇಮನೆ, ಅರೆಹದ, ಹೊಸಗದ್ದೆ, ಬೆಳ್ಳೆಣ್ಣೆ, ಗಿಳಿಗಾರು, ಉಳ್ಳೂರ, ಸಸರವಳ್ಳಿ, ಖಂಡಿಕಾ, ಗೀಜಗಾರು, ಕರ್ಕಿಕೊಪ್ಪ, ಬೇಳೂರ, ಬೆಳೆಯೂರು, ಚುಟ್ಟಿಕೆರೆ, ಅರಬಳ್ಳಿ, ತುಂಬ್ರಿ, ಮುಪ್ಪಾನೆ, ಕುಡುಗುಂಜಿ, ಕಾಳಮಂಜಿ; ಸೊರಬ ತಾಲ್ಲೂಕಿನ ಕುಂಸಿ, ಬಿಳುವಾಣಿ, ಹಿರೇಕಸವಿ, ಕವಡಿ, ದುಗ್ಲಿ, ನಿಸ್ರಾಣಿ, ಕೋಲುಗುಣಸಿ,

"ಹೊಸಬಾಳೆ, ಮುಟಗುಪ್ಪೆ, ಹಿರೇಕಾವಲಿ, ಚಿಕ್ಕವಾಲಿ, ಶಾಂತಾಪು, ಹೊಸನಗರದ ಹಿರಿಯೋಗಿ, ಕಂದಕ, ಕಂಕಣಬೈಲು, ಕಲ್ಮನೆ, ಜೇನಿನ, ಸಿಂಗಪುರ, ನವಣಿ, ತಲನೀರು, ಹುಲಗಾರು, ಸವಲಕೂರು, ಜೋಡೂರು, ಮೂಡಬಾಗಿಲು, ನೆಲ್ಲುಂಡೆ, ಒಳಕಟ್ಟೆ, ಹದಿ, ಆರೋಡಿ, ಬುರುಮಕ್ಕಿ, ಅತ್ತೀಮನೆ, ಮತ್ತೀನೆ, ಸಂಪಕಟ್ಟೆ, ಆಡುಗೋಡಿ, ಯಡೂರು, ಹೊಸಳ್ಳಿ, ತೊಗರ್ಸಿ; ತೀರ್ಥಹಳ್ಳಿಯ ಹಲಸಿನ ಹಳ್ಳಿ, ದಿಂಡೆ, ಕೈನಲ್ಲಿ, ಕನ್ನಂಗಿ, ಶಿಲೆಕುಣಿ, ಹೊಂಗೆಹಕ್ಲು, ಕೊಮ್ಮಿನಕೇರಿ, ಕಳ್ಳಿಗದ್ದೆ, ಹೊಸಕೊಪ್ಪ, ಹೊಸಕೊಡಿಗೆ, ಕೋಗಿಲೆ, ಕಾನಸಳ್ಳಿ, ಕಳ್ಳಿಗದ್ದೆ, ಗಬಡಿ ಮುಂತಾದ ಹಳ್ಳಿಗಳು ಹಸಲರು ಬುಡಕಟ್ಟಿನ ನೆಲೆಗಳಾಗಿವೆ."[೫] ದಕ್ಷಿಣ ಕನ್ನಡ ಜಿಲ್ಲೆಯ ಕಬ್ಬಿನಾಲೆ, ದೇವರುಬಳು, ಹಳ್ಳಿಹೊಳೆ, ಬರೆಗುಂಡಿ ಕಂತೆಬೆಲು, ಕೋಟಿಗುಳಿ, ಉತ್ತರಕನ್ನಡ ಜಿಲ್ಲೆಯ ದೊಡ್ಮನೆ, ಹೂವಿನಮನೆ, ವಂದಾನೆ, ಗೊರ್ಲಮನೆ, ಕಾನಳ್ಳಿ, ಕುಡೆಗೋಡೆ, ಬಾಳಗೋಡು, ಗುಬ್ಬಗೋಡು, ಬಿಜ್ಜಾಳ, ಕಲ್ಲಾಳ, ಬೇಗಾರು, ಅಳ್ಳೋಳ್ಳಿ, ಲಕ್ಕಿಜಡ್ಡು, ಹುವಿನಮನೆ, ಕುಡಗುಂದ, ಮೇಲಿನಮನೆ, ಕಾಳಿಬೀಡು, ಕಲ್ಕೈ, ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ, ಸಮ್ಸೆ, ಮಲ್ಲೇಶ್ವರ, ಬೆಟ್ಟದಮನೆ, ಕಮ್ಮಾರಗೋಡು, ಗುತ್ತಿ, ಕುಂದೂರು, ಬಾಲೂರು, ಗೊಯ್ಸಳ, ಚಿಕ್ಕಾನಹಳ್ಳಿ, ತೊಂಡೆಕೆರೆ, ಕೆಲಗೂರು ಹೀಗೆ ನಾಲ್ಕು ಜಿಲ್ಲೆಗಳ ಅನೇಕ ಗ್ರಾಮಗಳು ಹಸಲರು ಬುಡಕಟ್ಟಿನ ತಾಣಗಳಾಗಿವೆ. ಹಸಲರು ತಮ್ಮನ್ನು ಅಗ್ನಿ ಹೊನ್ನಯ್ಯನ ಮತದವರೆಂದು ಕರೆದುಕೊಳ್ಳುತ್ತಾರೆ. ಇವರ ಮೂಲಪುರುಷ ಹೊನ್ನಪ್ಪ. ಈತ ವೀರಶೈವ ಸಂತ. ಇವನು ಚೆಲುವಾದಿ ಚನ್ನಯ್ಯ, ಮಡಿವಾಳ ಮಾಚಯ್ಯ, ಮಾದರ ಹರಳಯ್ಯ, ಕುಂಬಾರ ಗುಂಡಪ್ಪ ಮುಂತಾದ ಶರಣರ ಸಮಕಾಲೀನನೆಂದು ಹೇಳುತ್ತಾರೆ. ಮೇದಾರರು ತಮ್ಮ ಹತ್ತಿರ ಸಂಬಂಧಿಗಳೆಂದು ಹಸಲರು ಹೇಳಿಕೊಳ್ಳುತ್ತಾರೆ. ಹಸಲರು ಬುಡಕಟ್ಟಿನ ಮೂಲಪುರುಷ ಹೊನ್ನಯ್ಯ, ಮೇದಾರರ ಮೂಲಪುರಷ ಚನ್ನಯ್ಯ–ಇಬ್ಬರೂ ಸಹೋದರರು. ಆದ್ದರಿಂದ ಮೇದಾರರು, ಹಸಲರು ದಾಯಾದಿಗಳು ಇಲ್ಲವೇ ಸಹೋದರರು ಎಂದು ಹಸಲರು ಹೇಳಿಕೊಳ್ಳುತ್ತಾರೆ. ಆದರೆ ಮೇದಾರರು ಈ ವಾದವನ್ನು ಒಪ್ಪಿಕೊಳ್ಳುವುದಿಲ್ಲ. ಚನ್ನಯ್ಯ ತಮ್ಮ ಮೂಲಪುರುಷನೆಂದು ಮೇದಾರರೂ ಒಪ್ಪಿಕೊಳ್ಳುವುದಿಲ್ಲ. ಹಸಲರು ಮೇದಾರರೊಂದಿಗಿನ ಸಂಬಂಧವನ್ನು ದೃಢಪಡಿಸಲು ಹಸಲರಲ್ಲಿ ಐದು ಪಂಗಡಗಳನ್ನು ಗುರುತಿಸಲಾಗಿದೆ.

೧. ನಾಡಹಸಲರು

೨. ಮಲೆಹಸಲರು

೩. ಕರ ಎಳೆಯುವ ಹಸಲರು

೪. ಬೆಳ್ಳಿ ಹಸಲರು ಅಥವಾ ಬೆಳ್ಳಾಲರು

೫. ಬಗ್ಗಾಲಿನ ಹಸಲರು, ಅಂತರಗಾಲು ಹಸಲರು

ಆರ್.ಇ. ಎಂಥೋವನ್ ತಮ್ಮ ದಿ ಟ್ರೈಬ್ಸ್ ಅಂಡ್ ಕ್ಯಾಸ್ಟ್ ಆಫ್ ಬಾಂಬೆ, ೧೯೨೨–೧೯೨೮ ಗ್ರಂಥದಲ್ಲಿ ಹಸಲರು ಬುಡಕಟ್ಟಿಲ್ಲಿ ನಾಮಧಾರಿ ಹಸಲರು, ಗೊಡ್ಡ ಹಸಲರು, ಮುಗೇರ

ಹಸಲರು, ಉಪ್ಪಾರ ಹಸಲರು, ಕರಿಮುಗೇರ ಹಸಲರು, ಬೆಳ್ಳಿ ಹಸಲರು, ಅಂತರಗಾಲು ಹಸಲರು ಮೊದಲಾದ ಗುಂಪುಗಳಿವೆ ಎಂದು ಉಲ್ಲೇಖಿಸಿದ್ದಾರೆ. ಹಸಲರು ಬುಡಕಟ್ಟಿನಲ್ಲಿ ತುಂಬಾ ಕೆಳದರ್ಜೆಯವರು ಬೆಳ್ಳಿ ಹಸಲರು. ಇವರು ಹೆಚ್ಚಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿದ್ದಾರೆ. ಇವರನ್ನು ಉಳಿದ ಹಸಲರು ಮನೆಗೆ ಸೇರಿಸುವುದಿಲ್ಲ. ಸಹಪಂಕ್ತಿ ಭೋಜನವನ್ನು ಮಾಡುವುದಿಲ್ಲ. ಕಾಲುಗಳು ಬಾಗಿರುವುದರಿಂದ ಬಗ್ಗಾಲಿನ ಹಸಲರು ಎಂದು ಕರೆಯುವ ಈ ಪಂಗಡದವರು ಶಿವಮೊಗ್ಗ ಮತ್ತು ಉತ್ತರಕನ್ನಡ ಜಿಲ್ಲೆಗಳಲ್ಲಿ ಸಾಕಷ್ಟಿದ್ದಾರೆ. ಇವರು ಅಡಿಕೆಮರ ಹತ್ತಿ ಮರದಿಂದ ಮರಕ್ಕೆ ಜಿಗಿಯುತ್ತಾ ಅಡಿಕೆ ಗೊನೆ ಕೊಯ್ಯುವುದು. ಅಡಿಕೆಗೆ ಕೊಳೆರೋಗ ಬರದಂತೆ ಔಷಧಿ ಹೊಡೆಯುವುದು. ಕೊಟ್ಟೆ ಕಟ್ಟುವ ಕೆಲಸ ಮಾಡುವುದರಿಂದ, ದಿನಗಟ್ಟಲೆ ಕಾಲು ಬಗ್ಗಿಸಿಕೊಂಡು ಮರದ ಮೇಲೆ ಇರುವುದರಿಂದ ಇವರನ್ನು ಬಗ್ಗಾಲಿನ ಹಸಲರು ಎಂದು ಕರೆಯುತ್ತಾರೆ. ಬಯಲುನಾಡಿನಲ್ಲಿ ಇರುವ ಹಸಲರು ನಾಡಹಸಲರು. ಹಸಲರು ಬುಡಕಟ್ಟಿನ ಗುಂಪಿನಲ್ಲಿ ಇವರು ಮೇಲ್ದರ್ಜೆಯವರು. ಇವರ ಉದ್ಯೋಗ ಬುಟ್ಟಿ ಹೆಣೆಯುವುದು. ಗುಡ್ಡಗಾಡುಗಳಲ್ಲಿ ವಾಸಿಸುವವರು ಮಲೆ ಹಸಲರು. ಇವರು ಹೆಚ್ಚಾಗಿ ಕೃಷಿ ಕಾರ್ಮಿಕರು. ಒಡೆಯರೊಂದಿಗೆ ಕೃಷಿಭೂಮಿಯಲ್ಲಿ ಕೆಲಸದಲ್ಲಿ ನಿರತರಾಗುತ್ತಾರೆ. ತಾಳೆಮರದಿಂದ ಹೆಂಡ ಇಳಿಸುವ ಕೆಲಸವನ್ನು ಮಾಡುತ್ತಾರೆ. ಸತ್ತ ಪ್ರಾಣಿಗಳನ್ನು ಎಳೆದು ಹಾಕುವ ಕೆಲಸ ಮಾಡುವವರಿಗೆ ಕರ ಎಳೆಯುವ ಹಸಲರು ಎಂದು ಕರೆಯುತ್ತಾರೆ. ಹಸಲರು ಬುಡಕಟ್ಟಿನಲ್ಲಿ ಒಂಟಿ ಹಸಲರು ಎಂಬ ಭಿನ್ನ ಬುಡಕಟ್ಟಿನವರು ಇದ್ದಾರೆ. ಹಸಲರು ಬುಡಕಟ್ಟಿನ ಇತರ ಪಂಡಗದವರೊಂದಿಗೆ ಪರಸ್ಪರ ಊಟ ಉಡಿಕೆಗಳಾಗಲೀ, ವಿವಾಹವಾಗಲೀ ನಡೆಯುವುದಿಲ್ಲ. ಹಸಲರು ತಮ್ಮನ್ನು ಬಿಲ್‌ಕ್ಷತ್ರಿಯ ಮತ್ತು ಅಗ್ನಿ ಹೊನ್ನಪ್ಪ ಮತದವರು ಎಂದು ಕರೆದುಕೊಳ್ಳುವುದಕ್ಕೆ ಹೆಮ್ಮೆ ಪಡುತ್ತಾರೆ. ತೀರ್ಥಹಳ್ಳಿಯಲ್ಲಿ ಬಿಲ್‌ಕ್ಷತ್ರಿಯ ಪದ ರೂಢಿಯಲ್ಲಿದೆ. ಆದರೆ ಮೂಡಿಗೆರೆಯಲ್ಲಿ ಇವೆರಡು ಪದಗಳೂ ಬಳಕೆಯಲಿಲ್ಲ. ತೀರ್ಥಹಳ್ಳಿ ಹಾಗೂ ಬೇಲೂರು ಭಾಗಗಳಲ್ಲಿ ಸಂಬಂಧಿಕರನ್ನು ಹೊಂದಿರುವ ಮೂಡಿಗೆರೆ ತಾಲ್ಲೂಕಿನ ಹಸಲರು ತಮ್ಮನ್ನು ದಕ್ಷಿಣಕನ್ನಡದ ಮೇರಾ ಜನಾಂಗವೆಂದು ಗುರುತಿಸಿಕೊಳ್ಳುತ್ತಾರೆ. ದಕ್ಷಿಣಕನ್ನಡ ಜಿಲ್ಲೆಯಲ್ಲಿ ಇವರನ್ನು ಮೊಗೆರ್ಲು ಎಂದು ಕರೆಯುತ್ತಾರೆ. ಇವರಲ್ಲಿ ಮೂರು ಪಂಗಡಗಳಿವೆ. ಬೆಳ್ಳಿ ಬೊರೆಗ್ಲೂ, ಆನಿಮೊಗೆರ್ಲು, ಕರೆಮೊಗೆರ್ಲು, ತೀರ್ಥಹಳ್ಳಿಯಲ್ಲಿ ಬೆಳ್ಳಿಮೊಗೆರ್ಲು ಪಂಗಡದವರನ್ನು ಹಸಲರು ಎಂದು ಗುರುತಿಸುತ್ತಾರೆ. ಆದರೆ ಕರೆವೊಗೆರ್ಲು ಪಂಗಡದವರು ಹಸಲರು ಬುಡಕಟ್ಟಿನ ಸ್ವಲ್ಪ ಕೆಳಸ್ತರದವರಾದ್ದರಿಂದ ಅವರನ್ನು ಮೇರಾ ಜನಾಂಗವೆಂದು ಗುರುತಿಸುತ್ತಾರೆ. ಆದರೆ ಮೂಡಿಗೆರೆಯಲ್ಲಿ ಮೊಗೆರ್ಲು ಜನಾಂಗದ ಎರಡೂ ಪಂಗಡಗಳೂ ಕೂಡ ಹಸಲರು ಎಂದೂ ಹಾಗೂ ಮೇರಾ ಎಂದೂ ಗುರುತಿಸಿಕೊಳ್ಳುತ್ತಾರೆ. ಎರಡೂ ಪಂಗಡಗಳಲ್ಲಿ ಮದುವೆ ಸಂಬಂಧಗಳಿವೆ. ಆದರೆ ಸ್ಪಾರ್ಪ್‌ರವರು ೧೮೯೧ರ ಮೈಸೂರು ಗೆಜೆಟಿಯರ್ ಹಾಗೂ ಜನಗಣತಿ ವರದಿ ಕುರಿತು ೧೯೯೩ರಲ್ಲಿ. ಪ್ರಕಾರ ಮೇರಾ ಜನಾಂಗವು ದಕ್ಷಿಣಕನ್ನಡ ಜಿಲ್ಲೆಯ ಹೊಲೆಯ ಜನಾಂಗದ ಒಂದು ಉಪಜಾತಿಯೆಂದು

ಹೇಳುತ್ತಾರೆ. ಫ್ರಾನ್ಸಿಸ್‌ರವರು ಹಸಲರು ಕರಾವಳಿಯವರು, ಕೃಷಿ ಕಾರ್ಮಿಕರು, ಮೂಲತಃ ಗುಡ್ಡಗಾಡಿನ ಬುಡಕಟ್ಟು ಜನಾಂಗವೆಂದೂ ಹೇಳುತ್ತಾರೆ. ೧೮೯೧ರ ಮೈಸೂರು ಗೆಜೆಟಿಯರ್ ಹಾಗೂ ಜನಗಣತಿ ವರದಿಯಲ್ಲಿ ಅವರು ಮೊಗೆರ್ಲು ಹಾಗೂ ಮೇರಾ ಪದದ ಪ್ರಸ್ತಾಪ ಮಾಡಿರುವುದಿಲ್ಲ. ೧೯೦೬ರಲ್ಲಿ ೧೮೯೧ರ ಮೈಸೂರು ಸೆನ್ಸಸ್ ವರದಿಯ ಕುರಿತಂತೆ ಥರ್ಸ್ಟನ್ ಕೂಡಾ ಮೇರಾ ಹಾಗೂ ಮೊಗೆರ್ಲು ಪದವನ್ನು ಹೇಳುವುದಿಲ್ಲ. ಹಸಲರ ಬಳಿಗಳ ಬಗ್ಗೆ ಹೇಳುವುದಾದರೆ ಹಸಲರಲ್ಲಿ ಭಿನ್ನಗೋತ್ರಗಳಿವೆ. ಇವನ್ನು 'ಬಳಿ' ಎಂದು ಕರೆಯುತ್ತಾರೆ. ಬಳಿಗಳನ್ನು ಗೊತ್ತು ಮಾಡುವುದು ತಾಯಿ. ಸೋದರಮಾವ ಇವರ ಮೂಲಕ, ಕರ್ನಾಟಕದ ಹಸಲರು ಬುಡಕಟ್ಟಿನಲ್ಲಿ ಈವರೆಗೆ ಇಪ್ಪತ್ಮೂರು ಬಳಿಗಳನ್ನು ಗುರುತಿಸಲಾಗಿದೆ. ಬಾಲೆ ಬಳಿ, ಗಂಗರ ಬಳಿ, ಶಿರಿನ ಬಳಿ, ಹೊಲೇನ ಬಳಿ, ಕೊಳಗ ಬಳಿ, ಶೆಟ್ಟಿ ಬಳಿ, ಒದಂಡಿಗಿನ ಬಳಿ, ಹದಲಿಗೆ ಬಳಿ, ಕುಂದಲಿ ಬಳಿ ಮಲ್ಲಿಗೆ ಬಳಿ ಕಾಡಾಚಿ ಬಳಿ, ಕುಳ್ಳಿಗೆ ಬಳಿ, ತೋಳನ ಬಳಿ, ಶಿವನ ಬಳಿ, ಆನೆ ಬಳಿ, ಬೆತ್ತ ಬಳಿ, ಕನ್ನೆ ಬಳಿ, ಶೇಂದಿ ಬಳಿ, ಕಿನ್ನಿಗೇರ್ ಬಳಿ, ಚಲ್ಯೇರ ಬಳಿ, ಕುಮುದೆನ ಬಳಿ, ಮದುಮೇದನ ಬಳಿ, ನಾದೇರ್ ಬಳಿ. ಈ ಕೆಳಗಿನ ಬುಡಕಟ್ಟುಗಳು ಒಂದೇ ಕುಲದೇವತಾ ಪದ್ಧತಿ ಇರುವಂಥವು. ಅಬೆ ಬಳಿ, ಬೆತ್ತ ಬಳಿ, ಬಳಿ ಕನ್ನೆ, ಶೇಂದಿ ಬಳಿ ಹೆಂಡ, ಶೆಟ್ಟಿ ಬಳಿ, ಮೀನು, ಶಿರಿನ ಬಳಿ, ಒಂದು ಮರ. ತೀರ್ಥಹಳ್ಳಿಯ ಹಲಸಿನಹಳ್ಳಿಯಲ್ಲಿ ಗಂಗರ ಬಳಿ, ಬಂಗೇರನ ಬಳಿ, ಬಾಳೆ ಬಳಿ ಇರುವುದಾಗಿ ಹೇಳುತ್ತಾರೆ. ಸೊರ ತಾಲ್ಲೂಕಿನಲ್ಲಿ ಈ ಬಳಿಗಳನ್ನು ಸಂಪೂರ್ಣ ಮರೆತಿದ್ದಾರೆ. ಆದರೆ ಒಂದು ಪೀಳಿಗೆಯ ಮೊದಲು ಈ ಪದ್ಧತಿ ಇರುವುದೆಂದು ನೆನಪಿಸಿಕೊಳ್ಳುತ್ತಾರೆ. ಸಾಗರದ ಹಸಲರು ಬಾಳೆ ಬಳಿ, ಗಂಗರ ಬಳಿ, ಶಿರನ ಬಳಿ, ಶೆಟ್ಟಿ, ಶೆಟ್ಟಿ ಬಳಿ, ಮಲ್ಲಿಗೆ ಬಳಿ, ತೋಳನ ಬಳಿ, ಶಿವನ ಬಳಿ, ಕನ್ನೆ ಬಳಿ ಬಳಕೆಯಲ್ಲಿವೆ. ಸಾಮಾನ್ಯವಾಗಿ ಮಲೆನಾಡು ಭಾಗದ ಹಸಲರು ಬುಡಕಟ್ಟಿನಲ್ಲಿ ಬಾಳೆ ಬಳಿ, ಹೊಲೇನ ಬಳಿ, ತೋಳನ ಬಳಿ, ಶಿವನ ಬಳಿ, ಗಂಗರ ಬಳಿ, ಕನ್ನೆ ಬಳಿ, ಮಲ್ಲಿಗೆ ಬಳಿಗಳು ಹೆಚ್ಚು ಬಳಕೆಯಲ್ಲಿವೆ. ಆದರೆ ಈಗೀನ ಪೀಳಿಗೆಯವರು ಬಳಿಗಳನ್ನು ಮರೆಯುತ್ತಿದ್ದಾರೆ. ಹಸಲರು ಬುಡಕಟ್ಟಿನಲ್ಲಿ ವಂಶ ಅಥವಾ ಗೋತ್ರಗಳಿಲ್ಲ. ಗೋತ್ರಗಳಿಗೆ ಅವರು ಮದುವೆಯ ಸಂಬಂಧಗಳ ಆಧಾರದ ಮೇಲೆಯೇ ನಿರ್ಧರಿಸುತ್ತಾರೆ. ಆದರೆ ಒಂದೇ ವಂಶದಲ್ಲಿ ಮದುವೆಯಾಗುವುದು ಹಸಲರು ಬುಡಕಟ್ಟಿನಲ್ಲಿ ನಿಷೇದ. ಒಬ್ಬರ ಕಾಲ ಯಾವುದೆಂದು ತಿಳಿದಿದ್ದರೂ. ಅವರ ತಂದೆ-ತಾಯಿ ಅವರ ಮದುವೆ. ಅತ್ತೆ ಮಾವ ಈ ರೀತಿಯ ಸಂಬಂಧಗಳ ಆಧಾರದ ಮೇಲೆ ಅವರವರ ಅಂಶವನ್ನು ಕಂಡುಹಿಡಿಯುತ್ತಾರೆ. ಹಸಲರು ಬುಡಕಟ್ಟಿನಲ್ಲಿ ಎರಡು ಗುಂಪು ಮಾಡಬಹುದು. ಒಂದು ತುಳು ಭಾಷೆ ಮಾತನಾಡುವವರು. ಎರಡನೆಯದು ಕನ್ನಡ ಮಾತನಾಡುವವರು. ದಕ್ಷಿಣ ಕನ್ನಡ, ಚಿಕ್ಕಮಗಳೂರು ಭಾಗದ ಹಸಲರು ತುಳು ಮಾತನಾಡುವ ಹಸಲರು. ಶಿವಮೊಗ್ಗ ಉತ್ತರಕನ್ನಡ ಜಿಲ್ಲೆಯ ಹಸಲರು ಕನ್ನಡ ಮಾತನಾಡುವವರು. ಕನ್ನಡ ಮಾತನಾಡುವ ಹಸಲರು ಬುಡಕಟ್ಟಿನಲ್ಲಿ ಪಿತೃವೇ ಪ್ರಧಾನ. ಆದರೆ

ತುಳು ಮಾತನಾಡುವ ಹಸಲರು ಬುಡಕಟ್ಟಿನಲ್ಲಿ 'ಮಕ್ಕಳ ಕಟ್ಟು' ಎನ್ನುವ ವಾರಸುದಾರಿಕೆಯ ಕಾನೂನು ಪದ್ಧತಿಯಿದೆ. ಇದರ ಪ್ರಕಾರ ಪೂರ್ವಜರ ಆಸ್ತಿಗೆ ಆ ಕುಟುಂಬದ ಗಂಡುಮಕ್ಕಳು ಮಾತ್ರ ವಾರಸುದಾರರಾಗಬಹುದು. ಯಜಮಾನಿಕೆಯ ಹಿರಿಯ ಮಗನಿಗೆ ಮಾತ್ರ

**೪.೩. ಗೃಹಪ್ರವೇಶ**

ಹಸಲರು ಒಂದು ಕಾಲದಲ್ಲಿ ಕಾಡಿನಲ್ಲಿ ವಾಸಿಸುವ ಜನಾಂಗ, ೧೮೯೧ರ ಮೈಸೂರು ಜನಗಣತಿ ಹಾಗೂ ಬಾಂಬೆ ಗೆಜೆಟಿಯರ್ ಸಂಪುಟ ೧೫ರಲ್ಲಿ ಹಸಲರು ಸಣ್ಣ ಏಕಾಂತ ಗುಡಿಸಲಿನಲ್ಲಿ ವಾಸವಾಗಿರುತ್ತಾರೆ. ಅವುಗಳಿಗೆ ಬಗ್ಗಿ ತೆವಳಿಕೊಂಡು ಹೋಗುವಂತಹ ಪ್ರಧಾನ ಬಾಗಿಲು ಇರುತ್ತದೆ. ಹಿಂದುಗಡೆ ಒಂದು ಕಿಂಡಿಯಾಕಾರದ ದೊಡ್ಡ ರಂಧ್ರವಿರುವ ಹಿಂಬಾಗಿಲೂ ಇರುತ್ತದೆ. ಅದರಲ್ಲಿ ನಾಚಿಕೊಳ್ಳುವ ಸ್ವಭಾವದ ಹಸಲರು ತಪ್ಪಿಸಿಕೊಂಡುಬಿಡುತ್ತಾರೆ. ಮಲೆನಾಡು ಪ್ರದೇಶದಲ್ಲಿ ಹಸಲರು ಏಕಾಂತರದಲ್ಲಿಯೇ ವಾಸವಾಗಿರುತ್ತಾರೆ. ಅವರ ಪ್ರಮುಖ ಬದಲಾವಣೆ ಎಂದರೆ ಯಜಮಾನರು ಕೊಟ್ಟ ಗುಡಿಸಲುಗಳಲ್ಲಿ ವಾಸ ಮಾಡುತ್ತಾರೆ. ಮಲೆನಾಡಿನ ಮೂಲೆಯ ಹಳ್ಳಿಗಳಲ್ಲಿ ಈಗಲೂ ಅವರು ಪ್ರತ್ಯೇಕ ಏಕಾಂತ ಪ್ರದೇಶಗಳಲ್ಲಿ ವಾಸ ಮಾಡುತ್ತಿದ್ದಾರೆ ಎಂದು ಉಲ್ಲೇಖಿಸಲಾಗಿದೆ. ಹಸಲರು ಬುಡಕಟ್ಟಿನ ಮನೆಗಳು ಒಂದೇ ಆಕಾರದಲ್ಲಿವೆ. ಮಣ್ಣು ಹಾಗೂ ಇಟ್ಟಿಗೆಗಳಿಂದ ಕಟ್ಟಲಾಗಿದೆ. ಮಂಗಳೂರು ಹೆಂಚು ಅಥವಾ ನಾಡಹೆಂಚುಗಳನ್ನು ಹೊಂದಿಸಿದ್ದಾರೆ. ಸಾಮಾನ್ಯವಾಗಿ ಮನೆಗಳು ಆಯಾತಕಾರವಾಗಿವೆ. ಒಂದು ಮನೆಯ ಮುಖ್ಯ ಭಾಗಗಳು; ಮನೆಯಿಂದ ಸ್ವಲ್ಪ ದೂರದಲ್ಲಿ ಹುಲ್ಲು ಹೊಂದಿಕೆಯ ಬಚ್ಚಲು ಹಾಗೂ ಕೊಟ್ಟಿಗೆ ಮನೆಗಳು ಇರುತ್ತವೆ. ಹಳ್ಳಿಗಳಲ್ಲಿ ಹುಲ್ಲು ಹೊದಿಕೆ, ಎಲೆ, ತೆಂಗಿನಗರಿಯ ಹೊದಿಕೆ ಮನೆಗಳಿವೆ. ಇವರ ಮನೆಗಳಿಗೆ ಒಂದೇ ಪ್ರಧಾನ ಪ್ರವೇಶದ ಬಾಗಿಲು. ಅದರಲ್ಲಿ ಒಬ್ಬ ಮನುಷ್ಯ ತಲೆ ಬಾಗಿ ಒಳ ಹೋಗಬಹುದು. ಎಲ್ಲಾ ಮನೆಗಳಿಗೂ ಅಥವಾ ಗುಡಿಸಲುಗಳಿಗೂ ಅಂಗಳ ಹಾಗೂ ಹಿತ್ತಲು ಇದ್ದೇ ಇರುತ್ತದೆ. ಮಳೆಗಾಲದಲ್ಲಿ ಹಿತ್ತಲಿನಲ್ಲಿ ತರಕಾರಿ ಬೆಳೆಯುತ್ತಾರೆ. ಹಸಲರು ಬುಡಕಟ್ಟಿನವರಿಗಾಗಿಯೇ ಇರುವ ಬಾವಿಗಳಲ್ಲಿ ನೀರು ತರುತ್ತಾರೆ. ನಿಸರ್ಗದ ಕಡೆಗೆ ಅವರು ಬಯಲಿಗೆ ಹೋಗುತ್ತಾರೆ. ಶೌಚಾಲಯಗಳು ಇರುವುದಿಲ್ಲ. ಇತರ ಕೆಳಸ್ತರ ಜನರ ಮನೆಗಳಿರುವಂತೆ ಇವರ ಮನೆಗಳೂ ಇರುತ್ತವೆ. ಮಳೆಯ ಪ್ರಮಾಣ ಸಾಧಾರಣದಿಂದ ಹೆಚ್ಚು ಇರುತ್ತದೆ. ಎಲ್ಲಾ ಮನೆಗಳು ಬಿದಿರು ಹಾಗೂ ಹುಲ್ಲಿನಿಂದ ಕಟ್ಟಲ್ಪಟಿರುತ್ತವೆ. ಮನೆಯ ಗೋಡೆಗೆ ತೊಂದರೆಯಾಗದಂತೆ ಸುತ್ತಲೂ ಕಟ್ಟೆಯನ್ನು ಕಟ್ಟಿ ಆಗಾಗ ಸಗಣಿಯಿಂದ ಸಾರಿಸುತ್ತಾರೆ. ಗೋಡೆಯ ಅಲಂಕಾರಕ್ಕೆ ವಿಶೇಷಗಮನ ಕೊಡುವುದಿಲ್ಲ. ಮಲೆನಾಡಿನ ಹಸಲರು ವಾಸ ಮಾಡುವ ಸ್ಥಳಕ್ಕೆ 'ಹಸ್ಲರ್ ಕೇರಿ'ಎನ್ನುತ್ತಾರೆ. ಸಾಗರ, ಹೊಸನಗರ ಭಾಗದ ಹಸಲರು ಗುಡ್ಡ ಬೆಟ್ಟಗಳ ತಪ್ಪಲಿನಲ್ಲಿ ಒಡೆಯರ ಅಡಿಕೆ ತೋಟಗಳ ಮೇಲ್ಭಾಗದಲ್ಲಿ ಮನೆ ಮಾಡಿ ಕೊಂಡಿರುತ್ತಾರೆ. ಅಡಿಕೆ ಸೋಗೆಯನ್ನು ಹೊಂದಿಸಿದ ಮಣ್ಣಿನ ಗೋಡೆಯ ಹಾಗೂ ಅಡಿಕೆ ದಬ್ಬೆಯನ್ನು ಹೆಣೆದಿರುವ ಮನೆಗಳು, ನಾಲ್ಕು ಮಾಡಿನ ತ್ರಿಕೋನಾಕೃತಿಯ ಗುಡಿಸಲುಗಳು, ಮನೆಯ ಬಲಭಾಗದಲ್ಲಿ ಅಡ್ಡಗೋಡೆ

ಹಾಕಿ ಅಡುಗೆ ಮನೆ ಮಾಡಿರುತ್ತಾರೆ. ಸಾಮ್ಯಾನವಾಗಿ ಮನೆಯ ಪ್ರಧಾನ ಪ್ರವೇಶ ಬಾಗಿಲು ಪೂರ್ವ ದಿಕ್ಕಿಗೆ ಇರುತ್ತದೆ. ವಾಸದ ಮನೆಯ ಸ್ವಲ್ಪ ದೂರದಲ್ಲಿ ಬಚ್ಚಲು ಮತ್ತು ಕೊಟ್ಟಿಗೆ ಮನೆಗಳಿರುತ್ತವೆ. ಇವುಗಳಿಗೆ ಅಡಿಕೆ ಸೋಗೆ ಹೊದಿಸಿರುತ್ತಾರೆ. ಮನೆಗಳಿಗೆ ಕಿಟಕಿಗಳಿರುತ್ತವೆ. ಒಂದೋ ಎರಡೋ ಚಿಕ್ಕ ಕಿಟಕಿಗಳಿರುತ್ತವೆ. ಮರದ ಹಲಗೆ ಬಾಗಿಲುಗಳಿರುವುದಿಲ್ಲ. ಅಡಿಕೆ ದಬ್ಬೆಗಳನ್ನು ಜೋಡಿಸಿ ಹೆಣೆದ ಬಾಗಿಲುಗಳು. ಹಸಲರು ಕೆಲಸಕ್ಕೆ ಹೋಗುವಾಗ ಬಾಗಿಲಿಗೆ ಬೀಗ ಹಾಕುವುದಿಲ್ಲ. ಅಡಿಕೆ ದಬ್ಬೆಯ ಬಾಗಿಲುಗಳನ್ನು ಹಗ್ಗದಿಂದ ಎಳೆದು ಮುಂದಿನ ಸೂರಿಗೆ ಕಟ್ಟುತ್ತಾರೆ. ಮನೆಯ ಒಳಗಡೆ ಎಡಭಾಗದಲ್ಲಿ 'ಹೊರಸಲು'(ಹೊಸಲು) ಗುಂಡಿಯಿರುತ್ತದೆ. ಈ ಗುಂಡಿಯ ಮೇಲುಗಡೆ ನಾಲ್ಕು ಅಡಿ ಎತ್ತರದಲ್ಲಿ 'ಬೆಸಲಿಕಳಿ' ಕಟ್ಟಿರುತ್ತಾರೆ. ಹೊಸಲುಗಳಲ್ಲಿ ಮಳೆಗಾಲದಲ್ಲಿ ಸದಾ ಬೆಂಕಿ ಹಾಕಿರುತ್ತಾರೆ. ಮಾಂಸ ಒಣಗಿಸುತ್ತಾರೆ. ನಡುಮನೆಯ ಒಂದು ಕಡೆ ಭತ್ತ ಕುಟ್ಟಲು ಒಳ್ಳನ್ನು ಮಾಡಿರುತ್ತಾರೆ. ಇವರ ಮನೆಗಳಲ್ಲಿ ಪ್ರತ್ಯೇಕವಾದ ದೇವರ ಕೋಣೆಗಳಿರುವುದಿಲ್ಲ. ಗೋಡೆಯ ಮೇಲೆ ಹಿಂದೂ ದೇವರುಗಳ ಕೆಲವು ಪಟಗಳಿರುತ್ತವೆ. ಧರ್ಮಸ್ಥಳದ ಮಂಜುನಾಥ ಮತ್ತು ಧರ್ಮಾಧಿಕಾರಿ ಡಾ. ವೀರೇಂದ್ರ ಹೆಗ್ಗಡೆಯವರ ಪಟಗಳು ಇರುತ್ತವೆ. ಹಸಲರು ಏಕಾಂತಪ್ರಿಯರು. ಪ್ರಕೃತಿರಮ್ಯವಾದ ಪ್ರಶಾಂತ ಸ್ಥಳವನ್ನು ಮನೆಮಾಡಲು ಆಯ್ಕೆ ಮಾಡಿಕೊಳ್ಳುವರು. ಹಸಲರು ಬುಡಕಟ್ಟಿನ ಮಹಿಳೆಯರು ಮನೆಯನ್ನು ತುಂಬಾ ಸ್ವಚ್ಛವಾಗಿಡುತ್ತಾರೆ. ಸಗಣಿ ಮತ್ತು ಕರಿ ಸೇರಿಸಿ ಮನೆಯನ್ನು ಸಾರಿಸುತ್ತಾರೆ. ಅಂಗಲ ಸಾರಿಸಲು ಕೆಮ್ಮಣ್ಣು ಬಳಸುತ್ತಾರೆ. ಎಲ್ಲರ ಮನೆಯ ಮುಂದೆ ಅಂಗಳದಲ್ಲಿ ಚಿಕ್ಕ ರಂಗೋಲಿಯಿರುತ್ತದೆ. ಮನೆಯ ಹಿಂದೆ ಮುಂದೆ ಕೆಲವರು ತೊಂಡ, ಬಸಳೆ ಬಳ್ಳಿಗಳನ್ನು ಹಾಕಿರುತ್ತಾರೆ. ಸ್ವಾತಂತ್ರ್ಯನಂತರ ಬಹಳಷ್ಟು ಹಳ್ಳಿಗಳಲ್ಲಿ ಕಾಲೋನಿಗಳು ನಿರ್ಮಾಣವಾಗಿವೆ. ೧೯೫೭ರಲ್ಲಿ ಬೆಟ್ಟಗುಡ್ಡಗಳ ತಪ್ಪಲಿನಲ್ಲಿ ವಾಸವಾಗಿದ್ದ ಸಾಗರ ತಾಲ್ಲೂಕು ಹಿರೇಮನೆ ಹಸಲರಿಗೆ ೧೯ಮನೆ (ತಲಾ ಒಂದು ಎಕರೆಯಂತೆ) ೧೯ ಎಕರೆ ಜಮೀನು, ಬಾವಿ, ರಸ್ತೆ, ಸಮುದಾಯ ಭವನಗಳನ್ನು ನಿರ್ಮಾಣ ಮಾಡಿ ಅವರನ್ನು ಪುನರ್ವಸತಿಗೊಳಿಸಲಾಗಿದೆ. ಕೆಲವು ದಿವಸ ಹೊಸ ಕಾಲೋನಿಗೆ ಬಂದು ನೆಲೆಸಲು ಹಸಲರು ಒಪ್ಪಲಿಲ್ಲ. ಮಂತ್ರವಾದಿ ಒಬ್ಬನನ್ನು ಕರೆಸಿ, ಸ್ಥಳ ತೋರಿಸಿ ಈ ಸ್ಥಳವೆಂದು ವಾಸ ಮಾಡುವುದರಿಂದ ನಿಮಗೆ ತೊಂದರೆಯಿಲ್ಲ. ವಾಸಕ್ಕೆ ಯೋಗ್ಯವಾದ ಸ್ಥಳವೆಂದು ಹಸಲರಿಗೆ ಮನವರಿಕೆ ಮಾಡಿದ ನಂತರ ಒಬ್ಬೊಬ್ಬರಾಗಿ ಕಾಲೋನಿಯ ಮನೆಗಳಿಗೆ ಬಂದು ಸೇರಿಕೊಂಡರು. ಇದೇ ರೀತಿ ಮೂಡಿಗೆರೆಯ ಕಮ್ಮಾರಗೋಡು(೧೯೬೦), ಸೊರಬದ ಹಿರೇಕಸವಿ ಕುಂಸಿ(೧೯೫೮), ತೀರ್ಥಹಳ್ಳಿಯ ಹಲಸಿನ ಹಳ್ಳಿ, ಶಿಕಾರಿಪುರದ ಗುಡ್ಡದ ಹೊಸಳ್ಳಿ, ಹೊಸನಗರದ ಹಿರಿಯೋಗಿಯಲ್ಲಿ ಕಾಲೋನಿಗಳು ನಿರ್ಮಾಣಗೊಂಡಿವೆ. ಈ ಕಾಲೋನಿಗಳಲ್ಲಿ ಹಸಲರು ಪ್ರತ್ಯೇಕವಾಗಿ ವಾಸಿಸುತ್ತಿದ್ದಾರೆ. ಇತ್ತೀಚಿಗೆ ಹಸಲರು ವಾಸಿಸುವ ಬಹುತೇಕ ಹಳ್ಳಿಗಳಲ್ಲಿ ಕಾಲೋನಿಗಳು ನಿರ್ಮಾಣವಾಗಿವೆ.

## ೪.೪. ಉಡುಗೆ ತೊಡುಗೆಗಳು

ಹಸಲರು ಆರು ಮೊಳದ ಕುರಗೋಡು ಪಂಚೆಯಿಂದ ಸೊಂಟ ಸುತ್ತಿಕೊಳ್ಳುತ್ತಾರೆ. ಕರಿಬಣ್ಣದ ಅಂಗಿ ಹಾಕಿಕೊಳ್ಳುತ್ತಾರೆ. ತಲೆಗೆ ಪೇಟ ಸುತ್ತಿಕೊಳ್ಳುತ್ತಾರೆ. ಕಿವಿಗೆ ಕಡಕು, ಬಂಗಾರದ ಒಂಟಿ, ಸೊಂಟಕ್ಕೆ ಬೆಳ್ಳಿಯ ನ್ಯಾವಳ ಧರಿಸುತ್ತಾರೆ. ದಶಕದ ಹಿಂದೆ ಹಸಲರು ಬೈರಾಸ(ಮುಂಡ ಥರದ ಕಚ್ಚೆ) ಬಳಸುತ್ತಿದ್ದರು. ವಯಸ್ಸಾದವರು ಬೈರಾಸ ಕಟ್ಟುತ್ತಿದ್ದರು. ಇದಕ್ಕೆ ಸೊಂಟ ಸುತ್ತುವುದು ಎಂದು ಹೇಳುತ್ತಾರೆ. ಲಂಗೋಟಿ ಕಟ್ಟುತ್ತಾರೆ. ಮಹಿಳೆಯರು ಕರೆ ಮತ್ತು ಕೆಂಪು ದುಂಡಿನ ಸೀರೆ ಉಡುತ್ತಾರೆ. ರವಿಕೆ ಹಾಕಿಕೊಳ್ಳುತ್ತಾರೆ. ಕಿವಿಗೆ ಬೆಂಡೋಲೆ, ಬುಗುಡಿ, ಕೈಗೆ ಬೆಳ್ಳಿಯ ಕೋಲ್ಕಡಗ ಮತ್ತು ದುಂಡುಗಳನ್ನು, ಸೊಂಟಕ್ಕೆ ಸಾದಾ ಅಥವಾ ಗೆಜ್ಜೆಪಟ್ಟಿಯನ್ನು ಧರಿಸುವರು, ಹಸಲರು ಬಣ್ಣ ಕಪ್ಪು, ಕಪ್ಪಾಗಿದ್ದರೂ ಲಕ್ಷಣವಾಗಿರುತ್ತಾರೆ. ಮಹಿಳೆಯರು ಕಪ್ಪು ಸುಂದರಿಯರು. ಮೃದು ಸ್ವಭಾವದವರು. ಸೇವಾ ಭಾವನೆಯುಳ್ಳವರು ಮತ್ತು ಚುರುಕು ಬುದ್ಧಿಯವರು ಹಾಗೂ ಪ್ರಾಮಾಣಿಕರು. ಹಿಂದೆ ಹಸಲರು ಬುಡಕಟ್ಟಿನ ಹೆಂಗಸರು ರವಿಕೆ ತೊಡುತ್ತಿರಲಿಲ್ಲ. ಸೀರೆ ಸೆರಗಿನಿಂದ ಎದೆಯ ಭಾಗವನ್ನು ಮುಚ್ಚಿಕೊಂಡು ಗೊಬ್ಬೆ ಕಟ್ಟಿಕೊಳ್ಳುತ್ತಿದ್ದರು. ಮೇಲ್ವರ್ಗದ ಮಹಿಳೆಯರು ತೊಡುವ ಸಾಮಾನ್ಯ ಉಡುಗೆಯನ್ನೇ ಹಸಲರು ಬುಡಕಟ್ಟಿನ ಮಹಿಳೆಯರು ತೊಡುತ್ತಾರೆ. ಗಂಡಸರು ಲುಂಗಿ, ಷರ್ಟ್, ಪ್ಯಾಂಟು ತೊಡುತ್ತಾರೆ. ಅಡಿಕೆ ತೋಟಗಳಲ್ಲಿ ಕೆಲಸ ಮಾಡುವ ಗಂಡಸರು ಹಾಳೆ ಟೋಪಿ ಧರಿಸುವರು. ಕೆಲಗ್ರಾಮಗಳ ಹಸಲರು ಬುಡಕಟ್ಟಿನಲ್ಲಿ ಚರ್ಮದ ಚಪ್ಪಲಿ, ಬೂಟು ಧರಿಸುವ ಹಾಗಿಲ್ಲ. ಅಂಥವರಿಗೆ ರೂ. ೫೦೧ ದಂಡ ವಿಧಿಸಲಾಗುತ್ತದೆ ಆದರೆ ಸೊರಬ, ಸಾಗರ, ಹೊಸನಗರದ ಭಾಗದಲ್ಲಿ ಈ ಪದ್ಧತಿಯಿಲ್ಲ. ಗಂಡಸರು ಸಾಮಾನ್ಯವಾಗಿ ಎಲ್ಲರೂ ಚಪ್ಪಲಿ ಹಾಕುತ್ತಾರೆ. ಯುವಕರು ಬೂಟು ಹಾಕುತ್ತಾರೆ. ಮಹಿಳೆಯರಲ್ಲಿ ವಯಸ್ಸಾದವರು ಚಪ್ಪಲಿ ಧರಿಸುವುದು ಕಡಿಮೆ. ಯುವತಿಯರು ತಪ್ಪಲಿ ಹಾಕುತ್ತಾರೆ. ಶಿವಮೊಗ್ಗ ಜಿಲ್ಲೆಯ ಕೆಲ ಭಾಗಗಳಲ್ಲಿ ಹಸಲರು ಬುಡಕಟ್ಟಿನ ಹೆಂಗಸರು ಬೆಳ್ಳಿ, ಬಂಗಾರದ ಒಡವೆಗಳನ್ನು ತೊಡುವುದು ನಿಷೇಧವಾಗಿತ್ತು. ಮೂಗು ಚುಚ್ಚಿಸಿಕೊಳ್ಳುತ್ತಿರಲಿಲ್ಲ. ಆದರೆ ಈಗ ಸಾಮಾನ್ಯವಾಗಿದೆ. ಮದುವೆಯಾದ ಹೆಂಗಸರು ಬೆಂಡೋಲೆ, ಮೂಗುತಿ, ಕರಿಮಣಿಗಳಿಂದ ಪೋಣಿಸಿರುವ ತಾಳಿಸರ, ಕಾಲುಂಗುರಗಳನ್ನು ಧರಿಸುವರು. ವಿಧವೆಯರು ಗಾಜಿನ ಬಳೆ, ಕಾಲುಂಗುರ, ಮೂಗುತಿ, ತಾಳಿಸರಗಳನ್ನು ಧರಿಸುವಂತಿಲ್ಲ. ಹುಡುಗಿಯರು ಕರಿಮಣಿಸರ, ಕಾಲುಂಗುರವನ್ನು ಹೊರತುಪಡಿಸಿ ಉಳಿದ ಎಲ್ಲಾ ಆಭರಣಗಳನ್ನು ಧರಿಸಬಹುದು. ಮಹಿಳೆಯರು ಹೆಚ್ಚಾಗಿ ಮಣಿಸರಗಳನ್ನು ಧರಿಸುತ್ತಾರೆ. ಹಸಲರು 'ಹಚ್ಚೆ' ಹಾಕಿಸಿಕೊಳ್ಳುತ್ತಾರೆ. ಹಚ್ಚೆಯನ್ನು ಕೊರೆದು ಅಥವಾ ಶಿಳ್ಳೆಕ್ಯಾತರ ಹೆಂಗಸರು ಹಾಕುತ್ತಾರೆ. ಕೆಲವರು ಕೆನ್ನೆ, ಹಣೆ ಹಾಗೂ ಗಲ್ಲದ ಮೇಲೆ 'ಬಟ್ಟು'ಚುಚ್ಚಿಸಿಕೊಳ್ಳುತ್ತಾರೆ. ಎರಡು ಕೈಗಳ ಮೇಲೆ ಜೋಗಿಜಡೆ, ಎಲೆಕೌಳಿಗೆ, ಕೌಳಿಮಟ್ಟಿ, ರಾಮನ ತೊಟ್ಟಿಲು, ಕೃಷ್ಣನ ತೊಟ್ಟಿಲು, ಗಿಂಡಿ, ಲತ್ತು, ಎಲೆಬಳ್ಳಿ, ಶಂಖ ಮುಂತಾದ ಹಚ್ಚೆಯನ್ನು ಇಟ್ಟುಕೊಳ್ಳುತ್ತಾರೆ. ಆದರೆ ಈಗಿನ ಹುಡುಗಿಯರು ಹಚ್ಚೆ ಇಟ್ಟುಕೊಳ್ಳುವ ಪದ್ಧತಿಯನ್ನು ಬಿಟ್ಟಿದ್ದಾರೆ. ಹಸಲರು ಬುಡಕಟ್ಟಿನಲ್ಲಿ

ಗುಂಪು ಜೀವನ ಪದ್ಧತಿಯನ್ನು ನೋಡಬಹುದಾಗಿದೆ. ಅವರದೇ ಆದ ನಂಬಿಕೆ, ಸಂಪ್ರದಾಯ, ಕಟ್ಟುಪಾಡುಗಳು, ಸಂಸ್ಕೃತಿ, ನ್ಯಾಯ ಪದ್ಧತಿಯನ್ನು ಕಾಣಬಹುದಾಗಿದೆ. ಒಗ್ಗೂಡಿ ಜೀವನ ನಡೆಸುತ್ತಿರುವ ಶಿವಮೊಗ್ಗ ಜಿಲ್ಲೆಯ ಹಸಲರು ತಮ್ಮದೇ ಆದ ನ್ಯಾಯ ಪದ್ಧತಿಯನ್ನು ಅಥವಾ ಪಂಚಾಯತಿಯನ್ನು ಹೊಂದಿದೆ. ಈ ಮೊದಲು ಹಸಲರು ಬುಡಕಟ್ಟಿನ ಯಜಮಾನರಾದ ಕೋಲಾಕಾರ, ಕೊಂಡಿಕಾರ, ಬುದ್ಧಿವಂತರ ನೇತೃತ್ವದಲ್ಲಿ ಪಂಚಾಯಿತಿ ನಡೆಯುತ್ತಿತ್ತು. ಈ ನ್ಯಾಯ ಪದ್ಧತಿ ಹೆಚ್ಚು ದಿನಗಳವರೆಗೆ ನಡೆಯಲಿಲ್ಲ. ಆದರೆ ಈಗ ಬ್ರಾಹ್ಮಣರ ಮನೆಯ ಪಡೆಸಾಲಿಯಲಿ ಹಸಲರು ಬುಡಕಟ್ಟಿನ ಪಂಚಾಯಿತಿಗಳು ನಡೆಯುತ್ತಿವೆ. ಸಣ್ಣ ಪುಟ್ಟ ಕಳ್ಳತನ, ಕೌಟುಂಬಿಕ ಕಲಹ, ಗಂಡ ಹೆಂಡತಿಯ ಜಗಳ, ಅನೈತಿಕ ಸಂಬಂಧ ಕೃಷಿ ಸಲಕರಣೆಗಳ ಕಳ್ಳತನ ಬೇರೆ ಜಾತಿಯವರೊಂದಿಗೆ ಅನೈತಿಕ ಸಂಬಂಧ, ಅಂತರ್ಜಾತಿ ವಿವಾಹ, ಅಕ್ಕ ಪಕ್ಕದವರ ಮನೆಯವರೊಂದಿಗಿನ ಜಗಳ ಇನ್ನಿತರ ವಿಷಯಗಳಿಗೆ ಬ್ರಾಹ್ಮಣರ ಪಡೆಸಾಲಿಯಲ್ಲಿ ಪಂಚಾಯಿತಿಗಳು ನಡೆಯುತ್ತಿವೆ. ಹಸಲರು ಬುಡಕಟ್ಟಿನ ಯುವತಿ ಅನ್ಯ ಜಾತಿಯ ಮನೆಯವರೊಂದಿಗೆ ಹೋಗಿ ಮದುವೆಯಾದರೆ ಆ ಯುವತಿಯನ್ನು ಮತ್ತೆ ಹಸಲರು ಕರೆತರುವುದಿಲ್ಲ. ಈ ಮೊದಲು ಜಾತಿ ಬಹಿಷ್ಕಾರಗಳು ನಡೆಯುತ್ತಿದ್ದವು ಈ ಜಾತಿ ಬಹಿಷ್ಕಾರವನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಪುನರ್ವಿವಾಹಗಳು ನಡೆಯದು ಕೂಡ ಕಡಿಮೆಯಾಗಿವೆ. ಹಸಲರು ತಮ್ಮೊಂದಿಗೆ ಜೀವನ ನಡೆಸುವ ಈಡಿಗರು, ಬ್ರಾಹ್ಮಣರು, ಲಿಂಗಾಯತರು, ಬೇಡರು, ತಮಿಳರು ಇನ್ನಿತರ ಸಮುದಾಯಗಳೊಂದಿಗೆ ಸಾಮರಸ್ಯದ ಜೀವನವನ್ನು ನಡೆಸುತ್ತಿದ್ದಾರೆ.

### ೪.೫. ಆಹಾರ ಮತ್ತು ಬೇಟೆ

ಹಸಲರು ಬೇಟೆಯಾಡುವುದರಲ್ಲಿ ತುಂಬಾ ನಿಪುಣರು. ಹಿಂದೆ ಬಿಲ್ಲಿಗೆ ಅಂಬನ್ನು ಏರಿಸಿ ಕಬ್ಬೆಕ್ಕು, ಬರ್ಕ, ಮೊಲ, ಕಾಡುಹಂದಿ, ಜಿಂಕೆ, ಉಡ, ಅಡವಿಕೋಳಿ, ಮುಂಗಸಿ, ಕಾಡುಕೋಣ ಮುಂತಾದ ಕಾಡುಪ್ರಾಣಿಗಳ ಮಾಂಸವನ್ನು ತಿನ್ನುತ್ತಿದ್ದರು. ಇತ್ತೀಚಿನವರೆಗೆ ಸೋವು ಬೇಟೆಯಾಡಿ ನಾಡಬಂದೂಕಿನಿಂದ ಕಾಡುಪ್ರಾಣಿಗಳನ್ನು ಕೊಲ್ಲುತ್ತಿದ್ದರು. ಆದರೆ ಅರಣ್ಯ ಇಲಾಖೆಯ ವನ್ಯಪ್ರಾಣಿ ಸಂರಕ್ಷಣಾ ಕಾಯಿದೆಯ ಪ್ರಕಾರ ಬೇಟೆಯಾಡುವುದನ್ನು ನಿಲ್ಲಿಸಿದ್ದಾರೆ. ಹಸಲರು ಕಾಡುಹಂದಿಯನ್ನು ತಿನ್ನುತ್ತಾರೆ. ಆದರೆ ಕಾಡುಹಂದಿ ಮಾಂಸವನ್ನು ಮನೆಯ ಒಳಗೆ ಬೇಯಿಸುವುದಿಲ್ಲ. ಹಂದಿಮಾಂಸವನ್ನು ಬೇಯಿಸಲು ಪ್ರತ್ಯೇಕ ಮಣ್ಣಿನ ಬಚ್ಚಲುಮನೆಯಲ್ಲಿ ಬೇಯಿಸಿ ಹೊರಗಡೆ ಊಟ ಮಾಡುತ್ತಾರೆ. ಮನೆಯ ಒಳಗೆ ತರುವುದಿಲ್ಲ. ಕೆಲವರು ಹಂದಿ ಮಾಂಸವನ್ನೇ ತಿನ್ನುವುದಿಲ್ಲ. ಮೊಲ, ಕಾಡುಬೆಕ್ಕು (ಕಬ್ಬೆಕ್ಕು), ಬರ್ಕ, ಮುಳ್ಳುಹಂದಿ, ಜಿಂಕೆ, ಉಡ, ಕಾಡುಕುರಿ, ಕೆಂಜಳಿಲು, ಮುಂಗುಸಿ, ಕಾಡುಕೋಣ ಮುಂತಾದ ಪ್ರಾಣಿಗಳನ್ನು ತಿನ್ನುತ್ತಾರೆ. ಬೇಟೆಯಲ್ಲಿ ತೊಡಗುವುದು ವಿರಳವಾದುದರಿಂದ ಕಾಡುಪ್ರಾಣಿಗಳ ಮಾಂಸ ಕಡಿಮೆ. ಅವರು ಎಲ್ಲಾ ತರದ ಮೀನನ್ನೂ ತಿನ್ನುತ್ತಾರೆ. ಶಿವಮೊಗ್ಗ ಜಿಲ್ಲೆಯ ಹಸಲರು ಬುಡಕಟ್ಟಿನವರಿಗೆ ಕರಿಮೀನು ತುಂಬಾ ಇಷ್ಟ. ಸಾಗರ, ಸೊರಬ, ಹೊಸನಗರ, ಭಾಗದ ಹಸಲರು ಹಂದಿ ಮಾಂಸವನ್ನು ತಿನ್ನುವುದಿಲ್ಲ. ಗೋಮಾಂಸ ನಿಷೇಧ. ಹಸಲರು ಅಕ್ಕಿಯನ್ನು ಕುಟ್ಟಿ ಹಿಟ್ಟು

ಮಾಡಿ ರೊಟ್ಟಿ ಮಾಡುತ್ತಾರೆ. ರೊಟ್ಟಿ ದಪ್ಪವಾಗಿರುತ್ತದೆ. ಕುಟ್ಟಿದ ಹಿಟ್ಟಿನ ರೊಟ್ಟಿ ತುಂಬಾ ರುಚಿಯಾಗಿರುತ್ತದೆ ಎಂದು ಹೇಳುತ್ತಾರೆ. ವಿಶೇಷ ಸಂದರ್ಭಗಳಲ್ಲಿ ಅಕ್ಕಿಯ ಹಿಟ್ಟನ್ನು ಬೇಯಿಸಿ, ಅಂಗೈ ಅಗಲ ಬಡಿದು (ಚಪಾತಿಯಂತೆ) ಮಧ್ಯೆ ಒಂದು ತೂತು ಮಾಡಿ ಎಣ್ಣೆಯಲ್ಲಿ ಕರಿಯುತ್ತಾರೆ. ಇದಕ್ಕೆ 'ಕಾಯಿಗರಿಗೆ ಕಜ್ಜಾಯ' ಎನ್ನುವರು. ಬೆಳೆದ ಬಗಿನೆ ಮರದ ತುಂಡುಗಳನ್ನು ಕತ್ತರಿಸಿ ನೀರಿನಲ್ಲಿ ನೆನಸುತ್ತಾರೆ. ಹದಿನೈದು ದಿನಗಳ ನಂತರ ನೀರಿನಿಂದ ಹೊರತೆಗೆದು ಒಣಗಿಸುತ್ತಾರೆ. ಚೆನ್ನಾಗಿ ಒಣಗಿದ ನಂತರ ಕತ್ತಿಯಿಂದ ಕೊಚ್ಚಿ ಸಣ್ಣ ಸಣ್ಣ ಚೂರುಗಳನ್ನಾಗಿಸಿ ಅವನ್ನು ಒರಳಿನಲ್ಲಿ ಕುಟ್ಟಿ ಪುಡಿ ಮಾಡಿ ಈ ಪುಡಿಯನ್ನು ಒಂದು ತೆಳುಬಟ್ಟೆಯಿಂದ ಜರಡಿಮಾಡಿ ಹಿಟ್ಟನ್ನು ಸಂಗ್ರಹಿಸುತ್ತಾರೆ. ಈ ಹಿಟ್ಟು ಬಿಳಿಯಾಗಿ ಸುಣ್ಣದ ಪುಡಿಯಂತೆ ಇರುತ್ತದೆ. ಕುದಿಯುವ ನೀರಿಗೆ ಹಾಕಿ ಗಂಜಿ ತಯಾರಿಸುತ್ತಾರೆ. ಈ ಬಗಿನೆ ಗಂಜಿಯನ್ನು ಕುಡಿಯುತ್ತಾರೆ. ಹಸಲರು ಕಡುಬಡವರಾದ್ದರಿಂದ ನೀರಿನಲ್ಲಿ ವಾಟೆಹುಳಿ ಕಿವುಚಿ ಸ್ವಲ್ಪ ಖಾರ, ಉಪ್ಪು ಸೇರಿಸಿ ತಂಬುಳಿ ತಯಾರಿಸಿ ಅನ್ನಕ್ಕೆ ಹಾಕಿಕೊಂಡು ನಂಚಿಕೊಳ್ಳುತ್ತಾ ಊಟ ಮಾಡುತ್ತಾರೆ ಇರುವೆ ಆಹಾರದ ಚಗಳಿ ಮೊಟ್ಟೆಯ ಕೊಟ್ಟೆಯನ್ನು ಕಾಡಿನಿಂದ ತಂದು ಚಗಳಿ ಮೊಟ್ಟೆಗಳಿಂದ ಚಟ್ನಿ ಮಾಡುತ್ತಾರೆ. ಹಳ್ಳಿಗಳಲ್ಲಿ ಮತ್ತು ಮಳೆಗಾಲದಲ್ಲಿ ಭತ್ತದ ಗದ್ದೆಗಳಲ್ಲಿರುವ ಕಾರೇಡಿ, ಬೆಳ್ಳೇಡಿಗಳನ್ನು ಹಿಡಿದು ತಂದು ಸಾರು ಮಾಡುತ್ತಾರೆ. ಕಾಡಿನಿಂದ ಜೇನುಮರಿಯನ್ನು ತಂದು ಪಲ್ಯ ಮಾಡುತ್ತಾರೆ. ಕಾಡಿನಲ್ಲಿ ದೊರೆಯುವ ಕರಡಿಸೊಪ್ಪು, ಗಣಪೆಕಾಯಿ, ಕಳಲೆ, ಸಾರು ಪಲ್ಯ ಮಾಡಿ ಉಪಯೋಗಿಸುತ್ತಾರೆ. ಮಳೆಗಾಲದಲ್ಲಿ ಹೆಚ್ಚು ಮೀನು ದೊರಕಿದಾಗ ಬೆಸಲುಕಳಿಯಲ್ಲಿ ಒಣಗಿಸಿ ಕರಿಮೀನು ಮಾಡಿಟ್ಟುಕೊಳ್ಳುತ್ತಾರೆ. ಕರಿಮೀನು ಹಸಲರು ಬುಡಕಟ್ಟಿನವರಿಗೆ ತುಂಬಾ ಪ್ರಿಯವಾದದು. ತೋಟದಲ್ಲಿ ಸಿಗುವ ಬಳ್ಳಿಚೀಪು, ಕೆಸುವಿನಗಡ್ಡೆ, ಹಾಲುಕೆಸ, ಕೆಸುವಿನ ದಂಟು, ಪಂಜರ ಗಡ್ಡೆ ಮುಂತಾದವುಗಳ ಸಾರು ಮಾಡಿ ಬಳಸುತ್ತಾರೆ. ಕಾಡಿನಲ್ಲಿ ದೊರೆಯುವ ಮಾವಿನಹಣ್ಣು, ಹಲಸಿನ ಹಣ್ಣು, ಸಂಪೆಹಣ್ಣು, ನೇರಳೆ, ಪರಗಿ, ನುರಕಲು, ಮುಳ್ಳು ಹಣ್ಣುಗಳನ್ನು ತಂದು ತಿನ್ನುತ್ತಾರೆ. ಹಸಲರು ಅಕ್ಕಿ, ರಾಗಿ, ಗೋಧಿ, ಜೋಳವನ್ನು ಬಳಸುತ್ತಾರೆ. ಬೆಳಿಗ್ಗೆ ಅಕ್ಕಿ ಗಂಜಿ, ಒಣಮೀನು ಚಟ್ನಿ ಮಾಡುತ್ತಾರೆ. ಮಧ್ಯಾಹ್ಯ, ರಾತ್ರಿ ಎರಡು ಹೊತ್ತು ಊಟ ಮಾಡುತ್ತಾರೆ. ಸೊರಬ ತಾಲ್ಲೂಕಿನ ಹಸಲರು ಸ್ವಲ್ಪ ಅನುಕೂಲ ಸ್ಥಿತಿಯಲ್ಲಿದ್ದಾರೆ. ಪ್ರತಿಯೊಬ್ಬರೂ ಜಮೀನು ಹೊಂದಿರುವುದರಿಂದ ಶ್ರಮಪಟ್ಟು ದುಡಿಯುತ್ತಾರೆ. ಜಮೀನಿನಲ್ಲಿ ಭತ್ತ. ಹತ್ತಿ, ಜೋಳ ಶೇಂಗಾ ಬೆಳೆಯುತ್ತಾರೆ. ಇವರ ಬೆಳಗಿನ ಉಪಹಾರ ಅಕ್ಕಿ ಹಾಗೂ ಚಟ್ನಿ, ಮಧಾಹ್ನ, ಸಂಜೆಯ ಊಟದಲ್ಲಿ ಅನ್ನ, ಸಾರು, ಉಪ್ಪಿನಕಾಯಿ, ಮಜ್ಜಿಗೆ ಮೆಣಸು ಬಳಸುವರು, ರಾಗಿ ಮುದ್ದೆ, ಅಕ್ಕಿ ಕಡುಬು, ಅಕ್ಕಿ ದೋಸೆ, ಕಾಡಿನಲ್ಲಿ ಸಿಗುವ ಕೆಲವು ಪಲ್ಯೆಗಳನ್ನು ಸೇವಿಸುತ್ತಾರೆ. ಹಸಲರು ಬುಡಕಟ್ಟಿನ ಪುರುಷರು ಮದ್ಯಪಾನವನ್ನು ಮಾಡುವುದು ತುಂಬಾ ಕಡಿಮೆ. ಬೀಡಿ ಸಿಗರೇಟು ಹೊಗೆಸೊಪ್ಪು, ತಂಬಾಕು, ಗುಟ್ಕಾ ಇತ್ಯಾದಿ ಸೇವನೆ ತುಂಬಾ ಕಡಿಮೆ. ಹೊಸನಗರ ಭಾಗದವರು ತುಂಬಾ ಸುಧಾರಿಸಿದ್ದಾರೆ. ಹಬ್ಬ ಹರಿದಿನಗಳಲ್ಲಿ ಹೋಳಿಗೆ, ದೋಸೆ, ಕಡುಬ,

ಪಾಯಸಗಳನ್ನು ಮಾಡುತ್ತಾರೆ. ಮಲೆನಾಡಿನ ಹಸಲರು ತಮ್ಮ ಹಿತ್ತಲಲ್ಲಿ ಬೆಳೆಯುವ ಬಸಳೆಸೊಪ್ಪು, ತೊಂಡೆಕಾಯಿ, ನೂಗೆಕಾಯಿ ಆಸೆ(ಸಾರು) ಮಾಡಲು ಬಳಸುತ್ತಾರೆ. ಹಸಲರು ಬುಡಕಟ್ಟಿನವರಿಗೆ ತಮ್ಮದೇ ಎಂದು ಹೇಳುವ ಯಾವುದೇ ಸಲಕರಣೆಗಳಿಲ್ಲ. ಇತರೇ ಕೆಳಸ್ತರದ ಜನರಂತೆ ಮಣ್ಣಿನ ಮಡಕೆಗಳು, ಹಿತ್ತಾಳೆ, ತಾಮ್ರ, ಅಲ್ಯೂಮಿನಿಯಂ ವಸ್ತುಗಳಿವೆ. ಹಿಂದೆ ಅವರು ಮಣ್ಣಿನ ಮಡಕೆಯಲ್ಲಿ ಅಡುಗೆ ಮಾಡುತ್ತಿದ್ದರು. ಈಗ ಅಲ್ಯೂಮಿನಿಯಂ ಪಾತ್ರೆಗಳನ್ನು ಬಳಸುತ್ತಾರೆ. ಕೆಲವರು ಈಗಲೂ ಮಣ್ಣಿನ ಮಡಕೆಯನ್ನು ಉಪಯೋಗಿಸುತ್ತಾರೆ. ಮಣ್ಣಿನ ಪಾತ್ರೆಗಳಲ್ಲಿ ದವಸ ಧಾನ್ಯಗಳನ್ನು ಶೇಖರಿಸುತ್ತಾರೆ. ಹಾಸಿಗೆ ವಸ್ತುಗಳು(ಈಚಲು ಚಾಪೆ), ಬಿದಿರಿನ ಬುಟ್ಟಿಗಳು, ಕುಡುಗೋಲು, ಕಂದಲಿಗಳು, ಕೊಡಲಿ, ಪಿಕಾಸಿ, ಹಾರೆ, ವಡ್ಯಾಣ, ಕೊಕ್ಕೆ, ಅಡಿಕೆ ತೋಟದಲ್ಲಿ ಕೆಲಸ ಮಾಡುವವರು ತಲೆಗೆ ಹಾಳೆ ಅಥವಾ ಕಂಬಳಿ ಟೋಪಿ, ಎದೆಗೆ ಎದೆಹಾಳೆ, ಕಡುಗಿನ ಮಣಿ, ಹಗ್ಗ, ದೋಟಿ ಕೋಲುಗಳನ್ನು ಇಟ್ಟುಕೊಂಡಿದ್ದಾರೆ. ಸೊರಬ, ಶಿಕಾರಿಪುರ ತಾಲ್ಲೂಕಿನ ಹಿರೇಕಸವಿ, ಗುಡ್ಡದ ಹೊಸಳ್ಳಿಗಳಲ್ಲಿ ಕೆಲವರು ಎತ್ತಿನಗಾಡಿಗಳನ್ನು ಇಟ್ಟುಕೊಂಡಿದ್ದಾರೆ. ಕಮ್ಮಾರಗೋಡು ಹಾಗೂ ಬೆಟ್ಟದ ಮನೆಯಲ್ಲಿ ಬಿಲ್ಲು ಹಾಗೂ ಬಾಣಗಳನ್ನು ಇಟ್ಟುಕೊಂಡಿದ್ದಾರೆ. ಶಿಕಾರಿ ಬಲೆಗಳು, ಮೀನುಬಲೆಗಳು ಅವರಲ್ಲಿವೆ. ಶಿಕಾರಿ ಮಾಡಲು ಹೆಡ್‌ಲೈಟ್ ಬಳಸುತ್ತಾರೆ. ಬ್ಯಾಟರಿ, ಟಾರ್ಚ್‌ಲೈಟ್, ಕೊಡೆ, ಕಂಬಳಿ, ಕೈಗಡಿಯಾರ, ರೇಡಿಯೋ, ಸೈಕಲ್ ಬಳಕೆಯಿದೆ. ಆರ್ಥಿಕವಾಗಿ ಚೆನ್ನಾಗಿದ್ದವರು ಮರದ ಕುರ್ಚಿ, ಹಗ್ಗದ ಮಂಚ, ಬೆಂಚು, ಸ್ಟೂಲುಗಳನ್ನು ಹೊಂದಿದ್ದಾರೆ. ಸರ್ಕಾರಿ ಉದ್ಯೋಗದಲ್ಲಿದ್ದ ಹಸಲರು ಇತರೆ ಜನಾಂಗದವರು ಬಳಸುವ ಟಿವಿ. ದ್ವಿಚಕ್ರವಾಹನ ಮುಂತಾದವುಗಳನ್ನು ಹೊಂದಿದ್ದಾರೆ. ಹಸಲರು ಬುಡಕಟ್ಟಿನ ಭೌತಿಕ ಲಕ್ಷಣಗಳು ಕೂಡ ವಿಭಿನ್ನವಾಗಿವೆ. ಲೂಯಿಸ್‌ರೈಸರು ಮೈಸೂರು ಗೆಜೆಟಿಯರ್ ಸಂಪುಟ ೩ರಲ್ಲಿ ಹಸಲರು ಬುಡಕಟ್ಟನ್ನು ಕುರಿತು ಹೇಳಿದ್ದಾರೆ. ಕುಳ್ಳನೆಯ, ದಪ್ಪ, ಕಪ್ಪುಬಣ್ಣದ, ಗುಂಗುರುಕೂದಲು ಇರುವವರು ಎಂದು ೧೯೬೧ರ ಮೈಸೂರು ಜನಗಣತಿ ವರದಿಯಲ್ಲಿ, ಕುಳ್ಳನೆಯ ದಷ್ಟಪುಷ್ಟ ಜನಾಂಗ, ಗುಂಗುರು ಕೂದಲು, ದೊಡ್ಡ ತಲೆಯುಳ್ಳವರು, ಕುಳ್ಳಗಿದ್ದರೂ ಕಟ್ಟುಮಸ್ತಾದ ಶರೀರವುಳ್ಳವರು, ಕಪ್ಪು ವರ್ಣದವರು, ಕೋಳಿಮೊಟ್ಟೆ ಆಕಾರದ ಮುಖ, ಕೆಲವರದು ದುಂಡುಮುಖ, ಕಣ್ಣು ಹುಬ್ಬುಗಳು ನೇರ, ಸಾಧಾರಣ ತುಟಿಗಳು, ಆಳವಾದ ಮೂಗಿನ ಹೊಳ್ಳೆಗಳು. ಹಸಲರು, ಇತರೆ ಕೆಳಸ್ತರದವರಿಗಿಂತ ಬೇರೆಯಲ್ಲ. ಎಲ್.ಕೆ. ಅನಂತಕೃಷ್ಣ ಅಯ್ಯರ್ ಮತ್ತು ಎಚ್.ವಿ. ನಂಜುಂಡಯ್ಯನವರ ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ ಗ್ರಂಥದ ಸಂಪುಟ ೧ರಲ್ಲಿ ಪಶ್ಚಿಮಘಟ್ಟದ ಶ್ರೇಣಿಗಳಲ್ಲಿ ವಾಸಿಸುವ ಬಹುಮುಖ್ಯ ಎರಡು ಬುಡಕಟ್ಟುಗಳೆಂದರೆ ಹಸಲರು ಹಾಗೂ ಮಲೇರು. ಜಾತಿ ಅಂತಸ್ತಿನಲ್ಲಿ ಇವರು ಹಳೆಪೈಕಿ ಜನಾಂಗದವರಿಗಿಂತ ಕೆಳಗೆ, ಆದರೆ ಹೊಲೆಯರಿಗಿಂತ ಮೇಲೆ, ಅವರದು ಕುಳ್ಳನೆ ಶರೀರವಾದರೂ ಮಾಂಸಖಂಡ ತುಂಬಿ ಕೊಂಡಿರುತ್ತಾರೆ. ಗುಂಗುರು ಕೂದಲು, ಕೋಳಿ ಮೊಟ್ಟೆ ಆಕಾರದ ತಲೆಯುಳ್ಳವರು ಎಂದು ಹೇಳುತ್ತಾರೆ. ೧೯೯೧ರಲ್ಲಿ ಪ್ರಕಟವಾದ

ಕೃಷ್ಣಮೂರ್ತಿ ಹನೂರು ವಿಶ್ವಕೋಶ (ಇಂಗ್ಲೀಷ್) ಸಂಪುಟ ೧ರಲ್ಲಿ ಈ ಬುಡಕಟ್ಟಿನವರು ಕಪ್ಪುವರ್ಣ, ತೆಳು ಹಾಗೂ ಉದ್ದನೆಯ ಶರೀರ, ಸಾಧಾರಣ ಮೈಕಟ್ಟು, ಮರದಿಂದ ಮರ ದಾಟಿ ಅಡಿಕೆ ಕಾಯಿಕೀಳಲು ಹೇಳಿ ಮಾಡಿಸಿದಂತಿರುತ್ತದೆ ಅವರ ಶರೀರ ಎಂದು ಹೇಳಿದೆ. ಹಿಂದೆ ಕ್ಷೌರಿಕರು ಇವರಿಗೆ ಕ್ಷೌರ ಮಾಡುತ್ತಿರಲಿಲ್ಲ. ಅಗಸರು ಇವರ ಬಟ್ಟೆಯನ್ನು ಶುಚಿ ಮಾಡುತ್ತಿರಲಿಲ್ಲ. ಕ್ಷೌರಿಕರು ಬಳಸುವ ನೀರು ಬಾಯಿಗೆ ಹೋಗಿ ಮೈಲಿಗೆಯಾಗುತ್ತದೆ. ಅಗಸರು ಮುಟ್ಟಾದ ಹೆಂಗಸರ ಬಟ್ಟೆಯನ್ನು ತೊಳೆಯುವುದರಿಂದ ಮೈಲಿಗೆಯಾಗುತ್ತದೆ ಎಂದು ಅವರ ನಂಬಿಕೆ. ಈಗ ಈ ನಂಬಿಕೆಗಳೆಲ್ಲ ಬದಲಾಗಿವೆ. ಮಹಿಳೆಯರು ಕಪ್ಪು ವರ್ಣದವರಾದರೂ ಕೆಲವರು ಗೋಧಿಬಣ್ಣದವರೂ ಇರುತ್ತಾರೆ. ದುಂಡನೆಯ ಮುಖ, ನೀಳವಾದ ಮೂಗು, ಇತರೆ ಜನಾಂಗದ ಮಹಿಳೆಯರಿಗಿರುವಂತೆ ತುಟಿ, ಕಣ್ಣು, ಹಣೆ, ಹುಬ್ಬುಗಳಿರುತ್ತವೆ. ಕಪ್ಪು ವರ್ಣದ ಚೆಲುವೆಯರು. ತಮ್ಮ ತಮ್ಮ ಮೈಕಟ್ಟಿಗೆ ಸಂಬಂಧಿಸಿದಂತೆ ಅವರ ಉಡುಪುಗಳು ಇರುವುದನ್ನು ಕಾಣಬಹುದಾಗಿದೆ. ಹಸಲರು ತಾವು ವಾಸಿಸುವ ಪರಿಸರವನ್ನು ಸ್ವಚ್ಛವಾಗಿಟ್ಟುಕೊಳ್ಳುತ್ತಾರೆ. ಮನೆಯ ಒಳಗೆ ಹಾಗೂ ಮನೆಯ ಅಂಗಳವನ್ನು ತುಂಬಾ ಸ್ವಚ್ಛವಾಗಿಡುವರು. ಆದರೆ ದನದ ಕೊಟ್ಟಿಗೆ ಮತ್ತು ಗೊಬ್ಬರಗುಂಡಿ ಹಾಗೂ ಕೋಳಿದೊಡ್ಡಿ ವಾಸದ ಮನೆಗೆ ಹತ್ತಿರದಲ್ಲಿಯೇ ಇರುವುದರಿಂದ ನೊಣ ಹಾಗೂ ಚಿಗಟಗಳು ಬಹಳವಾಗುತ್ತವೆ. ಮನೆಗಳಿಗೆ ಚರಂಡಿ ವ್ಯವಸ್ಥೆ ಇರುವುದಿಲ್ಲ. ಬಚ್ಚಲುನೀರು ಹರಿದುಹೋಗದೇ ಗುಂಡಿ ಯಲ್ಲಿ ನಿಂತುಬಿಡುತ್ತದೆ. ಸರ್ಕಾರದಿಂದ ಕಟ್ಟಿಸಿರುವ ಕಾಲೋನಿಯ ಮನೆಗಳಲ್ಲಿ ಪರಿಸ್ಥಿತಿ ಸ್ವಲ್ಪ ಸುಧಾರಿಸಿದೆ. ವಾರಕ್ಕೆ ಎರಡು ಅಥವಾ ಮೂರು ಬಾರಿ ಸ್ನಾನ ಮಾಡುತ್ತಾರೆ. ಕೆಲವು ಕಡೆ ಪ್ರತಿದಿನ ಕೆಲಸವಾದ ಮೇಲೆ ಸ್ನಾನ ಮಾಡುವರು. ಸ್ನಾನದ ಸಾಬೂನು ಬಳಸುವುದು ಕಡಿಮೆ. ಅಂಟುವಾಳ ಮತ್ತು ಸೀಗೇಕಾಯಿಯನ್ನು ಪುಡಿ ಮಾಡಿಕೊಂಡು ಉಪಯೋಗಿಸುವರು. ಇತ್ತೀಚೆಗೆ ಕೆಲವರು ಸ್ನಾನದ ಸಾಬೂನು ಬಳಸುವರು. ಬೆಳಿಗ್ಗೆ ಎದ್ದಕೂಡಲೇ ಮೊದಲ ಕೆಲಸ ಹಲ್ಲುಜ್ಜಿ ಮುಖ ತೊಳೆಯುವುದು. ಹಲ್ಲು ಉಜ್ಜಲು ಮಸಿಕೆಂಡವನ್ನು ಬಳಸುವರು, ಬ್ರಷ್ ಮತ್ತು ಪೇಸ್ಟ್ ಬಳಸುವುದಿಲ್ಲ. ನೈರ್ಮಲ್ಯದ ಬಗ್ಗೆ ಮಕ್ಕಳಿಗೆ ತಿಳಿಹೇಳುವುದು ಕಡಿಮೆ. ಹೆಣ್ಣು ಮಕ್ಕಳು ವಾರಕ್ಕೆ ಎರಡು ಅಥವಾ ಮೂರು ಬಾರಿ ಬಟ್ಟೆ ತೊಳೆಯುತ್ತಾರೆ. ಸೋಪು ಬಳಸುವರು. ಈ ಒಂದು ಪರಿಜ್ಞಾನ ಅವರಿಗಿದೆ. ಸೊರಬ ತಾಲ್ಲೂಕಿನ ಹಸಲರು ಬುಡಕಟ್ಟಿನ ಮನೆಗಳ ಎದುರಿಗೆ ಅಂಗಳದಲ್ಲಿ ಚೌಕಾಕೃತಿಯ ಒಂದು ಉಬ್ಬಿದ ಭಾಗವಿರುತ್ತದೆ. ಅದರ ಮೇಲೆ ಸಗಣೆ ಉಂಡೆಯನ್ನಿಟ್ಟು ಅದರ ಮೇಲೆ ಕರಕಿ ಹುಲ್ಲು ಅಥವಾ ಹೂವನ್ನು ಸಿಕ್ಕಿಸುತ್ತಾರೆ. ಅದಕ್ಕೆ ಅವರು ಬೆನಕಪ್ಪ ಎಂದು ಕರೆಯುತ್ತಾರೆ. ಈ ಆಚರಣೆ ಇಂದಿಗೂ ಇದೆ. ಅಲ್ಲದೇ ಶಿಕಾರಿಪುರ, ಸೊರಬ, ಸಾಗರ ಮತ್ತು ಶಿವಮೊಗ್ಗ, ತೀರ್ಥಹಳ್ಳಿಯಲ್ಲಿ ಹಸಲರು ಮನೆ ಮುಂದೆ ತುಳಸಿ ಗಿಡ ಇರಲೇಬೇಕು. ಪ್ರತಿ ದಿನ ಮತ್ತು ಪ್ರತಿನಿತ್ಯ ತುಳಸಿ ಗಿಡವನ್ನು ಪೂಜೆ ಮಾಡುವ ಸಂಪ್ರದಾಯ ಹಸಲರು ಬುಡಕಟ್ಟಿನಲ್ಲಿದೆ.

## ೪.೬. ಮದುವೆ ವ್ಯವಸ್ಥೆ

ಹಸಲರು ಬುಡಕಟ್ಟಿನಲ್ಲಿ ಬಾಲ್ಯವಿವಾಹ ಪದ್ಧತಿಯಿಲ್ಲ. ವಿವಾಹ ಸಂಬಂಧ ತಂದೆಯ 'ಬಳಿ'ಗೆ ಸಂಬಂಧಿಸಿದಂತೆ ನಡೆಯುವುದಿಲ್ಲ. ವಿವಾಹದ ಮಾತುಕಥೆಗಳೆಲ್ಲ ತಾಯಿ 'ಬಳಿ'ಗೆ ಸಂಬಂಧಿಸಿದಂತೆ ನಡೆಯುತ್ತದೆ. ತಂದೆಯ ಸೋದರಿ ಸೋದರತ್ತೆಯ ಮಗಳು ಮತ್ತು ಸೋದರಮಾವನ ಮಗಳನ್ನು ವಿವಾಹ ಆಗಬಹುದು ಮತ್ತು ತನ್ನ ಅಕ್ಕನ ಅಥವಾ ತಂಗಿಯ ಮಗಳನ್ನು ಮದುವೆಯಾಗುವ ಪದ್ಧತಿಯಿದೆ. ಎರಡು ಕುಟುಂಬಗಳು ಪರಸ್ಪರ ಗಂಡು-ಹೆಣ್ಣು ಕೊಟ್ಟು-ಕೊಳ್ಳಬಹುದು. ಈ ಪದ್ಧತಿಗೆ 'ಹೆಣ್ಣು ಕೊಟ್ಟು ಹೆಣ್ಣು' ತೆಗೆದುಕೋ ಎನ್ನುವರು. ಮೊದಲನೇ ಹೆಂಡತಿ ಮರಣ ಹೊಂದಿದರೆ ಹೆಂಡತಿ ಸಹೋದರಿಯನ್ನು ವಿವಾಹ ಆಗುವುದಿಲ್ಲ. ಕೆಲವು ಕಡೆ ತಾಯಿಯ 'ಬಳಿ'ಯವರನ್ನು ಮದುವೆಯಾಗುವುದಿಲ್ಲ. ವಧು ಅಥವಾ ವರ ತಂದೆಯ ಬಳಿಯವರಾಗಿದ್ದರೆ ಮದುವೆ ನಡೆಯುತ್ತದೆ. ಸಹೋದರಿಯರನ್ನು ಮದುವೆ ಯಾಗುವುದಿಲ್ಲ. ತೀರ್ಥಹಳ್ಳಿಯಲ್ಲಿ ತಂದೆಯ ಬಳಿಯವರನ್ನು ಮದುವೆ ಆಗುವ ಹಾಗಿಲ್ಲ. ವರ ಸಿಗದಿದ್ದಾಗ ಬಸವಿ ಬಿಡುವ ಪದ್ಧತಿಯಿಲ್ಲ. ಮದುವೆಗಿಂತ ಮೊದಲು ಲೈಂಗಿಕಸಂಬಂಧಕೂಡ ನಿಷೇಧ. ಹೆಣ್ಣುಮಕ್ಕಳನ್ನು ಋತುಮತಿಯಾಗುವ ಸ್ವಲ್ಪ ಮೊದಲ ಅಥವಾ ನಂತರ ಮದುವೆ ಮಾಡುತ್ತಾರೆ. ಹೆಣ್ಣುಮಕ್ಕಳು ಸಾಮಾನ್ಯವಾಗಿ ೧೪ರಿಂದ೧೮ರ ವಯಸ್ಸಿಗೆ ಋತುಮತಿಯಾಗುತ್ತಾರೆ. ಹುಡುಗರಿಗೆ ಮದುವೆಯಾಗುವ ವಯಸ್ಸು ೨೪ರಿಂದ ೨೮. ಬಡತನದಿಂದಾಗಿ ಕೆಲವು ಸಾರಿ ಮದುವೆ ಮಾಡುವುದು ನಿಧಾನವಾಗುತ್ತದೆ. ಪರಿಚಯ, ಗೊತ್ತುಗುರಿಯಿಲ್ಲದ ಕಡೆ ವಧು ತರವುದಿಲ್ಲ. ಹತ್ತಿರದ ಹಳ್ಳಿ, ಪರಿಚಯವಿರುವ ಕಡೆ ಹುಡುಕುತ್ತಾರೆ ಸೊರಬ ತಾಲ್ಲೂಕಿನ ಹಸಲರು ಮೂಡಿಗೆರೆ ತಾಲ್ಲೂಕಿನಲ್ಲಿ ಹುಡುಕುವುದಿಲ್ಲ. ಒಂದೇ ಬಳಿಯವರನ್ನು ಮದುವೆಯಾಗುವುದು ನಿಷೇಧ. ತಾಯಿಯ ದಾಯಾದಿಗಳು ಮತ್ತು ತಂದೆಯ ದಾಯಾದಿಗಳು ಸ್ವಂತ ಸಹೋದರರಿದ್ದರೆ ಅಲ್ಲಿ ಮದುವೆ ನಡೆಯುವುದಿಲ್ಲ. ಆದರೆ ದೂರದ ದಾಯಾದಿ ಸಂಬಂಧವನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಅಂತಹ ಕಡೆ ಮದುವೆಗಳು ನಡೆಯುತ್ತವೆ. ಅಕ್ಕನ ಮಗಳನ್ನು ಮದುವೆಯಾಗುವುದು ತುಳು ಹಸಲರು ಬುಡಕಟ್ಟಿನವರಲ್ಲಿ ನಿಷೇಧ. ಆದರೆ ಕನ್ನಡ ಹಸಲರು ಬುಡಕಟ್ಟಿನವರಲ್ಲಿ ನಿಷೇಧವಿಲ್ಲ. ಬಹುಪತ್ನಿತ್ವಕ್ಕೆ ವಿಶೇಷ ಸಂದರ್ಭಗಳಲ್ಲಿ ಮಾತ್ರ ಅನುಮತಿಯಿದ್ದರೂ ಕೂಡ ಏಕಪತ್ನಿತ್ವ ಪದ್ಧತಿಯನ್ನೇ ಅನುಸರಿಸುವರು. ಮಕ್ಕಳಾಗದಿದ್ದರೆ ಮರುಮದುವೆ ಮಾಡಿಕೊಳ್ಳಬಹುದು. ಹಿರಿಯ ಅಣ್ಣನ ಹೆಂಡತಿಯನ್ನು ತಾಯಿಯ ಸಮಾನ ಎಂದು ಗೌರವಿಸುವರು. ಹಸಲರು ಬುಡಕಟ್ಟಿನವರಲ್ಲಿ ಸಾಮಾಜಿಕವಾಗಿ ಒಪ್ಪುವ ಮದುವೆ ಶಾಸ್ತ್ರೋಕ್ತವಾಗಿ ನಡೆಯುತ್ತದೆ. ಮದುವೆಯಾಗುವಾಗ ವಧುವಿನ ತಂದೆ-ತಾಯಿಗೆ ಗಂಡಿನ ಕಡೆಯವರು 'ತೆರ' ಕೊಡಬೇಕಾಗುತ್ತದೆ. ಮಲೆನಾಡು ಹಸಲರು ಬುಡಕಟ್ಟಿನವರಲ್ಲಿ ವಧುದಕ್ಷಿಣೆ ನೂರಾಐವತ್ತು ರೂಪಾಯಿಗಳಿಂದ ಎರಡು ನೂರು ರೂಪಾಯಿಗಳವರೆಗೆ ಇದೆ. ಕೆಲವು ಕಡೆ ರೂ.೫೦೧ ಮತ್ತು ಎರಡು, ನಾಲ್ಕು ಚೀಲ ಭತ್ತವನ್ನು ಕೊಡಬೇಕು. ಇನ್ನೂ ತುಳು ಹಸಲರು ಬುಡಕಟ್ಟಿನವರಲ್ಲಿ ವಧು ದರ ರೂ.೧೨೧ ಮತ್ತು ಒಂದು ಮುಡಿ ಅಕ್ಕಿ, ಜೊತೆ

ಹಿತ್ತಾಳೆ ಬಳೆ, ಹಿತ್ತಾಳೆ, ತಾಳಿ, ಕರಿಮಣಿಸರ, ಒಂದು ಹಿತ್ತಾಳೆ ಉಂಗುರ ಹಾಗೂ ವಧುವಿಗೆ ಸೀರೆ ಕೊಡಬೇಕಾಗಿತ್ತು. ಸೊರಬ ತಾಲ್ಲೂಕಿನ ಹಸಲರು ಬುಡಕಟ್ಟಿನವರಲ್ಲಿ ಮಧು ದಕ್ಷಿಣೆ ೨೪ ರೂಪಾಯಿ, ಆರು ಚೀಲ ಭತ್ತ(ಮೂರು ಕ್ವಿಂಟಾಲ್) ಕೆಲವರು ೧೦೦ರೂಪಾಯಿ, ಹತ್ತು ಚೀಲ ಭತ್ತ, ಆಭರಣ, ಬಟ್ಟೆ ಕೊಡಬೇಕಾಗುತ್ತದೆ. ಸಾಗರ, ಸೊರಬ, ಹೊಸನಗರ ಭಾಗದಲ್ಲಿ ತೆರ ಕೊಡುವುದರ ಜೊತೆಗೆ ವಧುವಿಗೆ ಚಿನ್ನದ ಬೆಂಡೋಲೆ, ಬುಗುಡಿ, ಮೂಗುತಿ, ಮೂರು ಹರಳಿನ ನತ್ತು. ತಲೆಗೆ ಚಿನ್ನದ ಹೂ, ಬೆಳ್ಳಿಯ ಗೆಜ್ಜೆಪಟ್ಟಿ ಮಾಡಿ ಉಂಗುರ, ಕಾಲುಂಗುರ, ಕೋಲ್ಕಡಗ, ಎರಡು ದುಂಡು ಸೀರೆ ಕೊಡಬೇಕು. ಚಿನ್ನದ ತಾಳಿ, ಬಾಸಿಂಗ-ತೊಂಡಿಲು ಮಾಡಿಸುವ ಜವಾಬ್ದಾರಿಯು ವರನ ಕಡೆಯವರದು. ಮದುವೆಯಲ್ಲಿ ಈ ಒಡವೆಗಳನ್ನಿಡುವುದು ಸ್ವಲ್ಪ ಹೆಚ್ಚು ಕಡಿಮೆಯಾದರೆ ವಧುವಿನ ಕಡೆಯವರು ಜಗಳಕ್ಕೆ ನಿಲ್ಲುತ್ತಿದ್ದರು. ಜಗಳ ಉಲ್ಬಣವಾಗಿ ಮದುವೆ ನಿಂತುಹೋದ ಪ್ರಸಂಗಗಳಿವೆ. ನಂತರ ಜಾತಿಯ ಹಿರಿಯರು ಸೇರಿ ಉಭಯತ್ರರಿಗೂ ಸಮಾಧಾನ ಹೇಳಿ ಮದುವೆ ಮುಂದುವರಿಸುತ್ತಿದ್ದರು. ವಧೂವರರ ಮನೆಗಳಲ್ಲಿ ಅಲ್ಪಸ್ವಲ್ಪ ಜಮೀನು ಹೊಂದಿದ್ದರೆ ವಧುವಿಗೆ ಮನೆ ಯವರು'ಮಕ್ಕಿನ ಗದ್ದೆಯೋ ತಗ್ಗಿನ ಗದ್ದೆಯೋ'ಎಂದು ವರನ ಕಡೆಯವರಿಗೆ ಕೇಳುತ್ತಿದ್ದರು. ತಗ್ಗಿನ ಗದ್ದೆಯವರಾದರೆ ಮಳೆಗಾಲದಲ್ಲಿ ಭತ್ತದ ಸಸಿಯ ಮೇಲೆ ನೀರು ನಿಂತು ಪೈರು ಕೊಳೆತುಹೋಗಿ ಊಟಕ್ಕೆ ಭತ್ತ ಇಲ್ಲದಂತಾಗುತ್ತದೆ ಎಂದು ಹೆಣ್ಣು ಕೊಡುತ್ತಿರಲಿಲ್ಲ. ಮಕ್ಕಿನಗದ್ದೆಯವರಾದರೆ ಪೈರಿನ ಮೇಲೆ ಎಷ್ಟು ಮಳೆ ಹೊಡೆದರೂ ಬೆಳೆ ನಾಶವಾಗುವುದಿಲ್ಲ. ಊಟಕ್ಕೆ ತೊಂದರೆಯಾಗುವುದಿಲ್ಲ ಎಂದು ಮಕ್ಕಿನಗದ್ದೆ ಹೊಂದಿದವರಿಗೆ ಹೆಣ್ಣು ಕೊಡಲು ಒಪ್ಪುತ್ತಿದ್ದರು. ಮದುವೆ ಮಾತುಕತೆ ಹೆಣ್ಣಿನ ಮನೆಯಲ್ಲಿ ನಡೆಯುತ್ತಿತ್ತು. ಹುಡುಗ-ಹುಡುಗಿ ಪರಸ್ಪರ ಮದುವೆಗೆ ಮುಂಚೆ ನೋಡುವಂತಿರಲಿಲ್ಲ. ಹುಡುಗನ ತಂದೆ, ತಾಯಿ, ಸೋದರಮಾವ, ಸೋದರತ್ತೆ, ವಧುವಿನ ತಂದೆ, ತಾಯಿ ವಧೂವರರನ್ನು ನೋಡಿ ಒಪ್ಪಿದರಾಯಿತು. ಪುರೋಹಿತರು ಅಥವಾ ಜಂಗಮರಲ್ಲಿಗೆ ಹೋಗಿ ವಧೂವರರ ಹೆಸರಿನ ಬಲದ ಮೇಲೆ 'ಸಾಲಾವಳಿ' ಕೇಳಿ 'ಸಾಲಾವಳಿ' ಕೂಡಿಬಂದರೆ ಮದುವೆಗೆ ಒಪ್ಪಿಕೊಳ್ಳುತ್ತಾರೆ. ಕೆಲವೊಮ್ಮೆ ತಮ್ಮ ಭಾಗದ ಗ್ರಾಮದೇವತೆಗಳಲ್ಲಿ ಪ್ರಸಾದ ಕೇಳುವರು. ಹೊಸನಗರದವರು ಕಾರ್ಗಡಿ ಗಣಪತಿ, ಕೋಡೂರು ಜೇಣುಕಲ್ಲವ್ವ, ಸಾಗರದವರು ಸಿಗಂದೂರು ಚೌಡಮ್ಮ, ತಮ್ಮ ಭಾಗ ಗ್ರಾಮದೇವತೆಗಳಲ್ಲಿ ಪ್ರಸಾದ  ಕೇಳವರು. ಹೊಸನಗರದವರು ಕಾರ್ಗಡಿ ಗಣಪತಿ, ಕೋಡೂರು ಜೇನುಕಲ್ಲವ್ವ, ಸಾಗರದವರು ಸಿಗಂಧೂರು ಚೌಡಯ್ಯ, ಶಿರವಂತೆ ದುರ್ಗಮ್ಮ, ಸೊರಬದವರು ಚಂದ್ರಗುತ್ತಿ ರೇಣುಕಾಂಬೆ(ಗುತ್ಯಮ್ಮ) ಈ ದೇವತೆಗಳಲ್ಲಿ ಪ್ರಸಾದ ಕೇಳುತ್ತಾರೆ. ಅವರ ಅನಿಸಿಕೆಗೆ ಸರಿಯಾಗಿ ಪ್ರಸಾದವಾದರೆ ಅಂಜಿಕೆಯಿಲ್ಲದೇ ಮದುವೆ ಕಾರ್ಯ ಪ್ರಾರಂಭಿಸುತ್ತಾರೆ. ವಿವಾಹ ನಿರ್ಧಾರವಾದ ಮೇಲೆ ಸಿಹಿಯೂಟದ ಕಾರ್ಯಕ್ರಮ. ಹೆಣ್ಣು ಗಂಡಿನ ಮನೆಯಲ್ಲಿ ಎರಡೂ ಕಡೆ ನಡೆಯುತ್ತದೆ. ಈ ಪದ್ಧತಿಗೆ 'ಪಾಸೆ-ತುಪ್ಪ' ಎನ್ನುವರು. ವರನ ಕಡೆಯವರು ಐದು ಜನ ಗ್ರಾಮಸ್ಥರೊಡಗೂಡಿ ಕುಬುಸದ ಖಣ, ಹೂವು, ಬೆಲ್ಲ, ಮಡಿಲಕ್ಕಿ ತೆಗೆದುಕೊಂಡು ವಧುವಿನ ಮನೆಗೆ ಹೋಗಿ ವಧುವನ್ನು ಒಂದು ಮಣೆಯ ಮೇಲೆ ಕೂರಿಸಿ,

ಮಡಿಲು ತುಂಬಿ ಹೂವು ಮುಡಿಸುವರು. ನಂತರ ನೆಂಟರಿಗೆ ಪಾಯಸ ತುಪ್ಪದ ಊಟ ಹಾಕುವರು. ಇದೇ ರೀತಿ ವರನ ಮನೆಯಲ್ಲಿಯೂ ನಡೆಯುವುದು. ಪಾಸೆತುಪ್ಪ ಆದನಂತರ ಯಾವುದೇ ಕಾರಣಕ್ಕೂ ಮದುವೆಯನ್ನು ನಿಲ್ಲಿಸುವಂತಿಲ್ಲ. ಹಸಲರು ಬುಡಕಟ್ಟಿನ ಜನಾಂಗದಲ್ಲಿ ಮದುವೆಗಳು ಹೆಚ್ಚಾಗಿ ನಡೆಯುವುದು ಹೆಣ್ಣಿನ ಮನೆಯಲ್ಲಿ. ಮದುವೆ ದಿನವೇ ಹೆಣ್ಣಿನ ಮನೆಯಿಂದ ಗಂಡನ ಮನೆಗೆ ಮದುಮಗಳನ್ನು ಕಳುಹಿಸುವ ಪದ್ಧತಿ ಇದೆ. ಗುರು ಹಿರಿಯರು ಮದುಮಕ್ಕಳನ್ನು ಆಶೀರ್ವದಿಸುತ್ತಾರೆ. ಗಂಡನ ಮನೆಯಲ್ಲಿ ಮದುಮಗಳು ವಸ್ತಿಲು ಮೇಲಿರುವ ಅಕ್ಕಿಯ ಸೇರನ್ನು ಒದ್ದು ಗಂಡನ ಮನೆಯ ಪ್ರವೇಶ ಮಾಡುತ್ತಾಳೆ. ಮಾರನೆಯ ದಿನ ಮತ್ತೆ ಮದುಮಕ್ಕಳು ಹೆಣ್ಣಿನ ಮನೆಗೆ ಬರುತ್ತಾರೆ. ಇದಕ್ಕೆ ಮರುದಿಬ್ಬಣವೆಂದು ಕರೆಯುತ್ತಾರೆ. ಹಸಲರು ಸಮುದಾಯದಲ್ಲಿ ಮದುವೆ ಎಂಬುದು ಬಹಳ ಮಹತ್ವದ್ದು ಎಂಬ ಭಾವನೆ ಇದೆ. ಅವರದೇ ಆದ ನಂಬಿಕೆ ಸಂಪ್ರದಾಯ ವಿಧಿನಿಷೇಧಗಳ ಮೂಲಕ ಬುಡಕಟ್ಟು ಸಂಸ್ಕೃತಿಯ ಅನಾವರಣವನ್ನು ನಾವಿಂದು ಕಾಣಬಹುದಾಗಿದೆ. ಶಿವಮೊಗ್ಗ ಜಿಲ್ಲೆ ಹಸಲರು ಬುಡಕಟ್ಟಿನಲ್ಲಿ ಸಂಪ್ರದಾಯದ ಪ್ರಕಾರ ವಿಧವೆಯರು ಶುಭ ಕಾರ್ಯಕ್ರಮ ಮತ್ತು ಶುಭಕಾರ್ಯದಲ್ಲಿ ಬಾಗವಹಿಸುವಂತಿಲ್ಲ. ಮದುವೆ ಚಪ್ಪರಕ್ಕೆ ಬರುವಂತಿಲ್ಲ. ವಿಧವೆಯನ್ನು ಗಂಡು ಒಪ್ಪಿದರೆ ಮರು ಮದುವೆ ಮಾಡುತ್ತಾರೆ. ಹಸಲರು ಬುಡಕಟ್ಟಿನಲ್ಲಿ ಹೆಣ್ಣು (ಕನ್ಯೆ) ನೋಡಲು ಹೋಗುವಾಗ ಯಾವುದೇ ಕಾರಣಕ್ಕೂ ವಿಧವೆ ಎದುರಿಗೆ ಬರುವಂತಿಲ್ಲ. ಒಂದು ವೇಳೆ ಬಂದರೆ ಹೆಣ್ಣು ನೋಡಲು ಹೋಗುವುದಿಲ್ಲ. ಹಸಲರು ತಮ್ಮ ಸಂಪ್ರದಾಯದಂತೆ ವಿಧವೆಯರು ದೇವಸ್ಥಾನಕ್ಕೆ ಹೋಗುವಂತಿಲ್ಲ. ಮದುವೆಗೆ ಒಂದು ವಾರ ಅಥವಾ ಐದು, ಮೂರು ದಿವಸಗಳ ಮುಂಚೆ ವೀಳ್ಯಾಶಾಸ್ತ್ರ ಮಾಡುತ್ತಾರೆ. ವರನ ಕಡೆಯವರು ವಧುವಿನ ಮನೆಗೆ ಐದು ಅಥವಾ ಏಳು ಜನ ಗಂಡಸರು. ಎರಡು ಜನ ಮಹಿಳೆಯರು ಸೇರಿ ಒಂಭತ್ತು ಜನ ಹೋಗುತ್ತಾರೆ. ಒಂದು ಮೂಡೆ ವೀಳ್ಯದೆಲೆ, ಜೋಡು ಬಾಳೆಕಾಯಿ, ಉತ್ತುತ್ತಿ, ಕೊಬ್ರಿ, ಬಾಳೆಹಣ್ಣಿನ ಚಿಪ್ಪು, ಎಲೆಪಟ್ಟಿ, ಕುಬುಸದ ಖಣ, ಕಣಗಲ ಹೂವಿನ ದಂಡೆ, ಕಟ್‌ಲಾಡಿಗಳನ್ನು ಕೊಂಡೊಯ್ಯುತ್ತಾರೆ, ಇವರು ವಧುವಿನ ಮನೆ ತಲುಪಿದಾಗ ಕಾಲು ತೊಳೆಯಲು ನೀರು ಕೊಟ್ಟು ಚಾಪೆ ಹಾಕಿ ಕೂರಿಸಿ ಬಾಯಾರಿಕೆಗೆ ನೀರು ಕೊಟ್ಟು ಕ್ಷೇಮ ಸಮಾಚಾರ ವಿಚಾರಿಸಿ ವಿಶೇಷವಾಗಿ ಉಪಚರಿಸುತ್ತಾರೆ. ಅಡುಗೆಮನೆಯ ಇಡಕಲು ಕೆಳಗೆ ನೀರು ತುಂಬಿದ ಮಣ್ಣಿನ ಕೊಡ ಇಟ್ಟು ಅದರ ಮೇಲೆ ಹಣತೆಯಿಟ್ಟು ದೀಪ ಹಚ್ಚುತ್ತಾರೆ. ಇದಕ್ಕೆ 'ದೇವರ ದೀಪ'ಎನ್ನುವರು. ಇದರ ಕೆಳಗೆ ವರನ ಕಡೆಯವರು ತೆಗೆದುಕೊಂಡು ಹೋದ ಸಾಮಾನುಗಳನ್ನು ಇಟ್ಟು ವಧುವಿನ ಮನೆಯವರು ಊದುಬತ್ತಿ ಹಚ್ಚಿ ಪೂಜೆ ಮಾಡಿ ನಮಸ್ಕರಿಸುವರು. ನಂತರ ವಧುವನ್ನು ಹಸೆಮನೆಯ ಕೆಳಗೆ ಕೂರಿಸಿ ಎದುರಿಗೆ ಕಂಚಿನ ಹರಿವಾಣದಲ್ಲಿ ಅಕ್ಕಿ ಹಾಕಿ ಕಂಚಿನ ಗಿಂಡಿಗೆ ನೀರು ತುಂಬಿ ಮಾವಿನ ತೊಳಲು, ಹೂವು ಮುಡಿಸಿ ಹಣತೆ ದೀಪವನ್ನು ಹರಿವಾನದಲ್ಲಿಟ್ಟು ಕಳಸ ಮಾಡಿ ವಧುವಿನ ಎದುರಿಗೆ ಇಡುತ್ತಾರೆ. ವರನ ಕಡೆಯವರು ತೆಗೆದುಕೊಂಡು ಹೋದ ಎಲೆಮೂಡೆ. ಮತ್ತು ಇತರೆ ಸಾಮಾನುಗಳನ್ನು

ವಧುವಿನ ಎದುರಿಗಿಟ್ಟು ವಧುವಿನಿಂದ ನಮಸ್ಕಾರ ಮಾಡಿಸುವರು. ನಂತರ ವಧುವಿಗೆ ಮಡಿಲು ತುಂಬಿ ಹೂವು ಮುಡಿಸುವರು. ಮಹಿಳೆಯರು ಸಾಸೆಯಿಟ್ಟು ಆರತಿ ಬೆಳಗಿ ವೀಳ್ಯಾಶಾಸ್ತ್ರದ ಹಾಡು ಹೇಳುವರು. ಎಲೆಮೂಡೆಯನ್ನು ಜಗಲಿಯಲ್ಲಿ ಕೂತಿರುವ ಗ್ರಾಮಗಳ ಹಿರಿಯರಿಗೆ ಕೊಡುವರು. ಗ್ರಾಮದ ಎಲ್ಲಾ ದೇವರಿಗೆ, ಸೀಮೆದೇವರುಗಳಿಗೆ, ಗುರುಹಿರಿಯರಿಗೆ, ಸೀಮೆಯ ಹಿರಿಯರಿಗೆ, ಕೇರಿಯವರಿಗೆ ವೀಳ್ಯಾ ಹಂಚುವರು. ನಂತರ ವಧುವನ್ನು ಎಬ್ಬಿಸಿ ಸೇರಿರುವ ಎಲ್ಲಾ ಹಿರಿಯ ಕಿರಿಯರಿಗೆ ನಮಸ್ಕಾರ ಮಾಡಿಸುವರು, ನಂತರ ಸೇರಿರುವ ಜನರಿಗೆ ಊಟ ಹಾಕುವರು. ಮಾರನೇ ದಿವಸ ಬೆಳಗ್ಗೆ ಎದ್ದು ಸೀಮೆಯ ಪುರೋಹಿತರ ಮನೆಗೆ ಹೋಗಿ ಲಗ್ನದ ಮುಹೂರ್ತ ಮತ್ತು ದಿವಸವನ್ನು ನಿಶ್ವಯಿಸಿಕೊಂಡು ಲಗ್ನದ ಓಲೆಯನ್ನು ತರುತ್ತಾರೆ. ನಂತರ ಪುನಃ ವಧುವನ್ನು ಕೂರಿಸಿ ವಧುವಿನ ಮಡಿಲಿಗೆ ಹಾಕುತ್ತಾರೆ. ಆ ದಿವಸ ಮಧ್ಯಾಹ್ನ ಕೋಳಿಮಾಂಸದ ಸಾರು. ಕಾಯಿಗರಿಗೆ ಕಜ್ಜಾಯ ಮಾಡಿ ನೆಂಟರಿಗೆ ಊಟ ಹಾಕಿ ಕಳುಹಿಸುತ್ತಾರೆ. ವರನ ಕಡೆಯವರು ತಮ್ಮ ಊರಿಗೆ ಹೋಗುವಾಗ ಲಗ್ನದ ಓಲೆಯನ್ನು ತೆಗೆದುಕೊಂಡು ಹೋಗುವುದನ್ನು ಮರೆಯುವುದಿಲ್ಲ. ಇದೇ ದಿವಸ ವರನ ಮನೆಯಲ್ಲೂ ವರನ ಮಡಿಲಿಗೆ ಲಗ್ನದ ಓಲೆ ಹಾಕಿ, ವಧುವಿನ ಮನೆಯಲ್ಲಿ ನಡೆದಂತೆ ಉಳಿದ ಶಾಸ್ತ್ರ ಮಾಡುತ್ತಾರೆ. ಹಸೆಗೂಡೆರ ಮತ್ತು ವಧುವಿಗೆ ಮನೆಗಳಲ್ಲಿ ಶೇಡಿ ಬರೆಯುತ್ತಾರೆ. ವೀಳ್ಯಾಶಾಸ್ತ್ರ ಮುಗಿದ ನಂತರ ಕೊರೆ ಊಟಕ್ಕೆ ವರ ಅಥವಾ ವಧು ಅವರವರ ಸೋದರಮಾವನ ಮನೆಗೆ ಹೋಗಬೇಕು. ಧಾರೆಯ ಹಿಂದಿನ ದಿವಸ ದೇವಕಾರ್ಯ, ಇದಕ್ಕೆ ಊರತ್ಲ ಎಂದೂ ಹೇಳುವರು. ಮನೆಯ ಒಳ, ಹೊರ ಆವರಣಗಳನ್ನು ಮಹಿಳೆಯರು ಸ್ವಚ್ಛಗೊಳಿಸುವರು.ಮನೆಯ ಯಜಮಾನ ಸ್ನಾನ ಮಾಡಿ ಶುಚಿಯಾಗಿ ಮದುವೆ ಕಾರ್ಯದಲ್ಲಿ ವಿಘ್ನಗಳು ಬಾರದಿರಲಿ ಎಂದು ಮನೆದೇವರು ಮತ್ತು ಗ್ರಾಮದಲ್ಲಿನ ಎಲ್ಲಾ ದೇವರುಗಳಿಗೆ ಹರಕೆ ಕಟ್ಟಿಕೊಳ್ಳುತ್ತಾರೆ. ಕೇರಿಯವರು ಕವಣಚಪ್ಪರ ಹಾಕುತ್ತಾರೆ. ಚಪ್ಪರ ಎಂಟು ಕಂಬಗಳಿಂದ ಕೂಡಿರುತ್ತದೆ. ಪ್ರತಿ ಕಂಬಕ್ಕೂ ಹಾಲುಕೊಡಸು (ಹಾಲುಮೇಟಿ) ಜಾತಿಯ ಚಿಕ್ಕ ಕಂಬಗಳನ್ನು ನೆಡುತ್ತಾರೆ. ಒಂದು ಕಂಬ, ಇದೇ ಜಾತಿಯದು, ದೊಡ್ಡಕಂಬ ಇರುತ್ತದೆ. ಇದನ್ನು ಧಾರೆ ಕಂಬ ಎನ್ನುವರು. ಗ್ರಾಮದಲ್ಲಿ ಯಾರಾದರೂ ಒಬ್ಬರು ಹಾಲುಕಂಬ ತರುತ್ತಾರೆ. ಇವರಿಗೆ ಮದುವೆ ಮನೆಯವರು ಹಣ್ಣು ಕಾಯಿ, ಎಲೆ ಅಡಿಕೆ, ಬಾಳೆಹಣ್ಣು, ಅಕ್ಕಿ ಮಡಿಲಿಗೆ ಹಾಕುವರು, ವರನ ತಾಯಿಧಾರೆ ಕಂಬಕ್ಕೆ ಗಂಧ, ಅರಿಶಿನ ಕುಂಕುಮವನ್ನಿಟ್ಟು ಹಣ್ಣು ಕಾಯಿ ಒಡೆದು, ಊದಿನಕಡ್ಡಿ ಹಚ್ಚಿ ಪೂಜೆ ಮಾಡುತ್ತಾಳೆ, ಕಾವಣ ಚಪ್ಪರ ಹಾಕಿದವರಿಗೆ ಮತ್ತು ಗ್ರಾಮದ ಜನರಿಗೆ ಪಾಯಸದ ಊಟ ಹಾಕುವರು. ರಾತ್ರಿ ಹಸೆಗೋಡೆ ಕೆಳಗೆ ಅಕ್ಕಿಯಿಂದ ಚೌಕ ಬರೆದು ಇದರ ಮೇಲೆ ಈಚಲು ಚಾಪೆ ಹಾಸಿ ವರನನ್ನು ಕೂಡಿಸುವರು, ಕಳಸ ಮತ್ತು ಸೀರೆ ಫಳಿಗೆಗಳನ್ನು ವರನ ಮುಂದೆ ಇಡುವರು. ವರನಿಗೆ ಸಾಸ್ಮೆ ಇಟ್ಟು 'ಭೂಮ' ಇಕ್ಕುತ್ತಾರೆ. ಹಾಲು ತುಪ್ಪಪಾಯಸ ಒಂದು ತಟ್ಟೆಯಲ್ಲಿ ಹಾಕಿ ಮತ್ತೊಂದು ತಟ್ಟೆಯಿಂದ ಮುಚ್ಚಿ ವರನ ಮುಂದಿಟ್ಟು ಅವನಿಂದ ನಮಸ್ಕಾರ ಮಾಡಿಸುತ್ತಾರೆ. ಈ ಪದ್ಧತಿಗೆ 'ಭೂಮ'ಇಕ್ಕುವುದು ಎನ್ನುವರು.

ನಂತರ ವರನನ್ನು ಎಬ್ಬಿಸುವರು. 'ಮದುಮಗ'ನನ್ನು ಆಯಾಗ್ರಾಮದವರು ಅವರವರ ಮನೆಗೆ ಕರೆದುಕೊಂಡು ಹೋಗಿ ಮಡಿಲು ತುಂಬಿ ಅವರಿಗೆ ತಿಳಿದಷ್ಟು ಹಣ ಕೊಟ್ಟು, ಊಟ ಮಾಡಿಸಿ ಕಳುಹಿಸುತ್ತಾರೆ. ಇದಕ್ಕೆ ಕೋರೂಟ ಎನ್ನುವರು ಇದೇ ರೀತಿ ವಧುವಿನ ಮನೆಯಲ್ಲಿಯೂ ಮಾಡುತ್ತಾರೆ. ಈ ಪರಂಪರೆ ಶಿವಮೊಗ್ಗ ಜಿಲ್ಲೆಯಾದ್ಯಂತ ಕಂಡು ಬರುತ್ತದೆ. ಇದೇ ದಿವಸ ಗುಡಿಗಾರದಿಂದ ಬಾಸಿಂಗ ತೊಂಡಿಲು ತರುತ್ತಾರೆ. ಬಾಸಿಂಗ ತರುವವರು ವರನ ಸೋದರಮಾವ ಅಥವಾ ಭಾವ. ಗುಡಿಗಾರನಿಗೆ ಒಂದು ಪಾವಲಿ, ಎಲೆ ಅಡಿಕೆ, ಅಕ್ಕಿ, ೧೫೦ ರಿಂದ ೨೦೦ರೂಪಾಯಿ ಕೊಟ್ಟು ಬಾಸಿಂಗ ತೊಂಡಿಲು ತರುವರು. ಇವರಿಗೆ ಹೊಸ್ತಿಲಲ್ಲಿ ನಿಲ್ಲಿಸಿ ಪಾದ ತೊಳೆದು ಮಡಿಲು ತುಂಬಿ ವಸ್ತ್ರವನ್ನು ಮುಯ್ಯಿ ಮಾಡುವರು. ನಂತರ ಒಳ ಬರಮಾಡಿಕೊಂಡು 'ದೇವರು ದೀಪ'ದ ಹತ್ತಿರ ಇಟ್ಟು ಊದಿನಕಡ್ಡಿ ಹಚ್ಚಿ ಪೂಜಿಸುವರು. ಈ ಪದ್ಧತಿ ಶಿವಮೊಗ್ಗ ಜಿಲ್ಲೆಯಾದ್ಯಾಂತ ಹಸಲರು ಬುಡಕಟ್ಟಿನಲ್ಲಿದೆ. ಬೆಳಗ್ಗೆ ಮುಂಜಾನೆ ಎದ್ದು ಐದು ಜನ ಮುತ್ತೈದೆಯರು 'ದೇವಗೊಡನ'ನೀರು ತರಲು ಹೋಗುವರು, ವಾಲಗದವರು ಮುಂದೆ ಎರಡು ಜನ ಗಂಡಸರು ಇವರ ಮೇಲೆ ಹೊಸ ಪಂಚೆಯಿಂದ ತಳೆ ಹಿಡಿದಿರುತ್ತಾರೆ. ಗ್ರಾಮದ ಅಥವಾ ಹಳ್ಳಿಯ ಬಾವಿಗೆ ಹೋಗಿ ಐದು ಕೊಡ ನೀರು ಎತ್ತಿ ಬಾವಿಕಟ್ಟೆ ಮೇಲಿಟ್ಟು ಕೊಡಗಳಿಗೆ ಗಂಧ, ಅರಿಶಿನ, ಕುಂಕುಮ, ಕಣ್ಕಪ್ಪು ಇಟ್ಟು ಊದಿನಕಡ್ಡಿ ಹಚ್ಚಿ ತೆಂಗಿನಕಾಯಿ ಒಡೆದು 'ಗಂಗೆ ಪೂಜೆ' ಮಾಡುವರು, ನಂತರ ನೀರು ತುಂಬಿದ ಕೊಡಗಳನ್ನು ಮನೆಗೆ ತಂದು ಇಡುವರು. ಕಾವಣಚಪ್ಪರದಲ್ಲಿ ಐದು ಕೇಲು ಕುಂಭಗಳನ್ನು ಸಾಲಾಗಿ ಇಟ್ಟು 'ದೇವಗೊಡನ' ನೀರು ತುಂಬುವರು. ಕುಂಕುಮ ಅರಿಸಿನ ಮಿಶ್ರಿತ ನೆನೆಯಕ್ಕಿಯನ್ನು ಕೇಲುಕುಂಭದ ಸುತ್ತ ಹಚ್ಚುವರು. ಹತ್ತಿದಾರದಿಂದ ಐದು ಕುಂಭಗಳಿಗೆ 'ಸುರಗಿ'ಸುತ್ತವರು. ವರನಿಗೆ ಅವನ ಭಾವ ಮುಖ ಕ್ಷೌರ ಮಾಡುವನು. ನಂತರ ಐದು ಜನ ಮುತ್ತೈದೆ ಮಹಿಳೆಯರಿಗೆ ಮಡಿಲು ತುಂಬುವರು. ಅವರು ವರನಿಗೆ 'ಎಣ್ಣೆ ಅರಿಶಿನ' ಹಚ್ಚುವರು. ವರನ ಭಾವ ಬಿಸಿನಿರಿಗೆ ಕೇಲು ಕುಂಭದ ತಣ್ಣೀರು ಸೇರಿಸಿ ಸ್ನಾನ ಮಾಡಿಸುವನು. ನಂತರ ವರನಿಗೆ ಕಚ್ಚೆಪಂಚೆ. ಷರ್ಟ್, ತಲೆಗೆ ಪೇಟಾ, ಶಲ್ಯ ತೊಡಿಸುವರು. ಬಾಸಿಂಗ ತೊಂಡ್ಲುಗಳಿಗೆ ಐದು ಜನ ಮುತ್ತೈದೆಯರಿಂದ ಅಕ್ಕಿ ಹಾಕಿಸಿ ವರನಿಗೆ ಕಟ್ಟುವರು. ವರನ ಅಕ್ಕ ಅಥವಾ ತಂಗಿ ಕಳಸ ಹಿಡಿದು ಬಲಗಡೆ ನಿಂತಿರುವಳು. ಇವಳು 'ಕೂಡಿ ಮೀಯುವಳು', ತೊಂಡಿಲು ಇವಳಿಗೆ ಹಾಕುವರು. ಇವಳು ಮದುಮಗನ 'ಬಲಗೊಡತಿ', ವರನ ಭಾವ, ಬಲಗೊಡೆಯನೆಂಬ ಇವನು ಹೂವಿನ ಕೋಲು ಹಿಡಿಯುವನು ಮತ್ತು ಮದುಮಗನ ಯೋಗಕ್ಷೇಮ ನೋಡಿಕೊಳ್ಳುವನು. ಒಂದು ಉದ್ದನೆಯ ಕತ್ತಿ(ಖಡ್ಗ) ಅಥವಾ ಅಂಬುವಿನ ತುದಿಗೆ ಒಂದು ಬಾಳೆಹಣ್ಣು ಸಿಕ್ಕಿಸಿ, ಮಾವಿನ ತೊಳಲು, ವೀಳ್ಯದೆಲೆ ಸಿಂಬೆ ಕಟ್ಟಿ ಹವಳದ ಸರ ಹಾಕುವರು, ವರನ ಸೋದರಮಾವ ವರನ ನೆತ್ತಿಯ ಮೇಲೆ ಕುಡಿಬಾಳೆ ಎಲೆ ಹಿಡಿದು ಕಳಸದ ಗಿಂಡಿಯಲ್ಲಿರುವ ನೀರನ್ನು ಕತ್ತಿಯ ಮೇಲೆ ಹನಿ ಹನಿಯಾಗಿ ಬಿಡುವನು. ಇದನ್ನು ಬಡ, ಮುಂಭಾಗ, ಹಿಂಭಾಗ, ಹೀಗೆ ಐದು ಸಾರಿ ಬಿಡುವನು. ನಂತರ ತಂದೆ, ತಾಯಿ,

ಅಕ್ಕ, ತಂಗಿ, ಭಾವ, ಸೋದರತ್ತೆ ಕಳಸದ ನೀರು ಮಧುಮಗನಿಗೆ ಬಿಡುವರು. ಹಾಗೆಯೇ ಹಿರಿಯಕ್ಕ, ತಂಗಿ, ಸೋದರತ್ತೆ ಇವರಿಗೆ ಕಳಸ ನೀರು ಹೊಯ್ದು ಉಡುಗೊರೆ ಮಾಡುತ್ತಾರೆ. ಪುನಃ ಇವರೆಲ್ಲರೂ ವರನಿಗೆ ಉಡುಗೊರೆ ಮಾಡುವರು. ನಂತರ ಒಳಗಡೆ ಹೋಗಿ ವರನನ್ನು ಹಸೆಮಣೆಮೇಲೆ ಕೂರಿಸಿ ಸಾಸ್ಮೆಯಿಟ್ಟು ಹಾಲು ತುಪ್ಪವನ್ನು ತಂದೆ, ತಾಯಿ ಮತ್ತು ಹತ್ತಿರ ಸಂಬಂಧಿಗಳು ಉಣಿಸುವರು. ನಂತರ ಕಟ್ಟೆ ಬಾಗಿಲು ಅಥವಾ ದೇವಸ್ಥಾನಕ್ಕೆ ಹೋಗಿ ಅಲ್ಲಿ ಕೂರಿಸಿ ದೇವರಿಗೆ ನಮಸ್ಕಾರ ಮಾಡಿ ಬಾಸಿಂಗ ಬಿಚ್ಚುವರು. ಇದೇ ರೀತಿ ವಧುವಿನ ಮನೆಯಲ್ಲಿಯೂ ಮಾಡುವರು. ದಿಬ್ಬಣ ಹೊರಡುವಾಗ ದಿಬ್ಬಣ ವಧುವಿನ ಊರಿಗೆ ಪಾದಚಾರಿಗಳಾಗಿ ಅಥವಾ ಬಸ್ಸಿನಲ್ಲಿ ಪ್ರಯಾಣ ಬೆಳೆಸುತ್ತಾರೆ. ವಧುವಿನ ಊರಿಗೆ ಪ್ರಯಾಣಿಸುವಾಗ ದಾರಿಯಲ್ಲಿ ಎದುರಾಗುವ ಭೂತದ ಬನ, ಚೌಡಬನ, ಯಕ್ಷಿಬನ, ಜೆಟ್ಟಿಬನಗಳಿಗೆ ತೆಂಗಿನಕಾಯಿ ಒಡೆದು ಪೂಜೆಸಲ್ಲಿಸಿ ಮುಂದೆ ಹೋಗುತ್ತಾರೆ. ದಿಬ್ಬಣ ವಧುವಿನ ಊರನ್ನು ಪ್ರವೇಶಿಸಿದ ಕೂಡಲೇ ಗರ್ನಾಲು ಹೊಡೆಯುವರು. ಓಲಗದ ಸದ್ದಿನೊಡನೆ ಬಿಡಾರದ ಮನೆಗೆ ಅಥವಾ ದೇವಸ್ಥಾನಕ್ಕೆ ತೆರಳುವರು. ದಿಬ್ಬಣದವರು ಬಿಡಾರದ ಮನೆಯಲ್ಲಿ ವಿಶ್ರಮಿಸುವರು. ವರನಿಗೆ ಬಾಸಿಂಗ ಸೂಡಿ ಕೂರಿಸುವ ಕಳಸ ಹಿಡಿದ ಬಲಗೊಡತಿ ಮತ್ತು ಬಲಗೊಡೆಯ ನೆಂಟ ಜೊತೆಯಲ್ಲಿರುವರು. ವಧುವಿನ ಕಡೆಯವರು ಬಿಡಾರದ ಮನೆಗೆ ಹೋಗಿ ದಿಬ್ಬಣದವರನ್ನು ಉಪಚರಿಸಿ, ಬಾಯಾರಿದವರಿಗೆ ಬೆಲ್ಲ ನೀರು ಕೊಡುವರು. ಬೀಗರ ಉಪಚಾರದ ನಂತರ ವಧುವಿನ ಕಡೆಯ ಮಹಿಳೆಯರುಕಳಸದೊಂದಿಗೆ ಉಂಗಲುಡಿಕೆ ಸಾಮಾನು, ಪಂಚೆ, ಕಣಗಲ ಹೂವಿನ ದಂಡೆ, ಬೆಂಡಿನ ಹಾರ, ಬಾಳೆಹಣ್ಣು, ಅಕ್ಕಿ, ಉತ್ತುತ್ತಿ, ಕೊಬ್ಬರಿ ಬಟ್ಟಲು ತೆಗೆದುಕೊಂಡು ಹೋಗಿ ಕಳಸಕ್ಕೆ ವರನಿಂದ ನಮಸ್ಕಾರ ಮಾಡಿಸಿ, ಹೂವು ಮತ್ತು ಬೆಂಡಿನ ಹಾರಗಳನ್ನು ವರನ ಕೊರಳಿಗೆ ಹಾಕಿ ಪಂಚೆ ಹೊದಿಸಿ ಉಳಿದ ಸಾಮಾನುಗಳನ್ನು ಮಡಿಲು ತುಂಬುವರು, ನಂತರ ವರನ ಕಡೆಯವರು ಉಂಗಲುಡಿಕೆ ಸಾಮಾನು ಅಂದರೆ ಧಾರೆ ಸೀರೆ, ಬಿಳಿ ಸೀರೆ, ಧಾರೆ ಖಣ, ಬೆಂಡೋಲೆ, ಬುಗುಡಿ, ಕಾಲುಂಗುರ, ಗೆಜ್ಜೆಪಟ್ಟಿ, ಕೋಲ್ಕಡಗ, ದುಂಡು ತೊಂಡಿಲುಗಳನ್ನು ತೆಗೆದುಕೊಂಡು ಹೋಗಿ ವಧುವಿನ ಹತ್ತಿರ ಇಟ್ಟು, ವಧುವಿನಿಂದ ನಮಸ್ಕಾರ ಮಾಡಿಸಿ ನಂತರ ಒಡವೆಗಳನ್ನು ವಧುವಿಗೆ ತೊಡಿಸಿ ಬರುತ್ತಾರೆ. ಸ್ವಲ್ಪ ಹೊತ್ತಿನ ನಂತರ ಬಿಡಾರದ ಮನೆಯಿಂದ ಓಲಗದವರೊಡನೆ ವರನನ್ನು ವಧುವಿನ ಮನೆಯ ಕಾವಣಚಪ್ಪರದ ಹತ್ತಿರ ಕರೆತರುತ್ತಾರೆ. ವಧುವಿನ ತಾಯಿ ವರನಿಗೆ ಹಾಲು ತುಪ್ಪ ಉಣ್ಣಿಸಿದ ನಂತರ ಕಾವಣಚಪ್ಪರಕ್ಕೆವರನನ್ನು ತಂದು ನಿಲ್ಲಿಸುತ್ತಾರೆ. ವಧುವನ್ನು ಸೋದರಮಾವ ಧಾರೆ ಮಂಟಪಕ್ಕೆ ತಂದು ನಿಲ್ಲಿಸುತ್ತಾರೆ. ಧಾರೆ ಮಣೆಗಳ ಮೇಲೆ ಬಿದಿರಿನ ಮಟ್ಟಕ್ಕಿ ಸಿಬ್ಲಯಿಟ್ಟು ಕುಡಿಬಾಳೆ ಎಲೆಯಲ್ಲಿ ಅಕ್ಕಿ ಹಾಕಿ ಸಿಬ್ಲದಲ್ಲಿಟ್ಟು ವಧೂವರರನ್ನು ನಿಲ್ಲಿಸುವರು. ಇವರ ಮಧ್ಯೆ ಪಂಚೆಯನ್ನು ತೆರೆ ಹಿಡಿದಿರುತ್ತಾರೆ. ಪುರೋಹಿತರು ವಿವಾಹಕ್ಕೆ ಸಂಬಂಧಪಟ್ಟ ಮಂತ್ರಗಳನ್ನು ಹೇಳಿ ಧಾರೆ ಮಾಡಿಸುತ್ತಾರೆ. ಕಣಗಳ ಹೂವಿನ ಹಾರಗಳನ್ನು ವಧು ವರನ ಕೊರಳಿಗೆ, ವರ ವಧುವಿನ ಕೊರಳಿಗೆ ಹಾಕುವರು. ನಂತರ ವಧುವಿನ ತಂದೆ ತಾಯಿ ಅಥವಾ ಅಣ್ಣ, ಅತ್ತಿಗೆ ಧಾರೆ

ಎರೆಯುವರು. ಧಾರೆ ಎರೆದವರಿಗೆ ವರನ ಕಡೆಯವರು ಸೀರೆ, ಕುಬುಸ, ಪಂಚೆ, ಟವಲು ಉಡುಗೊರೆ ಮಾಡುವರು. ಮದುವೆಗೆ ಬಂದ ನೆಂಟರಿಷ್ಟರು, ಗ್ರಾಮದವರು ಮುಯ್ಯಿ ಇಡುವರು. ಮುಯ್ಯಿ ಇಡುವವರು ಒಂದು ರೂಪಾಯಿಯಿಂದ ಹತ್ತು ರೂಪಾಯಿವರೆಗೆ ಇಡುತ್ತಾರೆ. ನಂತರ ಊಟ ಹಾಕುತ್ತಾರೆ. ಮದುವೆಗೆ ಊಟಕ್ಕೆ ಪಾಯಸ, ಅನ್ನ, ಸಾರು ತಯಾರಿಸುತ್ತಾರೆ. ಧಾರೆಯ ನಂತರ ವಧೂವರರ ಕೈಗಳಿಗೆ ಬೊಗಸೆ ಅಕ್ಕಿ ಹಾಕುತ್ತಾರೆ. ಸ್ವಲ್ಪ ಸ್ವಲ್ಪವಾಗಿ ಬೊಗಸೆಯಲ್ಲಿರುವ ಅಕ್ಕಿಯನ್ನು ಬಿಡುತ್ತಾರೆ. ಒಳ ಹೋಗುವವರು ಉಳಿದ ಅಕ್ಕಿಯನ್ನು ಒಳಗೆ ಹೋದ ನಂತರ ಚಾಪೆಯ ಮೇಲೆ ಚೆಲ್ಲುವರು. ನಂತರ ಹಸೆ ಕೂರಿಸುವರು. ಬಟ್ಟಲಿನಲ್ಲಿ ಅಕ್ಕಿ ಹಾಕಿ ಒಂದು ನಾಣ್ಯವನ್ನು ಇಟ್ಟುವರ ಎಡಕೈಯಲ್ಲಿ, ವಧು ಬಲ ಕೈಯಲ್ಲಿ ಹುಡುಕುವರು, ನಾಣ್ಯ ವಧುವಿಗೆ ಸಿಕ್ಕಿದರೆ ವರ ವಧುವಿಗೆ ಒಡವೆ ಮಾಡಿಸುತ್ತಾರೆ. ಈ ಅಕ್ಕಿಯನ್ನು 'ಹರಸ್ದಕ್ಕಿ' ಎನ್ನುವರು. ಇದನ್ನು ವಧೂವರರಿಗೆ ಬೀರುವರು, ವಧೂವರರು ಪರಸ್ಪರ ಸಾಸ್ಮೆ ಇಟ್ಟುಕೊಳ್ಳುವರು. ವಧು ವರನಿಗೆ ಕಳಸ ಹಿಡಿದು ಬಲಗೊಡತಿಯೊಂದಿಗೆ ಬೆಳಗುವಾಗ ಯಾರಾದರೂ ಕಳಸದ ಇರಿಕೆಯಿಲ್ಲದೆ ಕಳಸ ಇಡುವ ಹಾಗಿಲ್ಲ. ಗಂಡನ ಹೆಸರು ಹೇಳಿದರೆ ಇರಿಕೆ ಕೊಡುವುದಾಗಿ ಛೇಡಿಸುತ್ತಾರೆ. ವಧು ಗಂಡನ ಹೆಸರು ಹೇಳುತ್ತಾಳೆ, ನಂತರ ಇರಿಕೆ ಕೊಡುವರು, ವಧೂವರರ ಬಾಸಿಂಗ ತೊಂಡಿಲು ಬಿಚ್ಚಿ ಊಟ ಹಾಕುವರು. ಇದೇ ದಿವಸ ಮಧ್ಯಾಹ್ನ ವಧುವನ್ನು ಕಾವಣದಲ್ಲಿ ಕೂಡಿಸಿ ವರನ ಅತ್ತಿಗೆ, ಅಕ್ಕ ಅಥವಾ ನಾದಿನಿ ತಲೆ ಬಾಚುತ್ತಾರೆ. ವರನ ಕಡೆಯವರು ಭೂಮದಕ್ಕಿ ಅಳೆಯುವಶಾಸ್ತ್ರ, ಭೂಮದಕ್ಕಿಗೆ ಮಾವಿನ ತೊಳಲು ಸೇರಿಡಿ ಕೊಳಗ, ಸಿದ್ದೆ, ಬಟ್ಲುನಿಂದ ವಧು ವರನ ಕಡೆಯವರು ಎರಡು ಜನ ಕೈ ಮೇಲೆ ಕೈಯಿಟ್ಟುಕೊಂಡು, ಒಂದೊಂದು ಮಾಪನದಿಂದ ಐದೈದು ಬಾರಿ ಅಳತೆ ಮಾಡುವರು, ನಂತರ ಅಕ್ಕಿಯನ್ನು ಎರಡು ಕಡೆಯವರು ಹಂಚಿಕೊಳ್ಳುವರು. ನಂತರ ವರನ ಊರಿಗೆ ದಿಬ್ಬಣ ಹೊರಡಿಸುವ ಸಿದ್ಧತೆ ಮಾಡುವರು. ವಧೂವರರನ್ನು ಬಿಡಾರದ ಮನೆಗೆ ಕರೆತಂದು ವರನನ್ನು ಅಲ್ಲಿಯೇ ಬಿಟ್ಟು ವಧುವನ್ನು ಅವಳ ಸೋದರಮಾವ ಎತ್ತಿಕೊಂಡು ವಧುವಿನ ಮನೆಗೆ ತರುತ್ತಾರೆ. ಹಸೆಗೋಡೆಯ ಕೆಳಗೆ ಅಕ್ಕಿ, ಎಲೆ ಅಡಿಕೆ, ಬಾಳೇಹಣ್ಣು ಇರುವ ಕಂಚಿನ ಫಳಿಗೆಬಟ್ಲುನಲ್ಲಿ ವಧುವನ್ನು ನಿಲ್ಲಿಸಿ ತಂದೆ, ತಾಯಿ, ಸಂಬಂಧಿಕರು ಹಾಲು ತುಪ್ಪ ಉಣ್ಣಿಸುವರು. ನಂತರ ವರನ ಅಣ್ಣ, ಅತ್ತಿಗೆ ಅಥವಾ ಅಕ್ಕ, ಭಾವನವರಿಗೆ ವಧುವಿನ ತಂದೆ ತಾಯಿ ಮಗಳ ಕೈಹಿಡಿದು ವರನ ಕಡೆಯವರ ಕೈಯ ಮೇಲೆ ವಧುವಿನ ಕೈಯನ್ನಿಟ್ಟು 'ಹೆಣ್ಣು ನಿಮ್ಮದು, ಗಂಡು ನಮ್ಮದು 'ಎಂದು ಹೇಳಿ ಹೆಣ್ಣು ಒಪ್ಪಿಸುತ್ತಾರೆ. ನಂತರ ವಧುವಿನ ಸೋದರಮಾವ ಪುನಃ ಅವಳನ್ನು ಎತ್ತಿಕೊಂಡು ಬಿಡಾರದ ಮನೆಗೆ ಕರೆದೊಯ್ಯುತ್ತಾನೆ. ಬಿಡಾರದ ಮನೆಯಲ್ಲಿ ಬಾಸಿಂಗ ತೊಂಡಿಲು ಇಳಿಸಿ ದಿಬ್ಬಣ ವರನ ಊರಿಗೆ ಹೊರಡುತ್ತದೆ. ವರನ ಊರಿಗೆ ಮರುದಿಬ್ಬಣ ಹೋದ ನಂತರ ವಧೂವರರನ್ನು ಕಾವಣದಲ್ಲಿ ಕೂರಿಸಿ ವರನ ತಾಯಿ ಹಾಲು ತುಪ್ಪ ಉಣ್ಣಿಸಿ, ಮನೆಯ ಹೊಸಿಲು ಮತ್ತು ಬಳುವಳಿ ಸಾಮಾನು ಪೂಜೆ ಮಾಡಿ ಅಕ್ಕಿ ತುಂಬಿದ ಸಿದ್ದೆಯನ್ನು ಹೊಸಿಲಿನಲ್ಲಿ ಇಡುವರು. ವಧು ಇದನ್ನು

ಬಲಗಾಲಲ್ಲಿ ಒದ್ದು ಒಳಗೆ ಪ್ರವೇಶ ಮಾಡಬೇಕು. ನಂತರ 'ಹಸೆ ಕೂರಿಸಿ'ಸಾಸ್ಮೆ ಇಡುತ್ತಾರೆ. ವಧೂವರರಿಗೆ ಆರತಿ ಎತ್ತಿ ಬಾಸಿಂಗ ತೊಂಡಿಲು ಬಿಚ್ಚಿದ ನಂತರ ವಧೂವರರು ವಿಶ್ರಮಿಸುವರು. ನಾಗೋಲೆ ಶಾಸ್ತ್ರ ಮಾಡುವರು. ನಾಲ್ಕನೇ ದಿವಸ ಮರುವರಿ ಶಾಸ್ತ್ರ. ವಧೂವರರು ಎದ್ದು ಸೂರ್ಯನಿಗೆ, ನಮಸ್ಕರಿಸಿ ಹಸೆ ಕೂರಿಸುತ್ತಾರೆ. ವಧು ವರನ ಪಾದ ತೊಳೆದು ಪೂಜೆ ಮಾಡುವಳು, ನಂತರ ಓಕುಳಿ ಆಡುತ್ತಾರೆ. ವಧೂವರರು ಸ್ನಾನ ಮಾಡಿ ಹೊಸಬಟ್ಟೆ ಧರಿಸಿ, ಬಾಸಿಂಗ ತೊಂಡಿಲುಗಳನ್ನು ಪೂಜೆ ಮಾಡಿ ಮನೆಯಕೋಳು ಕಂಬಕ್ಕೆ ಕಟ್ಟುವರು. ಎಡ್ಗರ್ ಥರ್ಸ್ಟನ್ ಮತ್ತು ಕೆ. ರಂಗಾಚಾರ್‌ರವರ ಕ್ಯಾಸ್ಟ್ಸ್ ಅಂಡ್ ಟ್ರೈಬ್ಸ್ ಆಫ್ ಇಂಡಿಯಾದಲ್ಲಿ ಹಸಲರ ಮದುವೆ ಕುರಿತು ಅವರ ಮದುವೆ ರಾತ್ರಿ ಹೊತ್ತು ನಡೆಯುತ್ತದೆ. ಅವರ ಜಾತಿಯ ಪೂಜಾರಿ ತಾಳಿ ಕಟ್ಟಿಸುತ್ತಾನೆ. ಪ್ರಾದೇಶಿಕ ಜನಾಂಗದ ಪ್ರಭಾವದಿಂದ ಜೋಯಿಸರನ್ನು ಕರೆಸುವ ಪ್ರವೃತ್ತಿ ಅಭ್ಯಾಸವಾಗಿದೆ ಎಂದು ಹೇಳಿದೆ. ಕೃಷ್ಣಮೂರ್ತಿ ಹನೂರುರವರ ಸಂಪಾದಕತ್ವದಲ್ಲಿ ಪ್ರಕಟವಾದ ಕರ್ನಾಟಕ ಜಾನಪದ ಸಂಸ್ಕೃತಿ ವಿಶ್ವಕೋಶ ಸಂಪುಟ ೧ರಲ್ಲಿ ಹಸಲರ ಮದುವೆ ಬಗ್ಗೆ ಸ್ವಲ್ಪ ಮಾಹಿತಿಯನ್ನು ನೀಡಿದ್ದಾರೆ. ಹಸಲರು ಸಾಂಪ್ರದಾಯಿಕವಾಗಿ ಮದುವೆ ಮಾಡುತ್ತಾರೆ. ವರನ ಕಡೆಯವರು ವಧುವಿನ ಕಡೆಯವರಿಗೆ ತೆರ ಕೊಡಬೇಕು. ಅದು ಒಂದರಿಂದ ನೂರು ರೂಪಾಯಿ ತನಕ ಇರುತ್ತದೆ. ಕೆಲವು ಕಡೆ ಮೂರು ನೂರನ್ನು ದಾಟುತ್ತದೆ. ಮದುವೆಯ ಕತ್ತಿ ಬಿಲ್ಲು ಬಾಣವನ್ನು ಪ್ರತಿನಿಧಿಸುತ್ತದೆ. ಹತ್ತಿಯ ದಾರ ಸುತ್ತಿದ ನಾಲ್ಕು ಲೋಹದ ಕೊಡದಲ್ಲಿ ತಂದ ನೀರನ್ನು ವಧುವಿನ ತಲೆಯ ಮೇಲೆ ವೀಳ್ಯದೆಲೆಯ ಮುಖಾಂತರ ಹಾಕುತ್ತಾರೆ. ಇದು ಬಹುಶಃ ವಧು ಗೃಹಿಣಿಯಾಗುವುದಕ್ಕೆ ಸಾಂಕೇತಿಕ ಸ್ಫುರಣ, ನಂತರ ಹೆಣ್ಣು ಗಂಡು ಹಾರ ಹಾಕಿಕೊಳ್ಳುತ್ತಾರೆ. ಮನೆಯ ಮುಂದೆ ಚಪ್ಪರ ವಿರುತ್ತದೆ. ಗಂಡು ತಾಳಿ ಕಟ್ಟುತ್ತಾನೆ. ವರ ವಧುವಿಗೆ ಬೆಳ್ಳಿಯುಂಗುರ, ಕೈಕಡಗ ತೊಡಿಸುತ್ತಾನೆ ಎಂದು ಹೇಳಿದೆ. ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ ಎಂಬ ಗ್ರಂಥದ ಸಂಪುಟ–೫ರಲ್ಲಿ ಎಲ್.ಕೆ.ಅನಂತಕೃಷ್ಣ ಅಯ್ಯರ್ ಮತ್ತು ಎಚ್. ವಿ. ನಂಜುಂಡಯ್ಯನವರು ಹಸಲರ ಮದುವೆ ಸಂಪ್ರದಾಯವನ್ನು ವಿವರವಾಗಿ ನೀಡುತ್ತಾರೆ. ಮದುವೆ ಪೂರ್ವದಲ್ಲಿ ಹಸಲರು ಮೊದಲು ಜೋಯಿಸರನ್ನು ಹುಡುಕುತ್ತಾರೆ. ಜಾತಕ ಕೂಡುವುದೇ ಇಲ್ಲವೇ ಎಂದು ತಿಳಿಯುತ್ತಾರೆ. ಜೋಯಿಸರ ಬಳಿ ಹೋಗುವಾಗ ಉತ್ತುತ್ತಿ, ಕೊಬ್ಬರಿ, ಎಲೆ ಅಡಿಕೆ ತೆಗೆದುಕೊಂಡು ಹೋಗುತ್ತಾರೆ. ಇದಲ್ಲದೇ ಹಳ್ಳಿಯ ದೇವರಲ್ಲಿ ಹೋಗಿ ಪ್ರಸಾದ ಪಡೆಯುತ್ತಾರೆ. ಮದುವೆ ದಿನ ನಿರ್ಧಾರವಾದಾಗ ಗಂಡಿನ ಕಡೆಯವರು ಹೆಣ್ಣಿನ ಮನೆಗೆ ಹೋಗುತ್ತಾರೆ. ಅಲ್ಲಿ ವಧು ಕಳಸ ಪೂಜೆ ಮಾಡಿ ಅದರ ಎದುರು ಕೂತಿರುತ್ತಾಳೆ, ವಧು ವರನ ಕಡೆಯವರು ಒಡವೆಗಳನ್ನು ಅವಳ ಉಡಿಗೆ ಹಾಕುತ್ತಾರೆ. ವಾಪಾಸ್ಸು ಹೋಗುವಾಗ ಹೆಣ್ಣಿನ ಕಡೆಯವರು ಗೌರವಿಸಿ ಕಳುಹಿಸುತ್ತಾರೆ. ಮದುವೆಯ ಚಪ್ಪರವನ್ನು ಹೊಲೆಯರು ಹಾಕುತ್ತಾರೆ. ಅವರಿಗೆ ಎಂಟಾಣೆ ಅಥವಾ ಒಂದು ರೂಪಾಯಿ ಕೊಡುತ್ತಾರೆ. ಜೊತೆಗೆ ಅನ್ನ ಹಾಕುತ್ತಾರೆ. ಹೊಲೆಯ ಹಾಲುಮರ ತಂದುಕೊಡುತ್ತಾನೆ. ಅದನ್ನು ಜಾತಿಯ ಮನುಷ್ಯನೇ ನೆಡುತ್ತಾನೆ. ಹೊಲೆಯರ

ಈ ಸೇವೆಯನ್ನು ಪಡೆಯದೇ ಜಾತಿಯವರೇ ಮಾಡಿಸುವುದಿಲ್ಲ. ಅವರು ಮದುವೆಯಲ್ಲಿ ನೀರು ಸರಬರಾಜು ಮದುವೆಗೆ ಸೇರಿಸುವುದಿಲ್ಲ. ಅವರು ಮದುವೆಯಲ್ಲಿ ನೀರು ಸರಬರಾಜು ಮಾಡಲೂ ಬಿಡುವುದಿಲ್ಲ. ನಾಮಧಾರಿ ದಾಸಯ್ಯನಿಗೆ ನಾಲ್ಕು ರೂಪಾಯಿ ದಂಡ ಕಟ್ಟಿದ ಮೇಲೆಯೇ ಅವರನ್ನು ಜಾತಿಗೆ ಸೇರಿಸಿಕೊಳ್ಳಲಾಗುವುದು. ಕುಂಬಾರ ಮಡಕೆಯನ್ನು, ಬಡಗಿ ಹಲಗೆಗಳನ್ನು ಕೊಡುತ್ತಾನೆ. ಮಾರನೇ ದಿವಸ ವರನ ದಿಬ್ಬಣ ವಧುವಿನ ಮನೆಗೆ ಹೋಗುತ್ತದೆ. ವಧುವಿನ ಮನೆಯಲ್ಲಿ ಧಾರೆ ನಡೆಯುತ್ತದೆ. ಜೋಗಿಗಳು ದೂರದಲ್ಲಿ ನಿಂತು ಮದುವೆ ನೋಡುತ್ತಾರೆ. ಜಂಗಮರು ಅಥವಾ ಪುರೋಹಿತರು ಅಥವಾ ಜಾತಿಯವರು ಮದುವೆ ನಡೆಸುತ್ತಾರೆ. ತೀರ್ಥಹಳ್ಳಿಯ ಹಸಲರಲ್ಲಿ ಮದುವೆಯ ಮೊದಲ ಶಾಸ್ತ್ರ ವೀಳ್ಯಾಶಾಸ್ತ್ರ. ಗಂಡಿನ ಕಡೆಯವರು ಸುಮಾರು ಒಂಭತ್ತು ಜನ ಗಂಡಸರು, ಇಬ್ಬರು ಹೆಂಗಸರು ಸೇರಿ ಹೆಣ್ಣಿನ ಮನೆಗೆ ಹೋಗುತ್ತಾರೆ. ಕಾಲು ತೊಳೆದು ಚಾಪೆಯ ಮೇಲೆ ಕೂರುತ್ತಾರೆ. ಅವರಿಗೆ ಹಾಲು, ಎಲೆ ಅಡಿಕೆ ಕೊಡುತ್ತಾರೆ. ಇದಾದ ನಂತರ ಮದುವೆ ದಿನ ನಿಶ್ಚಯಿಸಲು ಜೋಯಿಸನ ಬಳಿ ಹೋಗುತ್ತಾರೆ. ಅವನು ಇವರು ತಂದ ಎಲ್ಲಾ ಉಡುಗೊರೆಗಳನ್ನು ಪಡೆಯುತ್ತಾನೆ. ಆದರೆ ಎಲೆ ಅಡಿಕೆಯನ್ನು ತೆಗೆದುಕೊಳ್ಳುವುದಿಲ್ಲ. ಬ್ರಾಹ್ಮಣರು ಇವರ ಮದುವೆಗೆ ಬರುವುದಿಲ್ಲ. ಆದರೆ ದಾಸಯ್ಯನವರು ಬರುತ್ತಾರೆ. ವಧುವಿನ ಮನೆಯಲ್ಲಿ ರಾತ್ರಿಯ ಹೊತ್ತು ಧಾರೆ ನಡೆಯುತ್ತದೆ. ಜೋಡಿಯ ಕೈಯಲ್ಲಿಟ್ಟ ತೆಂಗಿನಕಾಯಿ ಮೇಲೆ ನೀರು ಹಾಕುತ್ತಾರೆ. ನಂತರ ತುದಿಗಳನ್ನು ಗಂಟು ಹಾಕುತ್ತಾರೆ. ಆನವಟ್ಟಿಯಲ್ಲಿ ಮದುವೆ ಗಂಡಿನ ಮನೆಯಲ್ಲಿ ನಡೆಯುತ್ತದೆ. ಜಂಗಮ ತಾಳಿಗೆ ಪೂಜೆ ಮಾಡುತ್ತಾನೆ. ವರ ವಧುವಿನ ಕುತ್ತಿಗೆಗೆ ಕಟ್ಟುತ್ತಾನೆ. ಲಿಂಗಾಯತ ಧರ್ಮವನ್ನು ಸ್ವೀಕರಿಸಿದವರಿಗೆ ಅವರ ಜಾತಿಯವನು ಮದುವೆ ನಡೆಸಿಕೊಡುತ್ತಾನೆ. ಕೆಲವು ಕಡೆ ಮದುವೆ ರಾತ್ರಿ ನಡೆಯುತ್ತದೆ. ಅವರ ಜಾತಿಯ ಪೂಜಾರಿ ತಾಳಿಯನ್ನು ಕಟ್ಟುತ್ತಾನೆ. ಸುತ್ತ ಮುತ್ತಲ ಪರಿಸರದ ಪ್ರಭಾವದಿಂದ ಅವರು ಜೋಯಿಸರನ್ನು ಕರೆಸುತ್ತಾರೆ. ಅಂಗ ನ್ಯೂನತೆಯಿರುವ ಹೆಣ್ಣುಗಳಾದರೆ ಅಂಗ ನ್ಯೂನತೆಯಿರುವ ಗಂಡಿಗೆ ಮದುವೆ ಮಾಡುತ್ತಾರೆ ಆದರೆ ಅಂಗ ನ್ಯೂನತೆ ಇಲ್ಲದಿರುವವನಿಗೆ ಅಂಗ ನ್ಯೂನತೆ ಇದ್ದವಳಿಗೆ ಮದುವೆ ಮಾಡುವುದಿಲ್ಲ. ಮದುವೆ ಚಪ್ಪರಕ್ಕೆ ವರ ಬರುವಾಗ ಅವನ ಕೈಯಲ್ಲಿ ಒಂದು ಕತ್ತಿಯಿರುತ್ತದೆ. ಧಾರೆ ಮುಗಿದು ತಾಳಿ ಕಟ್ಟಿದ ನಂತರ ಪೂಜಾರಿ, ಮೇಲಿಟ್ಟು ಆಶೀರ್ವಾದಿಸುತ್ತಾರೆ. ಮಾರನೇ ದಿನ ನಾಗೋಲೆ ಶಾಸ್ತ್ರ ಹಾಗೂ ಗೃಹಪ್ರವೇಶ ನಂತರ ಮದುವೆ ಮುಗಿಯುತ್ತದೆ. ವರನ ತಾಯಿಗೆ ವಧುವಿನ ಸೋದರಮಾವ ಹನ್ನೆರಡು ರೂಪಾಯಿಯಿಂದ ನಲವತ್ತು ರೂಪಾಯಿವರೆಗೆ ಹಣ ಕೊಡುತ್ತಾನೆ. ಹೆಣ್ಣಿನ ತಂದೆಗೆ ಯಾವ ಅಧಿಕಾರವೂ ಇಲ್ಲ. ೧೯೬೧ರ ಕರ್ನಾಟಕ ಜನಗಣತಿ ವರದಿಯ ಆಧಾರವಾಗಿಟ್ಟುಕೊಂಡು ತಯಾರಿಸಿರುವ ಪರಿಶಿಷ್ಟ ಬುಡಕಟ್ಟು ಜನಾಂಗೀಯ ಮಾಹಿತಿ ೧೯೬೧ರಲ್ಲಿ ಹಸಲರ ಜನಾಂಗದ ಬಗ್ಗೆ ಅನೇಕ ವಿಷಯಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಮದುವೆ ಸಂಪ್ರದಾಯಗಳ ಬಗ್ಗೆ ದೀರ್ಘವಾದ ವಿವರಣೆ ನೀಡಿದ್ದಾರೆ. ಕೆಲವರು ತುಳು ಹಸಲರು ಹಾಗೂ ಕನ್ನಡ ಹಸಲರು ಬ್ರಾಹ್ಮಣ ಪುರೋಹಿತರು ಅಥವಾ

ಲಿಂಗಾಯಿತ ಜಂಗಮರಲ್ಲಿ ಕೇಳಿ ಮದುವೆಗೆ ಒಳ್ಳೆಯ ದಿನವನ್ನು ನಿಶ್ಚಯಿಸುತ್ತಾರೆ. ಆದರೆ ತುಳು ಹಸಲರು ಕೆಲವರು ಬ್ರಾಹ್ಮಣ ಭಟ್ಟರನ್ನು ಕೇಳುವುದಿಲ್ಲ. ಯಾವುದಾದರೂ ಭಾನುವಾರ ಮದುವೆ ಇಟ್ಟುಕೊಳ್ಳುತ್ತಾರೆ. ಆದರೆ ಹುಣ್ಣಿಮೆ ಹಾಗೂ ಸಂಕ್ರಮಣ ದಿನ ಮದುವೆ ಮಾಡುವುದಿಲ್ಲ. ಹೆಚ್ಚಾಗಿ ಮದುವೆಗಳು ಮಾರ್ಚ್, ಏಪ್ರಿಲ್, ಮೇ ತಿಂಗಳಲ್ಲಿ ನಡೆಯುತ್ತದೆ. ಮದುವೆ ವಧುವಿನ ಮನೆಯಲ್ಲಿ ನಡೆಯುತ್ತದೆ. ಸುಮಾರು ಒಂಭತ್ತರಿಂದ ಹನ್ನೆರಡು ಕಂಬಗಳ ಚಪ್ಪರ ಮದುವೆಯ ಹಿಂದಿನ ದಿವಸ ರಚಿತವಾಗುತ್ತದೆ. ಮುಖ್ಯವಾದ ಕಂಬ ಹಲಸಿನ ಮರದ ಜಾತಿಯದು. ಅದು 'ಧಾರೆ ಕಂಬ'. ಮಾರನೆ ದಿನ ವರನ ತಂಗಿಯ ಅಥವಾ ಅಕ್ಕನ ಗಂಡ(ಭಾವ) ವರನಿಗೆ ಕ್ಷೌರ ಮಾಡುತ್ತಾನೆ. ಅಲ್ಲದೇ ಶಾಸ್ತ್ರೋಕ್ತ ಸ್ನಾನವು ಆಗುತ್ತದೆ. ವರನ ಸಂಬಂಧಿಗಳು ವರನನ್ನು ವಧುವಿನ ಮನೆಗೆ ಕರೆದುಕೊಂಡು ಬರುತ್ತಾರೆ. ವಧುವಿನ ಮನೆಯ ಎದುರಿನಲ್ಲಿ ಚಪ್ಪರ ಹಾಕಲಾಗುತ್ತದೆ. ಆದರೆ ವರನ ತಾಯಿ ಮನೆಯಲ್ಲೇ ಇರುತ್ತಾಳೆ. ವರ ಕಚ್ಚೆ ಪಂಚೆಯುಟ್ಟು ಅಂಗಿ ಹಾಕಿ, ತಲೆಗೆ ರುಮಾಲು ಸುತ್ತಿ ಕೈಯಲ್ಲಿ ಕತ್ತಿ ಅಥವಾ ಖಡ್ಗ ಹಿಡಿದಿರುತ್ತಾನೆ. ವಾಲಗದವರು ಮೆರವಣಿಗೆ ಮುನ್ನಡೆಸುತ್ತಾರೆ. ವಧುವಿನ ಮನೆಗೆ ಹೋಗುತ್ತಿದ್ದ ಹಾಗೆ ಅವಳಿಗೆ ತಂದ ಉಡುಗೊರೆಯನ್ನು ಹೆಣ್ಣಿನವರಿಗೊಪ್ಪಿಸುತ್ತಾರೆ. ದಾರೆ ಕಂಬಕ್ಕೆ ಒಂದು ತೆಂಗಿನಕಾಯಿ ಹಾಗೂ ಸೌತೆಕಾಯಿ ಕಟ್ಟುತ್ತಾರೆ. ಹೊಸ ಸೀರೆಯುಟ್ಟು ಆಭರಣ ಧರಿಸಿದ ವಧು ಈ ಕಂಬದ ಬಳಿ ಬರುತ್ತಾಳೆ. ವಧೂವರರು ಧಾರೆ ಕಂಬವನ್ನು ಮೂರುಬಾರಿ ಸುತ್ತು ಹಾಕುತ್ತಾರೆ. ವರನ ಭಾವ ವರನನ್ನು, ವರನ ಸಹೋದರಿ ವಧುವನ್ನು ಕೈ ಹಿಡಿದುಕೊಂಡು ಕಂಬ ಸುತ್ತಿಸುತ್ತಾರೆ. ನಂತರ ವರನ ಸಂಬಂಧಿಗಳಲ್ಲಿ ಹಿರಿಯನಾದವನೊಬ್ಬ ತಾಳಿಯನ್ನು ಬಿಗಿಯುತ್ತಾನೆ. ಹಿರಿಯರು ಅಕ್ಕಿಯ ಅಕ್ಷತೆಯನ್ನು ಹಾಕಿ ಆಶೀರ್ವಾದಿಸುತ್ತಾರೆ. ಹೆಣ್ಣಿನ ಕಡೆಯವರು ಉಡುಗೊರೆಯನ್ನು ಕೊಡುವರು. ಹೆಚ್ಚಾಗಿ ಅದು ಹಣದ ರೂಪದಲ್ಲಿರುತ್ತದೆ. ನಂತರ ವಧೂವರರು ತಮ್ಮ ಎರಡೂ ಕೈಗಳನ್ನು ಜೋಡಿಸಿ ಕೊಂಡಿರುತ್ತಾರೆ. ಜೋಡಿಸಿದ ಅವರ ಅಂಗೈಯಲ್ಲಿ ಅಕ್ಕಿ ಹಾಕುತ್ತಾರೆ. ಅದರ ಮೇಲೆ ಕೆಲವು ಗರಿಕೆಯ ಕುಡಿ ಹಾಕುವರು. ಆ ಗರಿಕೆಯ ಮೇಲೆ ನೀರು ಹಾಕುತ್ತಾರೆ. ಈ ಕಾರ್ಯಕ್ಕೆ ಧಾರೆ ಎನ್ನುತ್ತಾರೆ ಜೋಡಿಯ ಬಳಿಗಳನ್ನು ಕೂಗಿ ಹೇಳುವರು. ಯಾವುದೇ ಪುರೋಹಿತ ಅಲ್ಲಿ ಬರುವುದಿಲ್ಲ. ನಂತರ ಮದುವೆ ಊಟ ನಡೆಯುತ್ತದೆ. ಊಟಕ್ಕೆ ಸಸ್ಯಾಹಾರ, ಮಾಂಸಾಹಾರ ಎರಡೂ ಇರುತ್ತದೆ. ಹಿಂದಿನ ಕಾಲದಲ್ಲಿ ಹೆಂಡವನ್ನು ಕೊಡುತ್ತಿದ್ದರು. ಹೊಸ ಜೋಡಿಯು ಸಂಬಂಧಿಕರಿಂದ ಕೂಡಿ ವರನ ಗೃಹಕ್ಕೆ ತೆರಳುತ್ತದೆ. ವಧುವಿನ ತಾಯಿ ಮಾತ್ರ ಮನೆಯಲ್ಲೇ ಉಳಿಯುತ್ತಾಳೆ, ವರನ ಮನೆಯಲ್ಲಿ ವಧೂವರರು ಧಾರೆ ಕಂಬದ ಪಕ್ಕದಲ್ಲಿ ಕುಳಿತುಕೊಳ್ಳುತ್ತಾರೆ. ಆಗ ಉಡುಗೊರೆ ಶಾಸ್ತ್ರ ನಡೆಯುತ್ತದೆ. ನೆರೆದಿರುವವರಿಗೆ ಜೋಡಿಯ(ವಧೂವರರು) ವೀಳ್ಯಾ ಹಂಚುತ್ತಾರೆ. ನಂತರ 'ಜೋಡಿ'ಯು ಎಲ್ಲರೊಡನೆ ಸಾಮಾನ್ಯ ಪಂಕ್ತಿಯಲ್ಲಿಯೇ ಊಟಕ್ಕೆ ಕೂರುತ್ತಾರೆ. ವಧು ಹಾಗೂ ಅವಳ ಜೊತೆಗಾತಿಯನ್ನು ಬಿಟ್ಟು ಉಳಿದವರೆಲ್ಲರೂ ಅವರವರ ಊರಿಗೆ ಹೋಗುತ್ತಾರೆ. ಏಳನೇ ದಿನ ವರನ ತಂದೆ, ತಾಯಿ, ಕೆಲವು ಸಂಬಂಧಿಕರು ವಧು ಮನೆಗೆ

ಬಂದು ಉಡುಗೊರೆಯಾಗಿ ಹಣ್ಣು ಅಥವಾ ತಿನ್ನುವ ವಸ್ತುಗಳನ್ನು ಕೊಡುತ್ತಾರೆ. ಮಾರನೇ ದಿನ ಎಲ್ಲರೂ ಮರಳುತ್ತಾರೆ. ಮದುವೆ ಚಪ್ಪರವನ್ನು ಕೀಳುತ್ತಾರೆ. ಹಸಲರಲ್ಲಿ, ವಾಸಿಸುವ ಹಲವು ಭಾಗಗಳಲ್ಲಿ, ಮದುವೆ ಪದ್ಧತಿಗಳು, ಸಂಪ್ರದಾಯಗಳು ಬಹಳ ವ್ಯತ್ಯಾಸಗಳಿವೆ. ತೀರ್ಥಹಳ್ಳಿಯ ಹಲಸಿನ ಹಳ್ಳಿಯಲ್ಲಿ ನೃತ್ಯ ಸೇವೆಯಿಲ್ಲ. ಇಲ್ಲಿ ವರನೇ ಹೆಣ್ಣಿಗೆ ತಾಳಿ ಕಟ್ಟುತ್ತಾನೆ. ಅಲ್ಲದೇ ಬ್ರಾಹ್ಮಣ ಪುರೋಹಿತರು ಭಾಗಿಯಾಗುತ್ತಾರೆ. ಹಸಲರಲ್ಲಿ ಬ್ರಾಹ್ಮಣ ಪರೋಹಿತ ಮದುವೆಗೆ ಬರುತ್ತಾನೆ. ಇವಲ್ಲಿ ಮದುವೆ ಚಪ್ಪರದ ಧಾರೆ ಕಂಬ ಆಲದಮರದ್ದಾಗಿರುತ್ತದೆ. ಐರಾಣಿಯಲ್ಲಿ ನೀರು ತಂದು ವಧೂವರರಿಗೆ (ಅವರವರ ಮನೆಯಲ್ಲಿ) ಸ್ನಾನ ಮಾಡಿಸುತ್ತಾರೆ. ಇಲ್ಲೂ ಕೂಡ ವರನೇ ವಧುವಿಗೆ ತಾಳಿ ಕಟ್ಟುತ್ತಾನೆ. ಮದುವೆಯಲ್ಲಿ ಮಾಂಸಾಹಾರ ಮಾಡುವುದನ್ನು ಬಿಡಲಾಗಿದೆ. ಸೊರಬ ತಾಲ್ಲೂಕಿನ ಬ್ರಾಹ್ಮಣ ಭಟ್ಟ ಅಥವಾ ಲಿಂಗಾಯಿತ ಜಂಗಮ ಮದುವೆಯ ಪುರೋಹಿತ. ಇಲ್ಲಿರುವ ಹಸಲರ ಮದುವೆ ಪದ್ಧತಿ ಇತರ ಹಿಂದೂಗಳ ಮದುವೆಗಿಂತ ಭಿನ್ನವಾಗಿಲ್ಲ. ಮದುವೆಯ ಹಿಂದಿನ ದಿನ ಚಪ್ಪರ ಹಾಕುವುದು, ಐರಾಣಿಯಲ್ಲಿ ನೀರು ತರುವುದು, ಅತ್ತಿ ಅಥವಾ ಆಲದ ಮರದ ಕೊಂಬೆಯನ್ನು ತರುವುದು, ಮುತ್ತೈದೆಯರಿಂದ ಅರಿಶಿನ ಎಣ್ಣೆ ಹಚ್ಚಿ ಸ್ನಾನ ಮಾಡಿಸುವುದು, ತಾಳಿ ಕಟ್ಟುವುದು, ಜೋಡು ಕೈಯಲ್ಲಿ ಹಿಡಿದ ತೆಂಗಿನಕಾಯಿ ಮೇಲೆ ನೀರು ಹಾಕುವುದು, ಉಡುಗೊರೆ ಕೊಡುವುದು ಇವು ಮದುವೆಯ ಸಾಮಾನ್ಯ ಲಕ್ಷಣಗಳಾಗಿವೆ. ಅವರು ಮೆರವಣಿಗೆಗೆ ಕರೆದುಕೊಂಡು ಹೋಗುವ ಮುನ್ನ ಭೂಮಿ ಮತ್ತು ನಾಗೋಲಿ ಶಾಸ್ತ್ರ ಮಾಡುತ್ತಾರೆ. ಏರುತ್ತಿರುವ ಬೆಲೆಗಳಿಂದ, ಬದಲಾದ ಅಭಿರುಚಿಯಿಂದಾಗಿ ಈ ದಿನಗಳಲ್ಲಿ ಮದುವೆ ಬಹಳ ದುಬಾರಿಯಾಗಿದೆ. ಒಂದು ಬಂಗಾರದ ತಾಳಿ, ಬೆಳ್ಳಿಯ ಆಭರಣಗಳು ಅಂದರೆ ಕೋಲ್ಕಡಗ, ದುಂಡು ಸೊಂಟದ ಪಟ್ಟಿ, ಕಾಲುಂಗುರ, ಸಾಧಾರಣ ದರ್ಜೆಯ ಸೀರೆ ಮಧುವಿಗೆ ತೀರಾ ಅಗತ್ಯವಾಗಿದೆ. ಬಹಳಷ್ಟು ಗಂಡಸರು ಹಣ ಕೊಡುವ ಜಮೀನ್ದಾರರ ಮನೆಯಲ್ಲಿ ಸಾಲ ಮಾಡಬೇಕಾಗುತ್ತದೆ. ಸಾಲವನ್ನು ತೀರಿಸಲು ಜೀತದಾಳಾಗಿ ದುಡಿಯಬೇಕಾಗುತ್ತದೆ. ಹಸಲರಲ್ಲಿ ಶೋಭನ ನಡೆಯುವುದು ಗಂಡಿನ ಮನೆಯಲ್ಲಿ. ಇವರಲ್ಲಿ ಶೋಭನಕ್ಕಾಗಿ ಪ್ರತ್ಯೇಕ ಕಾರ್ಯಕ್ರಮವಿರುವುದಿಲ್ಲ. ಮದುವೆಯಾದ ಗಂಡು, ಹೆಣ್ಣು ಲೈಂಗಿಕ ಸಂಪರ್ಕಕ್ಕೆ ದೀಪಾವಳಿ ಹಬ್ಬದವರೆಗೆ ಕಾಯಬೇಕಾಗಿತ್ತು. ದೀಪಾವಳಿ ಬೂರೆಹಬ್ಬ (ನರಕ ಚತುರ್ದಶಿ)ದ ದಿವಸ ಬೂರೆ ನೀರು ಮಿಂದು ರಾತ್ರಿ ಗಂಡು ಹೆಣ್ಣು ಲೈಂಗಿಕ ಸಂಪರ್ಕ ಪಡೆಯುವುದು ಹಿಂದಿನಿಂದ ಬಂದ ರೂಢಿ. ಆದರೆ ಈಗ ಬದಲಾದ ಪರಿಸ್ಥಿತಿಯಲ್ಲಿ ಹಳೆಯ ಸಂಪ್ರದಾಯಗಳು ಮಾಯವಾಗುತ್ತಿವೆ. ಹಸಲರಲ್ಲಿ ಪುನರ್ವಿವಾಹ ಮಾಡಿಕೊಳ್ಳುವ ಪದ್ಧತಿಯಿದೆ. ವಿಧವೆಯಾದವಳು ಗಂಡನ ಸಹೋದರನನ್ನು ಬಿಟ್ಟು ಬೇರೆ ಯಾರನ್ನಾದರೂ ವಿವಾಹ ಮಾಡಿಕೊಳ್ಳಬಹುದು. ವಿಧವಾ ಪುನರ್ವಿವಾಹಕ್ಕೆ ಸೀರುಡಿಕೆ ಎನ್ನುವರು. ವಿಧುರ ವಿಧವೆಯರ ಮದುವೆಗೆ ಕೆಲ ಗ್ರಾಮಸ್ಥರು ಭಾಗವಹಿಸುವುದಿಲ್ಲ. ಮುತ್ತೈದೆ ಹೆಂಗಸರು, ಮಕ್ಕಳು ಭಾಗವಹಿಸುವ ಹಾಗಿಲ್ಲ ಗ್ರಾಮದ ಹಿರಿಯರು ಮತ್ತು ವಿಧವೆ ಕಡೆಯವರು ಹಾಗೂ ವಯಸ್ಸಾದ ಮಹಿಳೆಯರು ಸೇರಿ ಮದುವೆ ಮಾಡುತ್ತಾರೆ.

ಕೂಡಿಕೆ ಮಾಡಿಕೊಳ್ಳುವ ವಿಧುರ ವಿಧವೆಯ ಮಧ್ಯೆ ಕರೆ ಕಂಬಳಿ ತೆರೆ ಹಿಡಿದು ಹಣತೆ ದೀಪ ಹಚ್ಚಿಕೊಂಡು ಕೇರಿಯ ಹಿರಿಯರು ಧಾರೆ ಎರೆದು ತಾಳಿ ಕಟ್ಟಿಸುತ್ತಾರೆ. ಕೂಡಿಕೆಯ ಗಂಡು ಮದುವೆಯಲ್ಲಿ ಭಾಗವಹಿಸಿದ ಹಿರಿಯರಿಗೆ ಮಾಂಸ ಊಟ ಹಾಕಬೇಕು. ಗ್ರಾಮದಲ್ಲಿ ನಡೆಯುವ ಮಂಗಳಕಾರ್ಯಗಳಲ್ಲಿ ಕೂಡಿಕೆ ದಂಪತಿಗಳಿಗೆ ಪ್ರವೇಶವಿಲ್ಲ. ಬಂಧುಗಳ ಮಗಳ ಕಾರ್ಯದಲ್ಲಿ ಭಾಗವಹಿಸುವ ಸಂದರ್ಭದಲ್ಲಿ ಮನೆಯ ಒಳಗೆ ಮನೆಯಲ್ಲಿ ಕೂರಿಸಿ ಊಟ ಹಾಕುತ್ತಾರೆ. ಕರ್ನಾಟಕ ಜಾನಪದ ಸಂಸ್ಕೃತಿ ವಿಶ್ವಕೋಶ ಸಂಪುಟ ೧ (ಸಂ:ಕೃಷ್ಣಮೂರ್ತಿ ಹನೂರು, ೧೯೯೧)ರಲ್ಲಿ ಹಸಲರಲ್ಲಿ ವಿಧವಾ ಪುನರ್ವಿವಾಹಕ್ಕೆ ಅವಕಾಶವಿದೆ. ಆದರೆ ಮದುವೆಯಾದ ವಿಧವೆಯರು ಕೂಡ ವಿಶೇಷ ಕಾರ್ಯದಲ್ಲಿ ಭಾಗವಹಿಸುವ ಹಾಗಿಲ್ಲ. ಹಾದರ ಮಾಡುವ ಹೆಂಗಸಿಗೆ ಬಹಿಷ್ಕಾರ ಹಾಕುತ್ತಾರೆ. ಬಾಲ್ಯವಿವಾಹ ಕಡಿಮೆ ಎಂದೇ ಹೇಳಬೇಕಾಗುತ್ತದೆ. ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ ಸಂಪುಟ ೫)ಎಲ್.ಕೆ. ಅನಂತಕೃಷ್ಣ ಅಯ್ಯರ್ ಮತ್ತು ಎಚ್.ವಿ. ನಂಜುಂಡಯ್ಯ, ಪುನರ್ ಮುದ್ರಣ ೧೯೮೮)ರಲ್ಲಿ ವಿಧವಾ ವಿವಾಹವನ್ನು ಪ್ರಸ್ತಾಪ ಮಾಡಿದ್ದಾರೆ. ವಿಧವೆ ತನ್ನ ಗಂಡನ ಸಹೋದರರನ್ನು ಬಿಟ್ಟು ಬೇರೆ ಯಾರನ್ನು ಬೇಕಾದರೂ ಮದುವೆಯಾಗಬಹುದು. ಮದುವೆಯಾಗದವನು ವಿಧವೆಯನ್ನು ಮದುವೆಯಾಗುವುದಾದರೆ ಸಮಾಜಕ್ಕೆ ಇಪ್ಪತು ರೂಪಾಯಿ ದಂಡ ಕಟ್ಟಿ ಮೊದಲು ಎಕ್ಕೆ ಗಿಡಕ್ಕೆ ಮದುವೆ ಮಾಡುತ್ತಾರೆ. ಇಂತಹ ಮದುವೆಗಳಿಗೆ ವಿಧವೆಯರು ಅಥವಾ ಪುನರ್ವಿವಾಹವಾದವರು ಮಾತ್ರ ಭಾಗವಹಿಸುತ್ತಾರೆ. ವಿಧುರ, ವಿಧವೆ ಹೆಣ್ಣಿಗೆ ಐದು ಒಳ್ಳೆ, ಮೂಗುತಿ, ಕಪ್ಪು ಸೀರೆ ಹಾಗೂ ಕುಪ್ಪಸ ಕೊಡುತ್ತಾರೆ. ವಿಧವೆ ಅದನ್ನು ಉಟ್ಟುಕೊಳ್ಳುತ್ತಾಳೆ, ನಂತರ ವಿವಾಹದ ಜೋಡಿ ಒಟ್ಟಿಗೆ ನಿಲ್ಲುತ್ತಾರೆ. ಅವರ ಬಟ್ಟೆಯ ತುದಿಯನ್ನು ಗಂಟು ಹಾಕುತ್ತಾರೆ. ನಂತರ ಅಕ್ಕಿ ತೊಳೆದ ನೀರನ್ನು ಅವರ ಕೈಗೆ ಹಾಕುತ್ತಾರೆ. ಅದನ್ನು ಅವರು ಕುಡಿಯಬೇಕು ತಾಳಿ ಕಟ್ಟುವುದಿಲ್ಲ. ಆನವಟ್ಟಿಯಲ್ಲಿ, ವಿಧವೆ ಕೈಯಲ್ಲಿ ಕತ್ತಿ ಹಿಡಿದು ಮೂಲೆಯಲ್ಲಿ ಕುಳಿತಿರುತ್ತಾಳೆ. ರುಮಾಲು ಹಾಗೂ ವಿವಿಧ ಬಗೆಯ ಬಟ್ಟೆಗಳನ್ನು ಮದುವೆಯಾಗುವವನಿಗೆ ಉಡುಗೊರೆ ಮಾಡುತ್ತಾಳೆ, ಇನ್ನೊಂದು ಮೂಲೆಯಲ್ಲಿ ಹೊಸ ಬಟ್ಟೆ ಧರಿಸಿ ಕತ್ತಿ ಹಿಡಿದು ವರ ಕೂತಿರುತ್ತಾನೆ. ಅವನು ಅವಳಿಗೆ ಸೀರೆ ಮತ್ತು ಕುಪ್ಪಸ ಕೊಡುತ್ತಾನೆ. ಊಟದ ವ್ಯವಸ್ಥೆಯಿರುತ್ತದೆ. ಮೂರು ದಿವಸ ಅವಳು ಒಂದು ಕೋಣೆಯಲ್ಲಿ ಅಡಗಿರುತ್ತಾಳೆ, (ಮದುವೆಯಾದ ಸ್ತ್ರೀಯರಿಂದ ದೂರವಿರಲು). ಕೆಲವು ಕಡೆ ಮದುವೆ ವಿಧವೆಯ ಮನೆಯಲ್ಲಿ ನಡೆಯುತ್ತದೆ. ಎಂಟು ರೂಪಾಯಿ ತೆರ ವಿಧವೆಗೆ ವರ ಕೊಡಬೇಕು. ಪರಿಶಿಷ್ಟ ಬುಡಕಟ್ಟು ಜನಾಂಗೀಯ ಮಾಹಿತಿ, ವಿಧವೆ ಅಥವಾ ವಿಚ್ಛೇದನ ಹೊಂದಿದವಳು ಮದುವೆಯಾಗ ಬೇಕಿದ್ದರೆ ಅವಳ ಮರಣ ಹೊಂದಿದ ಗಂಡ ಅಥವಾ ವಿಚ್ಛೇದಿತ ಗಂಡನ ಕುಟುಂಬವನ್ನು ಹೊರತುಪಡಿಸಿ ಬೇರೆ ಕಡೆ ಆಗಬಹುದು. ವಿಧವೆಯಾದವಳು ತನ್ನ ಗಂಡನ ಮನೆಯಲ್ಲಿ ಇರುತ್ತಾಳೆ, ಕೆಲವು ಬಾರಿ ತವರುಮನೆಯಲ್ಲಿಯೂ ಇರುವಳು. ಇದಕ್ಕೆ ಯಾವುದೇ ನಿರ್ಬಂಧವಿಲ್ಲ. ವಿಧವಾ ಪುನರ್ವಿವಾಹಕ್ಕೆ ಸೀರುಡಿಕೆ ಎನ್ನುತ್ತಾರೆ. ಅದು ಸರಳ ಸಮಾರಂಭ ಗಂಡನಾಗುವವನು ವಧುವಿಗೆ

ಹೊಸ ಸೀರೆ ಹಾಗೂ ಕುಪ್ಪಸ ಕೊಡುತ್ತಾರೆ. ಸುಮಾರು ಹನ್ನೆರಡು ಜನ ಅಥವಾ ಹೆಚ್ಚು ಹತ್ತಿರದ ಸಂಬಂಧಿಕರು ಇರುತ್ತಾರೆ. ಹಸಲರಲ್ಲಿ ವಿವಾಹ ವಿಚ್ಛೇದನಕ್ಕೂ ಅವಕಾಶವಿದೆ. ಹೆಂಡತಿಯನ್ನು ವಿಚ್ಛೇದನ ಪಡೆಯುವವನು ತನ್ನ ಜಾತಿಯ ಜನರು ಮತ್ತು ಹಿರಿಯರನ್ನು ಸೇರಿಸಿ ಹೆಂಡತಿಯನ್ನು ಬಿಡುವ ಕಾರಣವನ್ನು ತಿಳಿಸಬೇಕಾಗುತ್ತದೆ. ತನ್ನ ಜಾತಿಯ ಹಿರಿಯರಿಂದ ಒಪ್ಪಿಗೆ ಪಡೆದ ನಂತರ ವಿವಾಹ ವಿಚ್ಛೇದನ ಮಾಡಿಕೊಳ್ಳಲು ಅನುಮತಿ ದೊರೆಯುವುದು. ಹೆಂಡತಿಯ ಸೀರೆಯ ಕೊನೆಯ ತುದಿಯನ್ನು ಮತ್ತು ತಾಳಿಯನ್ನು ಹರಿದು ಅವಳ ಹೆಸಿರಿನಲ್ಲಿ ಶವಸಂಸ್ಕಾರ ವಿಧಿ ಮಾಡುವರು. ಪರಿಶಿಷ್ಟ ಬುಡಕಟ್ಟು ಜನಾಂಗೀಯ ಮಾಹಿತಿ ೧೯೭೧ರಲ್ಲಿ ಹೆಂಗಸು ತನ್ನ ವಿಟನೊಡನೆ ಓಡಿಹೋದರೆ ಅವಳು ಗಂಡನಿಂದ ತಿರಸ್ಕೃತಳಾಗುತ್ತಾಳೆ. ಆ ವಿಟಹತ್ತಿರ ಹಳ್ಳಿಗಳಲ್ಲಿದ್ದರೆ ಅಥವಾ ನೆರೆಯವನೇ ಆದರೆ ಪಂಚಾಯಿತಿ ಮಾಡಿ ಅವನಿಗೆ ದಂಡ ವಿಧಿಸುತ್ತಾರೆ. ಹೆಂಗಸು ಗಂಡನ ಜೊತೆಯಲ್ಲಿರಲು ಬಯಸದಿದ್ದಲ್ಲಿ ಅವಳ ಸಂಬಂಧಿಕರು ಗಂಡ ಮಾಡಿದ ಮದುವೆ ಖರ್ಚಿನ ಹಣವನ್ನು ಕೊಡಬೇಕಾಗುತ್ತದೆ. ಒಂದು ವೇಳೆ ಗಂಡನೇ ಹೆಂಡತಿಯನ್ನು ಬಿಡುವುದಾದರೆ, ಅವಳನ್ನು ತವರುಮನೆಗೆ ಕರೆದುಕೊಂಡು ಹೋಗಿ ಅವಳ ಪೋಷಕರಿಗೆ ಅವಳ ತಪ್ಪು ನಡವಳಿಕೆ, ಸ್ವಭಾವಗಳನ್ನು ವಿವರಿಸಿ ಹೇಳಿ ಬಿಟ್ಟುಬರುತ್ತಾನೆ. ಇದಾದ ನಂತರ ಅವಳು ಪುನಃ ಮದುವೆಯಾಗಬಹುದು, ವಿಚ್ಛೇದನದ ಹಳೆ ಪದ್ಧತಿಗಳಾದ ಸೀರೆಯ ತುದಿಯನ್ನು ಹರಿಯುವುದು, ಬದುಕಿರುವಾಗಲೇ ಶವಸಂಸ್ಕಾರದ ಶಾಸ್ತ್ರ ಮಾಡುವುದು ಈಗ ಇಲ್ಲ. ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ ಸಂಪುಟ ೫(ಎಲ್.ಲೆ. ಅನಂತಕೃಷ್ಣ ಅಯ್ಯರ್ ಮತ್ತು ಎಚ್.ವಿ. ನಂಜುಡಯ್ಯ, ಪುನರ್ ಮುದ್ರಣ ೧೯೮೮)ರಲ್ಲಿ ಅನ್ಯೆತಿಕ ಸಂಬಂಧವಿಟ್ಟುಕೊಂಡರೆ ದಂಡ ಹಾಕುತ್ತಾರೆ. ಅನ್ಯೆತಿಕ ಸಂಬಂಧವಿಟ್ಟುಕೊಂಡು ಗರ್ಭಿಣಿಯಾಗಿದ್ದರೆ ಅವಳ ವಿಟನೊಡನೆ ಕೂಡಿಕೆ ಮಾಡಲಾಗುವುದು, ಗಂಡು ವಿಚ್ಛೇದನ ಬಯಸಿದರೆ ಆ ವಿಷಯವನ್ನು ಅವನ ಜಾತಿಯ ಜನರಿಗೆ ತಿಳಿಸಬೇಕಾಗುತ್ತದೆ.

**೪.೭. ಹಬ್ಬ ಮತ್ತು ಆಚರಣೆಯ ನಂಬಿಕೆಗಳು**

ಹಸಲರು ಹಿಂದೂಗಳು ಆಚರಿಸುವ ಎಲ್ಲ ಹಬ್ಬಗಳನ್ನು ಆಚರಿಸುತ್ತಾರೆ. ಆರಿದ್ರಾ ಮಳೆಹಬ್ಬ, ದೀಪಾವಳಿ, ಸಂಕ್ರಾಂತಿ, ಕೊಡೆ ಅಮಾವಾಸ್ಯೆ ಹಬ್ಬಗಳನ್ನು ವಿಶೇಷವಾಗಿ ಆಚರಿಸುತ್ತಾರೆ. ಆರಿದ್ರ ಮಳೆ ಪ್ರಾರಂಭ ಅಥವಾ ಮುಕ್ತಾಯಗೊಳ್ಳುವಾಗ ಯಾವುದಾದರೂ ಭಾನುವಾರ ಅಥವಾ ಮಂಗಳವಾರ ಈ ಹಬ್ಬವನ್ನು ಆಚರಿಸುತ್ತಾರೆ. ಇದರಲ್ಲಿ 'ಗ್ರಾಮದೇವರು'ಮತ್ತು ಚೌಡಿಯನ್ನು ಪೂಜಿಸುತ್ತಾರೆ. ಈ ದೇವತೆಗಳಿಗೆ ಕುರಿ, ಕೋಳಿ ಬಲಿ ಕೊಡುವರು, ಕೊಟ್ಟೆ ಕಡುಬು, ಕುರಿಮಾಂಸದ ಸಾರು ಮಾಡಿ ಊಟ ಮಾಡುವರು. ಇದು ಮಳೆಗಾಲದಲ್ಲಿ ನಡೆಯುವ ಹಬ್ಬವಾದ್ದರಿಂದ ಕುರಿ ಕೊಯ್ಯಲು ಮಕ್ಕಳೊಡಗೂಡಿ ಕಂಬಳಿಕೊಪ್ಪೆ ಹಾಕಿಕೊಂಡು ಹೋಗುತ್ತಾರೆ. ಸಂಕ್ರಾಂತಿ ಹಬ್ಬದ ದಿವಸ ಹಸಲರು 'ಹೊಸಲು' ಪೂಜೆ ಮಾಡಿ ತೆಂಗಿನಕಾಯಿ ಒಡೆಯುತ್ತಾರೆ. ನಂತರ ಪಾಯಸ, ಚಿತ್ರನ್ನ, ಅನ್ನ, ಸಾರು ಊಟ ಮಾಡುತ್ತಾರೆ. ಕೊಡೆ ಅಮಾವಾಸ್ಯೆಯ ದಿವಸ ಹೊಸದಾಗಿ ಮದುವೆಯಾದ

ಮನೆಯ ಅಳಿಯ ಬರುತ್ತಾನೆ. ಅಳಿಯನಿಗೆ ಕೊಡೆ(ಛತ್ರಿ) ಮತ್ತು ಬೆಳ್ಳಿ ಉಂಗುರ ಉಡುಗೊರೆ ಕೊಡುವ ಪದ್ಧತಿಯಿದೆ. ಮನೆಗೆ ಬಂದ ಅಳಿಯಂದಿರಿಗೆ ಕೋಳಿ ಮಾಂಸದ ಅಡುಗೆಯನ್ನು ತಯಾರಿಸಿ ಊಟ ಹಾಕುವರು. ದೀಪಾವಳಿ ಮಲೆನಾಡಿನ ಎಲ್ಲಾ ಜನಾಂಗದವರಿಗೆ ಸಂಭ್ರಮದ ಹಬ್ಬ, ಐದು ದಿವಸಗಳು ನಡೆಯುವ ಈ ಹಬ್ಬಕ್ಕೆ 'ದೊಡ್ಡಹಬ್ಬ' ಎನ್ನುವರು. ಶಿವಮೊಗ್ಗ ಜಿಲ್ಲೆಯ ಹಸಲರು ಸಮುದಾಯದ ದೊಡ್ಡ ಹಬ್ಬವೆಂದರೆ ದೀಪಾವಳಿ, ರಾತ್ರಿ ವಿಶೇಷ ಪೂಜೆ ದೇವರಿಗೆ ಎಡೆ ಹಾಕುವವರೆಗೆ ಪುರುಷರು ಮತ್ತು ಮಹಿಳೆಯರು ಯಾವುದೇ ಆಹಾರವನ್ನು ಸೇವಿಸುವುದಿಲ್ಲ ಕೆಲವರಂತೂ ಮುಂಜಾನೆಯಿಂದ ರಾತ್ರಿ ದೇವರ ಪೂಜೆಯ ತನಕ ನೀರನ್ನು ಕೂಡ ಸೇವಿಸುವುದಿಲ್ಲ. ದೀಪಾವಳಿ ಹಬ್ಬದ ದಿನ ಭೂತ ದೇವರಿಗೆ ಕೋಳಿಯ ಎಡೆಯನ್ನು ಹಾಕುತ್ತಾರೆ. ಹಸಲರು ಬುಡಕಟ್ಟಿನ ಕೆಲ ಮನೆಯ ದೇವರು ಮತ್ತು ಕುಲ ದೇವರೆಂದರೆ, ಭೂತ, ಚೌಡಮ್ಮ, ಯಕ್ಷಿ,ಕೂಡುಗುಂಜಿ ಶನೀಶ್ವರ, ಕಾಂಚಿಕಾಯಿಹಾಡಿ ಶನೀಶ್ವರ, ಕರ್ಕಿಕೊಪ್ಪ ಶನೀಶ್ವರ, ಸಿಗಂಧೂರು ಶನೀಶ್ವರ, ಹಸಲರ ಮನೆಯ ದೇವರು ಮತ್ತು ಕುಲದೇವರಾಗಿದ್ದಾರೆ. ಬೀರಲು ಪೂಜೆ ಈ ಸಮುದಾಯದಲ್ಲಿ ಕಂಡು ಬರುತ್ತದೆ. ಕಾಡಿಗೆ ಹೋದರೆ ಈ ದೇವರು ನಮ್ಮ ಜೊತೆಗೆ ಬರುತ್ತಾನೆ ಎಂಬ ನಂಬಿಕೆ ಧೈರ್ಯ ಈ ಸಮುದಾಯದಲ್ಲಿದೆ. ಬೂರೆ ಅಮಾವಾಸ್ಯೆ, ಪಾಡ್ಯ, ಮರಿಪಾಡ್ಯ ಮತ್ತು ವರ್ಷತೊಡಕು ಎಂದು ಹಸಲರು ತುಂಬಾ ಸಡಗರದಿಂದ ಆಚರಿಸುತ್ತಾರೆ. ದೀಪಾವಳಿ ಮೊದಲನೇ ದಿವಸ ನರಕ ಚತುರ್ದಶಿ ಅಥವಾ ಬೂರೆ. ಬಲೀಂದ್ರ ಪಾತಾಳ ಲೋಕದಿಂದ ಭೂಲೋಕಕ್ಕೆ ಈ ದಿವಸ ಬರುತ್ತಾನೆ ಎಂಬ ನಂಬಿಕೆ. ಹಸಲರು ಪ್ರತಿ ಮನೆಯಲ್ಲಿಯೂ ಬಲೀಂದ್ರ ನನ್ನು ತರುತ್ತಾರೆ. ಹೊಸದಾದ ಮಣ್ಣಿನ ಮಡಕೆ(ಮಗೆ)ಯನ್ನು ತಂದು ಬೂರೆದಿವಸ ಬೆಳಗಿನ ಜಾವ ಬಾವಿಗೆ ಹೋಗಿ ಹೊಸನೀರು ತುಂಬಿಸಿಕೊಂಡು ಬರುತ್ತಾರೆ. ಇದಕ್ಕೆ ಬೂರೆನೀರು ಎನ್ನುವುರು. ಐದು ದಿವಸ ಬಲಿಂದ್ರವನ್ನಿಟ್ಟು ಪೂಜಿಸುತ್ತಾರೆ. ಮಗೆಯ ಮೇಲೆ ದೀಪವನ್ನು ಇಟ್ಟು ಮಗೆಯ ಕೆಳಗೆ ಸಗಣಿಯನ್ನು ಸುತ್ತ ಇಟ್ಟು ಹಸಿ ಅಡಿಕೆಕಾಯಿ. ಕಹಿ ಅಂಡ್ಯೆಕಾಯಿ ಸಗಣೆಯಲ್ಲಿ ಹುಗಿದು, ಮುಂದೆ ಬಸವನ ಪಾದದ ಶೇಡಿ ಬರೆದಿರುತ್ತಾರೆ. ದೀಪಾವಳಿಯ ಎರಡನೇ ದಿವಸ ಬೆಳಗ್ಗೆ ಮನೆಯಲ್ಲಿರುವ ಜಾನುವಾರುಗಳಿಗೆ ಬಾವಿಯಿಂದ ನೀರು ಎತ್ತಿ ಅಥವಾ ಹತ್ತಿರದ ಹಳ್ಳದಲ್ಲಿ ಮೈ ತೊಳೆಯುವರು. ಕೆಲವರು ಅಮಾವಾಸ್ಯೆ ಹಬ್ಬವನ್ನು ಮಾಡುವರು. ಗಂಡಸರು ಪಾಡ್ಯದ ದಿವಸ ಗೋಪೂಜೆಗೆ ಬೇಕಾಗುವ ಮಾವಿನಸೊಪ್ಪು, ಬಚ್ಚಲುಬಳ್ಳಿ, ಹಿಂಗಾರ, ಪಚ್ಚೆತೆನೆ, ಅಂಬಾಡಿ ಎಲೆ, ಹಸಿ ಅಡಿಕೆ ಮುಂತಾದ ಸಾಮಾನುಗಳನ್ನು ಸಂಗ್ರಹಿಸುವರು. ರಾತ್ರಿ ಮಹಿಳೆಯರು ಮಡಿಯಾಗಿ ಉಪ್ಪು ಹಾಕದೇ ಚಿಕ್ಕ ಚಿಕ್ಕ ಸಪ್ಪೆರೊಟ್ಟಿ ಸುಡುವರು. ಪಾಡ್ಯದ ದಿವಸ ಮುಂಜಾನೆ ಎದ್ದು, ಹಿಂದಿನ ದಿವಸ ತಂದಿರುವ ಸಾಮಾನುಗಳನ್ನು ಜೋಡಿಸಿ. ಗೊಂಚಲು ಗೊಂಚಲಾಗಿ ಬಚ್ಚಲಬಳ್ಳಿಯಿಂದ ದಂಡೆ ಕಟ್ಟುವರು. ಇದಕ್ಕೆ ಪ್ರಸಾರ ಎನ್ನುವರು. ಜಾನುವಾರುಗಳ ಕೋಡಿಗೆ ಹುರಿಮಂಜು ಬಣ್ಣ ಹಚ್ಚಿ ಕವಲುನಾರಿನಿಂದ ಮಾಡಿದ ಹಣೆಕಟ್ಟು ದಂಡೆಗಳನ್ನು ಹಣೆ ಮತ್ತು ಕೊರಳಿಗೆ ಕಟ್ಟುವರು. ಸಪ್ಪೆರೊಟ್ಟಿ, ಹಸಿ ಅಡಿಕೆ, ಅಡಿಕೆ

ಚೆಂಡು, ಹೂವಿನ ದಂಡೆಗಳನ್ನು ಕಟ್ಟುವರು. ಜೇಡಿ ಮತ್ತು ಕೆಮ್ಮಣ್ಣು ನೀರಿನಲ್ಲಿ ಬೆರೆಸಿ, ಒಂದು ಮರದ ಸಿದ್ದೆಯಿಂದ ಜಾನುವಾರುಗಳಿಗೆ ದಾಕು ಹಾಕುವರು. ನಂತರ ನೆನೆಯಕ್ಕಿ, ನೆನೆಗಡಲೆ, ಕೊಟ್ಟೆ ಕಡುಬು ಇಟ್ಟು ಗೋವುಪೂಜೆ(ಕಾಲು ಪೂಜೆ) ಮಾಡುವರು. ನೆನೆಯಕ್ಕಿ, ನೆನೆಗಡಲೆಯನ್ನು ಎಲ್ಲಾ ಜಾನುವಾರುಗಳಿಗೂ ತಿನ್ನಿಸುವರು. ಗ್ರಾಮದವರೆಲ್ಲ ಒಟ್ಟಿಗೆ ದನಗಳನ್ನು ಬಿಟ್ಟು ಓಡಿಸುವ. ಕೆಲವರು ಜಾನುವಾರುಗಳ ಹಿಂದೆ ಓಡಿ ಪ್ರಸಾದ, ಕಡುಬಿನ ಸರ ಹಿಡಿಯುವರು. ನಂತರ ಮನೆಯಲ್ಲಿರುವ ವ್ಯವಸಾಯೋಪಕರಣಗಳು, ಆಯುಧಗಳನ್ನು ತೊಳೆದು ಬೂರೆಮಗೆ(ಬಲೀಂದ್ರ) ಹತ್ತಿರ ಜೋಡಿಸುವರು. ಈ ದಿವಸ ಭೂತ, ಚೌಡಿ, ಯಕ್ಷಿ ಇತ್ಯಾದಿ ದೇವರುಗಳಿಗೆ ಹಣ್ಣುಕಾಯಿ ಮಾಡಿ ಪೂಜೆ ಸಲ್ಲಿಸುವರು. ಇದೇ ದಿವಸ ರಾತ್ರಿ ಹಿರಿಯರ ಪೂಜೆ ನಡೆಯುತ್ತದೆ. ಹಸಲರಲ್ಲಿ ಪ್ರತಿ ಕುಟುಂಬದಲ್ಲಿ ಅವರದೇ ಆದ ದೇವರುಗಳ ಮುಖಗಳಿರುತ್ತವೆ. ಗುತ್ಯಮ್ಮ, ಚೌಡಿಯ ಪಂಚಲೋಹದ ಮುಖಗಳು, ಜೊತೆಗೆ ಹಣತೆ, ದೀಪಾರತಿ, ಜಾಗಟೆ, ಶಂಖಗಳಿರುತ್ತವೆ. ಇವುಗಳನ್ನು ಅಟ್ಟದ ಮೇಲೆ ಮನೆಯ ಕೋಳಿಗೆ ಅಡಿಕೆ ಹಾಳೆಯಲ್ಲಿಟ್ಟು ಕಟ್ಟಿರುತ್ತಾರೆ. ದೀಪಾವಳಿ ಪಾಡ್ಯದ ದಿವಸ ಅಟ್ಟದ ಮೇಲಿಂದ ಇಳಿಸಿ, ಬೆಳಗ್ಗೆ ಪೂಜೆಗೆ ಇಡುತ್ತಾರೆ. ಹಾಗೆಯೇ ಹಿರಿಯರ ಪೂಜೆ ಕೂಡ ಹಸಲರಿಗೆ ಮಹತ್ವದ್ದಾಗಿದೆ. ತಮ್ಮ ಕುಟುಂಬದಲ್ಲಿ ಮರಣ ಹೊಂದಿದ ಹಿರಿಯರಿಗೆ ಪಾಡ್ಯದ ದಿವಸ ರಾತ್ರಿ ಪೂಜೆ ಸಲ್ಲಿಸುತ್ತಾರೆ. ಬಾವಿಯಿಂದ ನೀರು ತಂದು ತಂಬಿಗೆಗೆ ಹಾಕಿ ತಂಬಿಗೆಯ ಮೇಲೆ ತೆಂಗಿನಕಾಯಿಯಿಟ್ಟು ಕಳಸ ಮಾಡಿ ಒಂದು ಮಣೆಯ ಮೇಲೆ ಕುಡಿಬಾಳೆಯಲ್ಲಿ ಒಂದು ಬೊಗಸೆ ಅಕ್ಕಿ ಹಾಕಿ ಮಣೆಯ ಮೇಲಿಡುವರು. ಇದರ ಮೇಲೆ ಕಳಸವನ್ನು ಮತ್ತು ಪಕ್ಕದಲ್ಲಿ ಕುಟುಂಬದ ದೇವರುಗಳನ್ನು ಇಡುವರು. ಕೆಸುವಿನ ಸೊಪ್ಪು, ಹಾಗಲಕಾಯಿ, ಸೌತೆಕಾಯಿ ಪ್ರತ್ಯೇಕವಾಗಿ ಸಾರು ಮಾಡುವರು. ಅಕ್ಕಿಯಿಂದ ಚರವು ಮಾಡಿ ಎಡೆಮಾಡುತ್ತಾರೆ. ತಂದೆ, ತಾಯಿ ಇಬ್ಬರೂ ಮರಣ ಹೊಂದಿದ್ದರೆ ಎರಡು ಮಾಡುತ್ತಾರೆ. ತೀರ್ಥಹಳ್ಳಿಯ ಭಾಗದಲ್ಲಿ ಕುಟುಂಬದಲ್ಲಿ ಮರಣ ಹೊಂದಿದ ಪ್ರತಿಯೊಬ್ಬರಿಗೂ ಎಡೆ ಮಾಡುತ್ತಾರೆ. ವ್ಯವಸಾಯೋಪಕರಣ ಮತ್ತು ಆಯುಧಗಳಿಗೆ ಹಣ್ಣು, ಕಾಯಿ ಒಡೆದು ಪೂಜೆ ಮಾಡುತ್ತಾರೆ, ನಂತರ ಕಡುಬಿನ ಊಟ ಮಾಡುವರು. ಊಟ ಆದಮೇಲೆ ಗ್ರಾಮಗಳ ಹಿರಿಯರೊಂದಿಗೆ ಉತ್ಸಾಹಿ ಯುವಕರು ಸೇರಿ ಹಬ್ಬ ಹಾಡಲು ಹೋಗುವರು. ದೀಪಾವಳಿಯ ಪಾಡ್ಯದಿಂದ ಪ್ರಾರಂಭಿಸಿ ವರ್ಷತೊಡಕಿನವರೆಗೆ ಮೂರು ದಿವಸಗಳ ರಾತ್ರಿ ನಡೆಯುವ ಜನಪದಗೀತ ಸಂಪ್ರದಾಯವೇ ಹಬ್ಬ ಹಾಡುವುದು ಅಥವಾ ಅಂಟಿಗೆ-ಪಂಟಿಗೆ ಎನ್ನುವರು. ಈ ಸಂಪ್ರದಾಯವನ್ನು ಮಲೆನಾಡು ಭಾಗದ ಸಾಗರ, ಸೊರಬ, ಹೊಸನಗರ ಹಾಗೂ ತೀರ್ಥಹಳ್ಳಿ, ತಾಲ್ಲೂಕಿನ ಹಸಲರು ಹಿಂದಿನಿಂದ ಉಳಿಸಿಕೊಂಡು ಬಂದಿದ್ದಾರೆ. ಶಿವಮೊಗ್ಗ ಜಿಲ್ಲೆಯ ಸಾಗರ, ಸೊರಬ, ಹೊಸನಗರಗಳಲ್ಲಿ ಹಬ್ಬ ಹಾಡುವುದು, ಜ್ಯೋತಿ ನೀಡುವುದು ಎನ್ನುವರು. ತೀರ್ಥಹಳ್ಳಿ ಮತ್ತು ಚಿಕ್ಕಮಗಳೂರಿನ ಕೆಲವು ಭಾಗಗಗಳಲ್ಲಿ ಅಂಟಿಗೆ-ಪಂಟಿಗೆ ಎಂದೂ ಕರೆಯುವರು. ಈ ಸಂಪ್ರದಾಯದಲ್ಲಿ ಹಾಡುವ ಹಾಡುಗಳಿಗೆ ಶಿವಮೊಗ್ಗ ಜಿಲ್ಲೆಯ ಸೊರಬದಲ್ಲಿ 'ಬಲ್ಲಾಳಿ' ಪದ್ಯಗಳೆಂದೂ, ಸಾಗರ, ಹೊಸನಗರಗಳಲ್ಲಿ ಹಬ್ಬ

ಹಾಡುವುದು, ತೀರ್ಥಹಳ್ಳಿ ಮತ್ತು ಕೆಲವು ಭಾಗಗಳಲ್ಲಿ ಅಂಟಿಗೆ-ಪಂಟಿಗೆ ಪದಗಳು ಎಂದೂ ಕರೆಯುವರು. ಈ ಹಾಡುಗಳು ನಮ್ಮ ಜನಪದ ಸಾಹಿತ್ಯದ ಶ್ರೀಮಂತ ಭಂಡಾರ. ಇವು ಕಂಠಸ್ಥ ಸಂಪ್ರದಾಯಗಳಲ್ಲಿ ಉಳಿದುಬಂದಿದೆ. ಇದೊಂದು ಮಲೆನಾಡು ಪ್ರದೇಶದಲ್ಲಿ ಜನಪ್ರಿಯವಾಗಿರುವ ದೀಪ ನೀಡುವ ವಿಶಿಷ್ಟ ಸಂಪ್ರದಾಯ. ಈ ಜನಪದ ಹಾಡುಗಾರರ ತಂಡದವರನ್ನುಹಬ್ಬ ಹಾಡುವವರು, ಜ್ಯೋತಿ ನೀಡುವವರು ಹಾಗೂ ಅಂಟಿಗೆ-ಪಂಟಿಗೆಯವರು ಎನ್ನುತ್ತಾರೆ. ಈ ತಂಡದ ಮುಖ್ಯಸ್ಥ ಕಚ್ಚೆಪಂಚೆಯುಟ್ಟು ಷರಟಿನ ಮೇಲೆ ಕಹಳೆಯ ಕಪ್ಪು ಕೋಟು ಹಾಕಿಕೊಳ್ಳುವನು. ತಲೆಗೆ ಪೇಟ ಸುತ್ತಿಕೊಂಡಿರುತ್ತಾನೆ. ಉಳಿದವರು ದಿನ ನಿತ್ಯದ ಉಡುಪಿನಲ್ಲಿಯೇ ಇರುತ್ತಾರೆ. ಕೆಲವರು ಕೈಯಲ್ಲಿ ದೊಣ್ಣೆ ಹಿಡಿದಿರುತ್ತಾರೆ. ತಂಡದಲ್ಲಿ ಒಬ್ಬ ಹಿರಿಯ ವ್ಯಕ್ತಿ ಜ್ಯೋತಿ ಹಿಡಿದಿರುತ್ತಾನೆ. ಕೆಲವರು ಚಳಿಯಾಗದಿರ ಲೆಂದು ಕಂಬಳಿಕೊಪ್ಪೆ ಹಾಕಿಕೊಂಡಿರುತ್ತಾರೆ. ಪಾಡ್ಯದ ರಾತ್ರಿ ಹಬ್ಬದ ಊಟವಾದ ನಂತರ ರಾತ್ರಿ ಎಂಟು ಗಂಟೆಗೆ ನಾಮದೇವರ ಒಕ್ಕಲಾಗಿರುವ ಗ್ರಾಮಗಳಲ್ಲಿನ ಯಜಮಾನನ ಮನೆಯಲ್ಲಿರುವ ಕಂಚಿನ ದೀಪ ಅಥವಾ ಮಣ್ಣಿನ ಹಿಡಿಕೆಯಿರುವ ದೊಡ್ಡ ಹಣತೆ ದೀಪವನ್ನು ಆ ಮನೆಯ ಬಲೀಂದ್ರ ದೀಪದಿಂದ ಹಚ್ಚಿಕೊಂಡು 'ದಿಪ್ಪುಡು ದಪ್ಪಾಡು ಹೋಳಿಗೋ ಹಬ್ಬಕ್ಕೊಂದು ಹೋಳಿಗೊ' ಎಂದು ತಂಡದ ನಾಯಕ ಹೇಳಿದಾಗ ಹಿಮ್ಮೇಳದವರು 'ದಿಮ್ ಸಲೋ' ಎಂದು ಧನಿಗೂಡಿಸುತ್ತಾರೆ. ದಾರಿಯಲ್ಲಿ ಸಾಗುವಾಗ ಧಿಮಿಸಾಲ್ಹೊಡಿರಣ್ಣಾ, ಧಿಮಿಸಾಲ್ಹೊಡಿರೊ ಎಂದು ತಂಡದ ನಾಯಕ ಹೇಳಿದಾಗ ಹಿಮ್ಮೇಳದವರು ಧಿಮಿಸಾಲೊ ಎಂದು ಕೂಗುತ್ತಾರೆ.

**೪.೮. ಅಂಟಿಗೆ-ಪಂಟಿಗೆ**

ಅಂಟಿಗೆ-ಪಂಟಿಗೆಯು ಶಿವಮೊಗ್ಗ ಜಿಲ್ಲೆಯ ಕೆಲವು ತಾಲೂಕಿಗಳಲ್ಲಿರುವ ಪ್ರಚಲಿತವಿರುವ ಕಲೆ. ಅವಂಟಿಗ್ಯೊ-ಪಂವಟಿಗ್ಯೊ, ಅಡೀಪಿಡೀ, ಅಂಟಿ-ಸುಂಟಿ, ಅವಟಿಗೊ-ಪವಟಿಗೊ, ಔಂಟಗ್ಯೋ-ಸುಂಟಿಗ್ಯೋ ಇತ್ಯಾದಿ ಹೆಸರುಗಳಿಂದ ಕರೆಯಲಾಗುತ್ತದೆ. ಮುಖ್ಯವಾಗಿ ಹಸಲರು ಇದರಲ್ಲಿ ಪಾಲ್ಗೊಳ್ಳುತ್ತಾರೆ. ಅಂಟಿಗೆ-ಪಂಟಿಗೆ ಪದಗಳಲ್ಲಿ ಅಂಟಿಗೆಯ ಕುರಿತು ಗೋಜಲುಗಳಿಲ್ಲ, 'ಅಂಟಿಸುವುದೇ ಅಂಟಿಗೆ' ಎನ್ನುವರ್ಥದಲ್ಲಿ ಆ ಪದವನ್ನು ಇಲ್ಲಿ ಪರಿಗಣಿಸುವುದು ಅವೈಜ್ಞಾನಿಕವಲ್ಲ. ಆದರೆ ಪಂಟಿಗೆಯ ಬಗೆಗೆ ಇನ್ನೂ ಗೊಂದಲವಿದೆ. ವಿದ್ವಾಂಸರು ತಮಿಳಿನ ಪಂಟಿಗೈ ಪದ ಕುರಿತು ಉಲ್ಲೇಖಿಸಿದ್ದಾರೆ. ಪಂಟಿಗೈ ಪದಕ್ಕಿರುವ ಹಬ್ಬ ಎನ್ನುವರ್ಥದಲ್ಲಿ ಅಂಟಿಗೆ-ಪಂಟಿಗೆಯನ್ನು ದೀಪಾವಳಿ ಹಬ್ಬ ಎಂಬ ಮೂಲಾರ್ಥವಿರಬಹುದು ಎಂದಿದ್ದಾರೆ. ಈ ದಿಸೆಯಲ್ಲಿ ಚರ್ಚೆಗೆ ಅವಕಾಶವಿರುವುದರಿಂದ ಮುಂದಿನ ವಿವರಣೆಯನ್ನು ನೀಡಲಾಗಿದೆ. ಪಂಟಮ್ ಎಂಬ ಪದ ತಮಿಳು ಮತ್ತು ಮಲಯಾಳದಲ್ಲಿದೆ. ಅದರರ್ಥ ದೀಪ ಎಂಬುದಾಗಿದೆ. ತುಳುವಿನಲ್ಲಿ ಇದು ಪಂಟೈ ಅದುವೇ ಕನ್ನಡದ ಪಂಟಿಗೆ. ಹಾಗಗ್ಗುವುದರಿಂದ ಪಂಟಿಗೈ ಪದದಿಂದ ಪಂಟಿಗೆಯ ನಿಷ್ಪತ್ತಿಯನ್ನು ಸಾಧಿಸಬೇಕಾಗಿಲ್ಲ. ಪಂಟಮ್, ಪಂಟಯ್ಯ ಮೂಲದಿಂದ ಅಂಟಿಗೆ-ಪಂಟಿಗೆಯ ನಿಷ್ಪತ್ತಿಯನ್ನು ಹೇಳುವುದಾದರೆ ದೀಪ ಅಂಟಿಸುವುದು,

ಜ್ಯೋತಿ ಅಂಟಿಸುವುದು ಎಂದಾಗುತ್ತದೆ. ಅಂಟಿಗೆ-ಪಂಟಿಗೆ ಆಚರಣೆ ಕೂಡ ಇದೆ ಆದದುರಿಂದ ಇಲ್ಲಿ ಹೆಚ್ಚಿನ ಗೊಂದಲವಿಲ್ಲ.

**ಪ್ರಾಚೀನತೆ:** ರನ್ನನ ಅಜಿತ ತೀರ್ಥಂಕರ ಪುರಾಣದಲ್ಲಿ ಅಂಟ ಸುಂಟಿಗೆ ಪದ ಉಲ್ಲೇಖಗೊಂಡಿದೆ. ಈ ಪದಕ್ಕೂ ಅಂಟಿಗೆ-ಪಂಟಿಗೆ ಕಲಾ ಪ್ರಕಾರಕ್ಕೂ ಇರಬಹುದಾದ ಸಂಬಂಧದ ಬಗೆಗೆ ಹಲವರು ಊಹೆ ಮಾಡಿದ್ದಾರೆ. ದೀಪಾವಳಿ ಹಬ್ಬದಲ್ಲಿ ದೀಪಾವಳಿ ಮಲೆನಾಡಿನ ಜನರಿಗೆ ದೊಡ್ಡ ಹಬ್ಬ. ಈ ಹಬ್ಬವನ್ನು ಐದು ದಿನಗಳ ಕಾಲ ಆಚರಿಸುತ್ತಾರೆ. ಪಾಡ್ಯದಿಂದ ಪ್ರಾರಂಭಿಸಿ ವರ್ಷ ತೊಡಕಿನವರೆಗೆ ಐದು ದಿನಗಳ ಕಾಲ ದೀಪವನ್ನು ತೆಗೆದುಕೊಂಡು ಸುತ್ತಮುತ್ತಲ ಗ್ರಾಮಗಳ ಪೈಕಿ ಮನೆಮನೆಗೂ ಹೋಗಿ ಅವರ ಮನೆಯ ದೀಪವನ್ನು ತಮ್ಮ ಮನೆಯ ದೀಪದಿಂದ ಹಚ್ಚುತ್ತಾರೆ. ಜನರಿಗೆ ದೀಪಾವಳಿ ಬೆಳಕಿನ ಹಬ್ಬ. ಅವರ ಪಾಲಿನ ದೊಡ್ಡ ಹಬ್ಬ. ಮೊದಲ ದಿನ ನೀರು ತುಂಬುತ್ತಾರೆ, ಮೀಯುವ ಹಂಡೆ-ಹರವಿಗಳಿಗೆ ಜೋಡಿ ಕೆಮ್ಮಣ್ಣು ಸಾರಣೆ, ಜೊತೆಗೆ ಬೂರೆಕಳವು ಆಚರಣೆ- ಅಂದರೆ ಆ ಒಂದು ರಾತ್ರಿ ಕಳ್ಳತನ ಮಾಡಲು ಅನುಮತಿ ಉಂಟು. ಅಂದು ಕದ್ದವರಿಗೆ ಶಿಕ್ಷೆಯಿಲ್ಲ. ಆದರೆ ಸಿಕ್ಕಿ ಬೀಳಬಾರದು.  ಒಂದು ಪಕ್ಷ ಸಿಕ್ಕಿಬಿದ್ದರೆ ಅಪಶಕುನದ ಸೂಚನೆ ಎಂಬ ನಂಬಿಕೆ ಇದೆ. ಒಬ್ಬರ ಮನೆಯಲ್ಲಿ ಕಣ್ಣೆಕರು ನಾಪತ್ತೆಯಾದರೆ ಮತ್ತೊಬ್ಬರ ಮನೆಯ ಮೀಯುವ ಹಂಡೆಗೆ ಸಗಣಿ ಕಲ್ಲು ಮಣ್ಣು ಬೆರಸಿ ಇಡುತ್ತಾರೆ. ಮನೆಯ ಹಿತ್ತಲಲ್ಲಿ ತರಕಾರಿ, ಹಣ್ಣು ಹೂವಗಳು ಸೂರಿಯಾಗುತ್ತದೆ. ಇವೆಲ್ಲಾವು ಬೂರೆಯ ಪರಿಣಾಮದಿಂದಾಗುತ್ತವೆ. ಹಬ್ಬದ ಎರಡನೆಯ ದಿನ ಬಲಿಪಾಡ್ಯ. ಊರಿನವರಿಗೆ ಇದು ಪಾಡ್ಯದ ದಿನ ಅಂದು ಹೊಲಗದ್ದೆಗಳ ಪೈರನ್ನು ಹೊಸದಾಗಿ ಮನೆಗೆ ತಂದು ಪೂಜೆ ಮಾಡಿ ಊರಿನ ದೇವರಿಗೆಲ್ಲಾ ತೆಗೆದುಕೊಂಡು ಹೋಗಿ ಅರ್ಪಿಸುತ್ತಾರೆ. ಇದನ್ನು ದೇವರಿಗೆ ಕದರು ಹಾಕುವುದು ಎನ್ನುತ್ತಾರೆ. ಅಂದು ಸೂರ್ಯ ಮುಳುಗಿ ಕತ್ತಲು ಆವರಿಸುತ್ತಿರವಾಗಲ್ಲೇ ಹೊಲಗದ್ದೆಗಳ ಅಂಚುಗಳಲ್ಲಿ ಕೋಲು ದೀಪಗಳು ಬೆಳಗುತ್ತವೆ. ಚಾವಡಿಯಲ್ಲಿ ಹಣತೆಗಳು ಸಾಲುಗಟ್ಟುತ್ತವೆ. ಮನೆ ಮನೆಯ ಮುಂದೆ ಇರುವ ತುಳಸಿ ಕಟ್ಟೆಯ ಗೂಡು ದೀಪ ಹಚ್ಚುತ್ತಾರೆ. ಊರಿನ ಉತ್ಸಾಹಿ ಯುವಕರು ದೇವಸ್ಥಾನದಲ್ಲೋ ಜಟ್ಟಿಗ ಬನದಲ್ಲೋ ತುಳಸಿ ಕಟ್ಟೆಯ ಮನೆಯ ಮುಂದಯೋ ಬಂದು ಸೇರುತ್ತಾರೆ. ದೇವರಿಗೆ ಭಕ್ತಿಯಿಂದ ಪೂಜೆ ಸಲ್ಲಿಸಿ ಉರಿಯುತ್ತಿರುವ ದೇವರ ನಂದಾದೀಪದಿಂದ ಜ್ಯೋತಿಗಳನ್ನು ಹಚ್ಚಿಸಿಕೊಳ್ಳುತ್ತಾರೆ. ಆಗ ಜ್ಯೋತಿ ಹಚ್ಚುವ ಪದ ಆರಂಭವಾಗುತ್ತದೆ. ತಮ್ಮ ಜ್ಯೋತಿ ಸತ್ಯದಿಂದ ಆಯಾದಿಂದ, ಒಪ್ಪದಿಂದ ಉರಿಯುವಂತೆ ಪ್ರಾರ್ಥಿಸಿಕೊಳ್ಳುತ್ತಾರೆ. ಆನಂತರ ಅವರು ಹಣತೆಗೆ ವಂದನೆಗಳನ್ನು ಸಲ್ಲಿಸುತ್ತಾರೆ.

**"ಮಣ್ಣಲಿ ಹುಟ್ಟೋಳೆ ಮಣ್ಣಲಿ ಬೆಳಯೋಳೆ**
**ಮಣ್ಣಲಿ ಕಣ್ಣಾ ಬಿಡುವೋಳೆ..ಜಗಜ್ಯೋತಿ**
**ಸತ್ಯದಿಂದುರಿಯೋ ನಮಗಾಗಿ"...**

**ದೀಪದ ದಂಡು :** ಹೀಗೆ ಒಟ್ಟಾಗಿ ಸೇರಿದ ತಂಡದವರಲ್ಲಿ ಒಬ್ಬ ಮೇಳದ ಮುಖಂಡತ್ವವನ್ನು ವಹಿಸುತ್ತಾನೆ. ಮುಮೇಳ ಮತ್ತು ಹಿಮ್ಮೇಳದಲ್ಲಿ ತಲಾ ಇಬ್ಬಿಬ್ಬರೂ ಹಾಡುಗಾರರು ಇರುತ್ತಾರೆ. ಹಾಡುಗಾರರೊಂದಿಗೆ ಜ್ಯೋತಿ ಹಿಡಿಯುವವರು ದೀವಟಿಗೆ ಓರುವವರು ಸಂಭಾವನೆಯವರು ಬೇರೆ ಬೇರೆ ಊರುಗಳ ದಾರಿ ಬಲ್ಲವರು ತರುಣರು ವಯಸ್ಸಾದವರು ಹೀಗೆ ಎಲ್ಲಾರೂ ಕೂಡಿಕೊಂಡು ಮೇಳ ಸಿದ್ಧವಾಗುತ್ತದೆ. ಈ ಮೇಳವು ಊರಿಂದ ಹೋರಡುವ ಮೊದಲು ದೀಪಾ ದೀಪೋಳ್ಗಿ ಎಂದು ಕೂಗುವುದು ವಾಡಿಕೆ. ಈ ಕೂಗು ಮೇಳ ಊರು ಬಿಡುವ ಮುನ್ಸೂಚನೆಯು ಹೌದು. ಹೀಗೆ ಹೋಗುತ್ತಿರುವಾಗ ಜ್ಯೋತಿ ಹಿಡಿದಿರುವವನು ಮೈಯಲ್ಲ ಕಣ್ಣಾಗಿ ಎಚ್ಚರದಿಂದ ಇರಬೇಕು ಏಕೆಂದರೆ ಹೊತ್ತಿಸಿಕೊಂಡ ಜ್ಯೋತಿಯು ನಂದಿ ಹೋಗಬಾರದು. ಅದಕ್ಕಾಗಿ ಅಡಕೆ ಹಾಳೆ ಅಥವಾ ಹೊಂಬಾಳೆಯನ್ನು ಅಡ್ಡಕೊಟ್ಟು ರಕ್ಷಿಸಬೇಕು. ಈ ಜ್ಯೋತಿ ದಾರಿಯಲ್ಲಿ ಅಥವಾ ಯಾರದಾದರು ಮನೆಯ ಮುಂದೆ ನಂದಿಹೋದರೆ ಅಪಶಕುನ, ಆ ಮನೆಯವರಿಗೆ ಕೇಡು ಎಂಬ ನಂಬಿಕೆ ಇದೆ. ಇದಲ್ಲದೇ ಅಂಟಿಗೆ-ಪಂಟಿಗೆ ಮೇಳದ ಎರಡು ಗುಂಪಿನ ಜ್ಯೋತಿಗಳು ಎದುರಾಗಬಾರದು ಎಂಬ ಕಟ್ಟುಪಾಡುಯಿದೆ. ಆದ್ದರಿಂದ ದಾರಿಯಲ್ಲಿ ಹೋಗುವಾಗ ದೀಪದೀಪೋಳ್ಗಿ ಎಂದು ಕೂಗುವುದರ ಮೂಲಕ ಮತ್ತೊಂದು ಮೇಳದವರಿಗೆ ಬರುವ ಸೂಚನೆಯನ್ನು ನೀಡುತ್ತಾರೆ. ಇದು ಆಯಾಯ ಊರಿಗೆ ದೀಪದ ತಂಡ ಬರುತ್ತಿರುವುದರ ಸೂಚನೆ ಕೂಡ ಆಗುತ್ತದೆ. ಅನೀರಿಕ್ಷಿತವಾಗಿ ಎರಡು ಮೇಳದವರು ಎದರು ಬರಬೇಕಾದ ಸಂದರ್ಭದಲ್ಲಿ ಒಂದು ತಂಡವು ತೊರೆಯ ಮರೆಯಲ್ಲಿದ್ದು ಮತ್ತೊಂದು ತಂಡವು ಮುಂದೆ ಹೋದ ಮೇಲೆ ಸಾಗುವುದುಂಟು ಊರು ಕಂಡೊಡನೆ ಬಹಳ ಉತ್ಸಾಹದಿಂದ,

**"ದೀಪ ಹಚ್ಚಿದ್ದು ದೂಪಾನೆ ಹಾಕಿದ್ದು**
**ದೀವಳಿಗೆ ಎಂದು ಹೊರಟ್ಟಿದ್ದು"**

ಎಂದು ಹಾಡುತ್ತಾ ಮುಂದೆ ಹೋಗುವವರು ಮನೆಯ ಅಂಗಳಕ್ಕೆ ಕಾಲು ಇಡುತ್ತಿದ್ದಾಗಲೆ ತಂಡದ ಒಂದಿಷ್ಟು ಜನರು ದೀಪಾ ದೀಪೋಳ್ಗಿ ಎನ್ನುವರು ಕೆಲವು ಪ್ರದೇಶಗಳಲ್ಲಿ ದಿಮ್ಮಿ ಸಾಲೆನ್ನಿರೊ ಎಂದು ಕೂಗಿದರೆ ಉಳಿದವರು ಒಟ್ಟಾಗಿ ದಿಮ್ಸಾಲೇ ಎಂದು ಕೂಗುತ್ತಾರೆ. (ದೀಪಾ ದೀಪೋಳ್ಗಿ ಎಂಬ ಕೂಗಿಗೆ ಜೋಳಿಗೆ ತುಂಬಾ ಹೋಳಿಗೆ ಎಂದು ಹಾರ್‍ವರಮನೆ ಹೋಳ್ಗಿ ಎಂದು ಹುಡುಗರು ಚೇಷ್ಟೆಗಾಗಿ ಕೂಗುವುದುಂಟು) ಇದು ಮೇಳದ ಆಗಮನದ ಸೂಚನೆ ಇದಕ್ಕೆ ದಿಪ್ಪಡು ಎನ್ನುವರು ದಿಪ್ಪಡು ಮುಗಿಯುತ್ತಲೆ ಪದವು ಬದಲಾಗುತ್ತದೆ. ತಂಡದವರು ಮನೆಯ ಮುಂದಿನ ತುಳಸಿ ಕಟ್ಟೆಯ ಮೇಲೆ ದೀಪವನ್ನು ಇರಿಸಿ ಕೈಮುಗಿಯುತ್ತಾರೆ. ಮನೆಯ ಬಾಗಿಲೆಗೆ ಹೋಗಿ,

**"ಬಾಗಿಲು ಬಾಗಿಲು ಚಂದ**
**ಬಾಗಿಲ ನಿಲವೆ ಚಂದ**
**ಬಾಗಿಲ ಮೇಲೇನಾ ಬರುದಾರೆ ಸುವ್ವಿ॥**

ಬಾಗಿಲ ಮೇಲೇನೆ ಬರುದಾರೆ ಸಿರಿಕಾಣ
ಕೊಟ್ಟು ಪಾಲುಣ್ಣುವ ಗಿಳಿಹಿಂಡು ಸುವ್ವಿ॥

ಕದಕ್ಕಿಂತ ಕದಾ ಚಂದ
ಈ ಮನಯ ಕದವೇ ಚಂದ
ಕದದ ಮೇಲೇನಾ ಬರುದಾರ ಸುವ್ವಿ
ಕದದ ಮೇಲೇನ ಬರುದಾರೆ ಸಾಲಾಗಿ
ಕಿವಿಯೆತ್ತಿ ನಿಂತ ಮಿಕ ಹಿಂಡು ಸುವ್ವಿ॥"

ಎನ್ನುವರು, ಅಷ್ಟರಲ್ಲಿ ಮನೆಯವರು ಎದ್ದು ಬಾಗಿಲು ತೆಗೆಯುತ್ತಾರೆ. ಈ ದೀಪಾಧಾರಿಗಳು ಮನೆಯ ಜಗುಲಿಗೆ ಹೋಗಿ ಕುಳಿತು ದೀಪವನ್ನು ಇಡುತ್ತಾರೆ. ಆ ಮನೆಯವರು ಇವರ ದೀಪದಿಂದ ತಮ್ಮ ಮನೆಯ ಜ್ಯೋತಿಯನ್ನು ಹಚ್ಚಿಕೊಂಡು ಹೋಗಿ ಬಲೀಂದ್ರನ ಕಂಬದ ಮೇಲೆ ಇಡುತ್ತಾರೆ. ಆನಂತರ ಕಲಾವಿದರು ಅನೇಕ ಕಥಾನಕ ಗೀತೆಗಳನ್ನು ಹಾಡುತ್ತಾ ಮನೆ ಮನೆಗೆ ಹೋಗಿ ಜ್ಯೋತಿಯನ್ನು ಹಚ್ಚುತ್ತಾ ಮುಂದುವರಿಯುತ್ತಾರೆ. ಅಂಟಿಗೆ-ಪಂಟಿಗೆ ಕಲಾವಿದರು ಹಾಡುವ ಹಾಡುಗಳಿಗೆ ತೀರ್ಥಹಳ್ಳಿ ಹಾಗೂ ಶಿವಮೊಗ್ಗ ಪ್ರದೇಶದಲ್ಲಿ ಅಂಟಿಗೆ-ಪಂಟಿಗೆ ಎಂದು ಕರೆದರೆ ಸಾಗರ ತಾಲೂಕಿನಲ್ಲಿ ಹಬ್ಬ ಹಾಡುವ ಪದಗಳು ಎನ್ನುತ್ತಾರೆ. ಸೊರಬ ಪ್ರದೇಶದಲ್ಲಿ ಬಲ್ಲಾಳಿ ಪದ್ಯಗಳು ಎಂದೂ ಬಿಂಗಿ ಪದ್ಯಗಳು ಎಂದು ಕರೆಯಲಾಗುತ್ತದೆ. ಹಸಲರು ಈ ಆಚರಣೆಯನ್ನು ರೂಢಿಸಿಕೊಂಡಿದ್ದಾರೆ. ಇವರು ತಮ್ಮ ಸುತ್ತ ಮುತ್ತಲಿನ ಗ್ರಾಮಗಳಿಗೆ ಹೋಗುತ್ತಾರೆ ಆದರೂ ಅವರ ಜಾತಿಗಿಂತ ಮೇಲೂ ಜಾತಿಯವರ ಮನೆಗಳಿಗೆ ಮಾತ್ರ ಹೋಗುವುದು ಪದ್ಧತಿ. ಉದಾಹರಣೆಗೆ ಹಸಲರು ಹರಿಜನರಿಗಿಂತ ಶ್ರೇಣಿಯಲ್ಲಿ ಉತ್ತಮರಾದ್ದರಿಂದ ಅವರ ಮನೆಗೆ ಹೋಗುವುದು ನಿಷೇಧ. ಆದರೆ ಹಸಲರು ತಮಗಿಂತ ಉತ್ತಮರೆಂದು ಪರಿಗಣಿಸಿರುವ ಒಕ್ಕಲಿಗರೂ, ಮಡಿವಾಳರು ಮೊದಲಾದ ಜಾತಿಗಳವರ ಮನೆಗಳಿಗೆ ಮಾತ್ರ ಹೋಗುವುದಾಗಿ ತಿಳಿಯುತ್ತದೆ. ಕಲಾವಿದರು ಕಚ್ಚೆ ಪಂಚೆ, ಜುಬ್ಬ ಅಥವಾ ಅಂಗಿ ಜೊತೆಗೆ ಕೆಲವರು ಕೋಟು ಧರಿಸಿ ಮೇಲೊಂದು ಶಲ್ಯ ಇಲ್ಲವೇ ಕಂಬಳಿಯನ್ನು ಹಾಕುತ್ತಾರೆ. ತಲೆಗೆ ಪೇಟೆ ಸುತ್ತಿರುತ್ತಾರೆ. ಹಿಮ್ಮೇಳದವರ ಕೈಯಲ್ಲಿ ಸುಮಾರು ನಾಲ್ಕು ಅಡಿ ಉದ್ದದ ದೊಣ್ಣೆಗಳು ಇರುತ್ತವೆ. ತಂಡದ ಮುಖ್ಯಸ್ಥ ಮಾತ್ರ ದೀಪವನ್ನು ಹಿಡಿದಿರುತ್ತಾನೆ. ಇದು ದೊಡ್ಡದಾದ ಹಿಡಿಕೆಯುಳ್ಳ ಕಂಚಿನ ಅಥವಾ ಮಣ್ಣಿನ ದೀಪವಾಗಿರುತ್ತದೆ. ದೀಪಕ್ಕೆ ಆಗಾಗ್ಯ ಎಣ್ಣೆ ಹಾಕುವುದಕ್ಕಾಗಿ ಒಂದು ಮಣ್ಣಿನ ಮೊಗೆಯಲ್ಲಿ ಎಣ್ಣೆಯನ್ನು ತುಂಬಿಸಿ ಅದನ್ನು ಒಬ್ಬ ಹಿಡಿದುಕೊಂಡಿರುತ್ತಾನೆ. ಈ ಕಲೆಗೆ ಧರ್ಮ ವಾದ್ಯದ ಬಳಕೆ ಇರುವುದಿಲ್ಲ. ಆಯಾಯ ಗ್ರಾಮದ ಜನಸಂಖ್ಯೆಗೆ ಅನುಗುಣವಾಗಿ ೧೦ ರಿಂದ ೫೦ ಮಂದಿ ಈ ಸಂದರ್ಭದಲ್ಲಿ ಭಾಗವಹಿಸುದುಂಟು. ಹೀಗೆ ರಾತ್ರಿಯಲ್ಲಿ ಹಾಡಿ ಬೆಳಗಾದ ಕೂಡಲೇ ತಮ್ಮ ಊರಿಗೆ ಬಂದು ಒಂದು ಕತ್ತದ ಹಗ್ಗದ ಬತ್ತಿಗೆ ದೀಪದಿಂದ ಹಂಚಿಕೊಂಡು

ದೇವರ ದೀಪದಲ್ಲಿ ಭತ್ತದ ಬತ್ತಿಯನ್ನು ಇಡುತ್ತಾರೆ. ಪುನಃ ರಾತ್ರಿ ಹೊರಡುವಾಗ ದೇವರ ದೀಪದಿಂದ ಮತ್ತೆ ದೀಪ ಹಚ್ಚಿಕೊಂಡು ಹೊರಡುತ್ತಾರೆ. ಹಿಂದೆ ಹೀಗೆ ಹೊರಟ ದಂಡು ಒಂದು ತಿಂಗಳವರಗೆ ಹಾಗೆ ಊರೂರು ಸುತ್ತಿ ಹಿಂತಿರುಗುವುದು ರೂಢಿಯಲ್ಲಿ ಇತ್ತಂತೆ. ಆದರೆ ಈಗ ಪ್ರತಿ ರಾತ್ರಿ ಸಂಚರಿಸಿ ಸಾಧ್ಯವಾದ ಮಟ್ಟಿಗೆ ಊರಿಗೆ ಬರುವ ರೂಢಿ ಇದೆ. ಕೆಲವು ಭಾಗಗಳಲ್ಲಿ ಒಂದು ವಾರವು ಆಗಬಹುದು. ದೀಪಾವಳಿ ನಂತರ ಒಂದು ತಿಂಗಳ ಒಳಗೆ ಊರಿನವರೆಲ್ಲಾ ಒಂದು ದಿನವನ್ನು ನಿಗದಿಪಡಿಸುತ್ತಾರೆ. ಆ ದಿನ ಊರಿನ ದೊಡ್ಡ ಬಯಲಿನಲ್ಲಿ ಚಪ್ಪರ ಹಾಕಿ ಗ್ರಾಮದ ಎಲ್ಲ ದೇವರಿಗೂ ದೀಪ ಹಚ್ಚಿ ಹಣ್ಣು ಕಾಯಿ ಮಾಡಿ ವಿಶೇಷವಾದ ಅಡುಗೆ ತಯಾರಿಸಿ ಊಟ ಮಾಡುತ್ತಾರೆ. ನಂತರ ಜಟ್ಟಿಗಾ ದೇವರ ಬನಕ್ಕೆ ಹೋಗಿ ದೀಪವನ್ನು ಅಲ್ಲಿಯೇ ಬಿಟ್ಟು ಬರುತ್ತಾರೆ. ಮುಂದಿನ ದೀಪಾವಳಿಗೆ ಮತ್ತೆ ಆ ದೀಪ ತರುವ ಪದ್ಧತಿಯಿದೆ.

**ಅಂಟಿಗೆ-ಪಂಟಿಗೆ ತಂಡದವರು ಅನುಸರಿಸುವ ನಿಯಮಗಳು**

ದೀಪಾವಳಿ ಹಬ್ಬದಲ್ಲಿ ಮಾತ್ರ ಈ ಕಲೆಯನ್ನು ಪ್ರದರ್ಶಿಸುತ್ತಾರೆ. ದೀಪಾವಳಿ ಪಾಡ್ಯದಿಂದ ವರ್ಷ ತೊಡಕಿನವರೆಗೆ ಈ ದೀಪವನ್ನು ಹಗಲು ರಾತ್ರಿ ಆರಿಸುವುದಿಲ್ಲ. ರಾತ್ರಿಯಲ್ಲಿ ಹಳ್ಳಿಯಿಂದ ಹಳ್ಳಿಗೆ ಹೋಗುವಾಗ ದೀಪ ನಂದಬಾರದು. ಈ ದೀಪ ಆರಿದರೆ ತಂಡದವರಿಗೆ ಮತ್ತು ಹಳ್ಳಿಯವರಿಗೆ ಕೇಡುಂಟಾಗುತ್ತದೆ ಎಂಬ ನಂಬಿಕೆ. ಈ ಕಲಾವಿದರು ಮನೆಯ ಬಾಗಿಲಿಗೆ ಹೋದಾಗ ಮನೆಯವರು ಬಾಗಿಲು ತೆರೆದು ಜ್ಯೋತಿಯನ್ನು ತೆಗೆದುಕೊಳ್ಳದಿದ್ದರೆ ಆ ಮನೆಯವರಿಗೆ ಕೇಡುಂಟಾಗುತ್ತದೆ ಎಂದು ನಂಬಿಕೆ ಇದೆ. ದೀಪ ಹಿಡಿದುಕೊಳ್ಳುವವನು ಚಪ್ಪಲಿಯನ್ನು ಹಾಕಿಕೊಳ್ಳುವಂತಿಲ್ಲ ದೀಪ ಕೈಯಲ್ಲಿ ಇರುವಾಗ ಮಲ-ಮೂತ್ರ ವಿಸರ್ಜನೆ ಮಾಡುವಂತಿಲ್ಲ. ಗ್ರಾಮಗಳಿಗೆ ಹೋದಾಗ ಸೂತಕವಿದ್ದವರ ಮನೆಗಳಿಗೆ ಹೋಗುವುದಿಲ್ಲ. ತಂಡದವರಲ್ಲಿ ಸೂತಕ, ಮುಟ್ಟು ಮೈಲಿಗೆ ಇದ್ದವರು ಭಾಗವಹಿಸುವುದಿಲ್ಲ. ಪ್ರಥಮವಾಗಿ ದೀಪ ಹಚ್ಚುವವರ ಮನೆಯಲ್ಲಿ ಸೂತಕ ಮೈಲಿಗೆಯಾದರೆ ಆ ಮನೆಯಲ್ಲಿ ಆ ವರ್ಷ ದೀಪ ಹಚ್ಚುವುದನ್ನು ನಿಲ್ಲಿಸುತ್ತಾರೆ. ಒಂದು ವರ್ಷ ನಿಲ್ಲಿಸಿದರೆ ಮೂರು ವರ್ಷಗಳವರೆಗೆ ಹಬ್ಬ ಆಡುವ ಸಂಪ್ರದಾಯವಿಲ್ಲ. ದಾರಿಯಲ್ಲಿ ಊರಿಂದ ಊರಿಗೆ ಹೋಗುತ್ತಿರುವಾಗ ಚೌಡಿಬನ, ಯಕ್ಷಿಬನ, ಭೂತಪ್ಪನ ಕಟ್ಟೆಗಳಲ್ಲಿ ದೀಪವನ್ನು ಹಚ್ಚಿಟ್ಟು ಮುಂದೆ ಸಾಗುತ್ತಾರೆ. ಈ ಕಲಾವಿದರು ದಾರಿಯಲ್ಲಿ ಹೋಗುತ್ತಿರುವಾಗ ಮತ್ತೊಂದು ತಂಡದವರು ಎದುರಾದರೆ ಕೈಯಲ್ಲಿ ಇಡಿದಿರುವ ದೀಪವನ್ನು ಅಡಿಕೆ ಹಾಳೆಯಿಂದ ಮರೆ ಮಾಡಿಕೊಂಡು ಪಕ್ಕಕ್ಕೆ ಸರಿದು ಹೋಗುತ್ತಾರೆ. ದೀಪಗಳು ಎದುರಾಗಬಾರದೆಂಬ ನಂಬಿಕೆಯಿದೆ. ಅಂಟಿಗೆ-ಪಂಟಿಗೆ ಪದಗಳು ದೀಪ ಹಚ್ಚುವುದು ಮತ್ತು ದೀಪವನ್ನು ಊರೂರಿಗರ ಒತ್ತೋಯ್ಯುವ ಈ ಸಂಪ್ರದಾಯ ಪ್ರಧಾನವಾಗಿ ಬೆಳಕು ನೀಡುವ ಕ್ರಿಯೆಗೆ ಸಂಬಂಧಿಸಿದದ್ದಾರೂ ಕಲಾವಿದರು ಹಾಡುವ ಪದಗಳು ಅಷ್ಟಕ್ಕೆ ಸೀಮಿತಗೊಂಡಿಲ್ಲ. ದಾರಿ ಸಾಗಬೇಕಾದ ಕಾರಣ ಹತ್ತಾರು ಕಥನ ಕವನಗಳು ಇವರಿಗೆ ಕರಗತವಾಗಿವೆ. ಹೀಗಾಗಿ ಇವರು ಹಾಡುವ ಪದಗಳನ್ನು ಎರಡು ರೀತಿಯಲ್ಲಿ ವಿಂಗಡಿಸಬಹುದಾಗಿದೆ. ದೀಪದ ಯಾತ್ರೆಗೆ ಸಂಬಂಧಿಸಿದ

ಪದಗಳು ಇತರೆ ಪದಗಳು ದೀಪದ ಯಾತ್ರೆಯ ವಿವಿಧ ಘಟ್ಟಗಳನ್ನು ಶಾಸ್ತ್ರೋಕ್ತವಾಗಿ ಪೂರೈಸುವ ಹಾಡಿನ ಪ್ರಕಾರಗಳೆಂದರೆ ೧. ಬಾಗಿಲು ತೆಗೆಯುವ ಹಾಡು ೨. ದೀಪ ಹಚ್ಚುವ ಹಾಡು ೩. ಬಲೀಂದ್ರನ ಹಾಡು ೪. ಗ್ರಾಮ ದೇವತೆಯ ಹಾಡು ೫. ಎಣ್ಣೆ ಎರೆಯುವ ಹಾಡು ೬. ಭಾವ ನೆಂಟರ ಹಾಡು ೭. ದೀಪ ಆರಿಸುವ ಪದ ೮. ಜಟ್ಟಿಗನ ಪದ ಇತ್ಯಾದಿ. ಎರಡನೆಯ ಪ್ರಕಾರದಲ್ಲಿ ಯಾವ ಹಾಡನ್ನು ಹಾಡಬಹುದು ಅಂತಹವುಗಳಲ್ಲಿ ಮುಖ್ಯವಾಗಿ ಗೋವಿನ ಪದ, ದ್ರೌಪತಿ ಪದ ಜೋಗುಳ ಪದ ಗಂಗೆ ಗೌರಿ ಪದ ಥರಣಮ್ಮನ ಪದ, ಬಂಜೆಪದ, ಗುಣ ಸಾಗರಿ ಪದ ಶಿವ ಯೋಗಿ ಪದ, ಕವಲೆ ಪದ, ಉತ್ತರದೇವಿ ಪದ ಇತ್ಯಾದಿ ಕಥನಗಳು ಇರುತ್ತವೆ. ಉದಾಹರಣೆಗಾಗಿ ದೀಪದ ಯಾತ್ರೆಗೆ ಸಂಬಂಧಿಸಿದ ಒಂದೆರೆಡು ಹಾಡಿನ ತುಣುಕುಗಳನ್ನು ನೋಡಬಹುದು.ಉದಾಹರಣೆಗೆ,

"ಊರಿಗೆ ಪ್ರವೇಶಿಸಿದ ಮೊದಲಲ್ಲಿ
ದಿಮ್ಮಿಸಾಲ್ಹೋಡಿರಣ್ಣ
ದಿಮ್ಮಿಸಾಲ್ಹೋಡಿರಣ್ಣೋ
ದಿಮ್ಮಿಸಾಲ್ಹೋಡಿರಣ್ಣ ಒಂದೊಂದೇ ದನಿಗೆ
ಇತ್ತಿದ ಸಲ್ಲಿಗೆ ಕಿತ್ತಿದ್ದು ಬರಲೋ
ಈ ಊರ ದೇವರಿಗೆ ಎನೇನಾ ಉಡಗರೋ
ಈ ಊರ ಜಟ್ಟಿಗಪ್ಪಗೆ ಎನೇನಾ ಉಡಗರೋ
ಊರಾ ಮಾಸ್ತ್ಯಮ್ಮಗೇ ಎನೇನಾ ಉಡಗರೋ
ಹೇರಲ್ಲಿ ಕಾಯೋ ಹೆಡಿಗಲ್ಲಿ ಹಣ್ಣೋ
ಸತ್ಯವಂತನಾದರೆ ಸಭೆ ಮುಂದೆ ಬರಲೋ
ಸಭೆಗೂ ನಮಗೂ ಸಂತೋಷತರಲೋ
ಆಚೆಯ ದಡದಾಗೆ ಯಾತರ ಬೆಳಕೋ
ಸ್ವನಾಗಾರ ಹುಡುಗಿಯ ಪಟ್ಟಿಯ ಬೆಳಕೋ
ಕಾಮಣ್ಣ ಭೀಮಣ್ಣ ಏನೋ ಮಾಡುತ್ತಿದ್ದರೋ
ಕಗ್ಗಲ್ಲ ಕಡಿದು ಹಿಟ್ಟು ಮಾಡುತ್ತಿದ್ದರೋ"

ದೀಪಳಿಗೆ ಇರುಳಿನಲ್ಲಿ ದೀಪ ಹಿಡಿದು ಬರುವ ಈ ಜನಪದ ಗಾಯಕರು ಜ್ಯೋತಿಯನ್ನು ಹಳ್ಳಿಯಿಂದ ಹಳ್ಳಿಗೆ, ಮನೆಯಿಂದ ಮನೆಗೆ ಹಚ್ಚುತ್ತಾ ಹೋಗುತ್ತಾರೆ. ಇವರ ಜೋಳಿಗೆಯಲ್ಲಿ ಅದಷ್ಟೋ ಚಿತ್ರವಿಚಿತ್ರವಾದ ಸರಕುಗಳಿರುತ್ತವೆ. ಆ ಜೋಳಿಗೆಯ ದಾರವನ್ನು ಎಳೆದರಾಯಿತು. ಬಣ್ಣ ಬಣ್ಣದ ಯಕ್ಷಲೋಕವೇ ಕಣ್ಣೆದುರು ನಲಿಯ ತೊಡಗುತ್ತದೆ. ಸಿರಿಕವಲೆ ಹಾಡು. ಉತ್ತರದೇವಿ ಹಾಡು, ಯಮದೇವಿ ಹಾಡು, ಅರ್ಜುನಸ್ವಾಮಿ ಹಾಡು, ಚಿಪ್ಪಿಗನ ಹಾಡು, ಶಿವನ ಮದುವೆ ಹಾಡು–ಒಂದೇ ಎರಡೇ, ನೂರಾರು ಕಥನಗೀತೆಗಳನ್ನು ಹಾಡುತ್ತಾರೆ. ದೀಪ ಹಿಡಿದು ರಾತ್ರಿ ಬೆಟ್ಟ,

ಗುಡ್ಡ, ಹೊಳೆ, ಹಳ್ಳ, ತಗ್ಗು ದಿಣ್ಣೆಗಳನ್ನು ಹತ್ತಿ ಇಳಿದು ಊರಿಂದ ಊರಿಗೆ ಹೋಗುವಾಗ ದೀಪ ಆರೀತೆಂದು ಹಾಳೆಯ ತಡಿಕೆಯನ್ನು ಮರೆ ಮಾಡಿಕೊಳ್ಳುತ್ತಾರೆ. ಪುಂಡಿ ಅಥವಾ ಕವಲುನಾರಿನ ದಪ್ಪ ಹುರಿಗೆ ಬೆಂಕಿ ಹಚ್ಚಿಕೊಂಡಿರುತ್ತಾರೆ. ದಾರಿಯ ಮಧ್ಯೆ ಗಾಳಿಗೆ ದೀಪ ಆರಿದರೆ ಹುರಿಯ ಬೆಂಕಿಯಿಂದ ಹಚ್ಚಿಕೊಂಡಿರುತ್ತಾರೆ. ದಾರಿಯ ಮಧ್ಯೆ ಗಾಳಿಗೆ ದೀಪ ಆರಿದರೆ ಹುರಿಯ ಬೆಂಕಿಯಿಂದ ಹಚ್ಚಿಕೊಳ್ಳುತ್ತಾರೆ. ಬೆಳಗಾದ ನಂತರ ಮನೆಗೆ ಹೋಗುವಾಗ ದೀಪದ ನೆನೆಬತ್ತಿಯನ್ನು ಹಾಲುಮರದಲ್ಲಿಟ್ಟು ಹುರಿಯಲ್ಲಿರುವ ಬೆಂಕಿಯನ್ನು ತರುತ್ತಾರೆ. ದೀಪದ ಯಜಮಾನನ ಅಡುಗೆ ಒಲೆಯ ಬೆಂಕಿಗೆ ಜೋರಿಗೆ ಬತ್ತಿಯನ್ನು ಅಗ್ನಿ ಗೊಡುತ್ತಾರೆ. ಒಲೆಯಲ್ಲಿರುವ ಅಗ್ನಿ ಮೂರು ದಿವಸ ಹಗಲು ರಾತ್ರಿ ಆರದಂತೆ ಮನೆಯವರು ನೋಡಿಕೊಳ್ಳುವರು. ಹೀಗೆ ಮೂರು ದಿವಸಗಳವರೆಗೆ ನಡೆಯುತ್ತದೆ. ನಾಲ್ಕನೇ ದಿವಸ ತಂಡದವರೆಲ್ಲ ಸೇರಿ ಪುನಃ ದೀಪ ಹಚ್ಚಿಕೊಂಡು ಹಾಡುತ್ತಾ ನೆನೆಬತ್ತಿಯನ್ನಿಡುವ ಹಾಲುಮರದ ಹತ್ತಿರ ಹೋಗಿ ಮರ ಮತ್ತು ಜ್ಯೋತಿಯನ್ನು ಪೂಜೆ ಮಾಡಿ ನೆನೆಬತ್ತಿಯನ್ನು ಮರದ ಕೊಂಬೆಗಳಿಗೆ ಇಡುವುದರ ಮೂಲಕ ಮುಕ್ತಾಯ ಮಾಡುತ್ತಾರೆ. ಹೊಸನಗರದಲ್ಲಿ ಪಾಡ್ಯದ ದಿವಸ ಗ್ರಾಮದಲ್ಲಿ ಯಾರಾದರೂ ಜನನ ಅಥವಾ ಮರಣ ಹೊಂದಿದರೆ ಸೂತಕ ಆಯಿತೆಂದು ದೀಪ ಹಚ್ಚುವುದಿಲ್ಲ. ಜಾನುವಾರುಗಳು ಕರು ಹಾಕಿದರೂ ಸೂತಕ ಆಯಿತೆಂದು ತಿಳಿಯುತ್ತಾರೆ. ಬೇರೆ ನೆರೆಯ ಗ್ರಾಮದಲ್ಲಿ ಪಾಡ್ಯದ ದಿವಸ ಜನನ ಮರಣ ಆಗಿ ಸೂತಕವಿದ್ದರೆ ಆ ಊರಿಗೆ ಹಬ್ಬ ಹಾಡಲು ಹೋಗುವುದಿಲ್ಲ. ಕೆಲವು ಕಡೆ ಊರಿನ ದೇವಸ್ಥಾನದಲ್ಲಿ ಪುರೋಹಿತರಿಂದ ಪೂಜೆ ಮಾಡಿಸಿ ಮಂಗಳಾರತಿಯಿಂದ ಇದೇ ದೀಪವನ್ನು ಹಚ್ಚಿಕೊಳ್ಳುತ್ತಾರೆ. ಹಬ್ಬ ಹಾಡಿ ಬಂದವರು ದೀಪದ ಯಜಮಾನನ ಅಡುಗೆ ಒಲೆಗೆ ಇವರ ದೀಪವನ್ನು ಅಗ್ನಿಗೊಡುತ್ತಾರೆ. ಆ ಒಲೆಯಿಂದ ಹೊರಗಡೆಯವರಿಗೆ ಬೆಂಕಿ ಕೊಡುವ ಹಾಗಿಲ್ಲ. ಮೂರು ದಿವಸ ಬೂದಿ ತೆಗೆಯುವಂತಿಲ್ಲ ಮತ್ತು ಮಾಂಸಾಹಾರ ಬೇಯಿಸುವುದಿಲ್ಲ. ಹಬ್ಬ ಹಾಡುವವರು ಕುಡಿಯುವ ಹಾಗಿಲ್ಲ. ದಾರಿಯ ಮಧ್ಯೆ ಎದುರಾಗುವ ಚೌಡಿ, ಭೂತ, ಯಕ್ಷಿ, ಜಟ್ಟಿ ಬನಗಳಿಗೆ ನೆನೆಬತ್ತಿಯನ್ನು ಇಟ್ಟು ಹೋಗುತ್ತಾರೆ. ಮೇಲ್ವರ್ಗದವರ ಮನೆಗೆ ಹೋದಾಗ ಅವರ ಹೊಸಲಿನಲ್ಲಿ ದೀಪವನ್ನಿಡುತ್ತಾರೆ. ಆ ಜ್ಯೋತಿಯಿಂದ ಅವರು ತಮ್ಮ ದೀಪವನ್ನು ಹಚ್ಚಿಕೊಳ್ಳುತ್ತಾರೆ. ಹಾಲಿ ದೇವರನ್ನು ಆರಾಧಿಸುವವರ ಮನೆಯಲ್ಲಿ 'ಸಿರಿಕವಲಿ' ಹಾಡು ಹೇಳುವುದಿಲ್ಲ. ಒಮ್ಮೆ ಹೇಳಿದರೆ ಮನೆಯ ಯಜಮಾನನ ಮೈಮೇಲೆ ಹುಲಿದೇವರು ಮೈದುಂಬುತ್ತದೆ ಎಂಬ ನಂಬಿಕೆ. ಒಮ್ಮೆ ಆದರೆ ಒಂದು ತಂಡದವರು ಇನ್ನೊಂದು ತಂಡ ಮರೆಯಾಗುವರೆಗೆ ಮರದ ಮರೆಯಲ್ಲಿ ನಿಂತುಕೊಳ್ಳುವರು. ಹಬ್ಬ ಹಾಡಲು ಹೋದವರಿಗೆ ಮನೆಯವರು ಐದು, ಹತ್ತು ರೂಪಾಯಿ, ತೆಂಗಿನ ಕಾಯಿ ಭಾಗ, ಅಕ್ಕಿ, ದೀಪಕ್ಕೆ ಎಣ್ಣೆ ಮತ್ತು ಕಡುಬು ಹೋಳಿಗೆ ಕೊಡುತ್ತಾರೆ. ತಿಂಡಿ ಪದಾರ್ಥಗಳನ್ನು ಆಯಾ ದಿನವೇ ತಿಂದು ಪೂರೈಸುವರು. ಉಳಿದ ಸಾಮಾನುಗಳನ್ನು ಸಂಗ್ರಹಿಸುವರು. ಹಬ್ಬದ ನಂತರ ಒಂದು ದಿವಸ ಸಂಗ್ರಹವಾದ ಹಣದಿಂದ ಒಣಮೀನು ಅಥವಾ ಕುರಿ ಖರೀದಿಸಿ ತಂದು ಅತಿಥಿಗಳನ್ನು ಆಹ್ವಾನಿಸಿ ಸಂಗ್ರಹವಾದ ಅಕ್ಕಿಯಿಂದ

ಕಡುಬು ಮಾಡಿ ಸಾಮೂಹಿಕ ಭೋಜನ ಮಾಡುವರು. ಮರಿಪಾಡ್ಯದ ದಿವಸ ಇಳಿಸಿದ ದೇವರುಗಳಿಗೆ ಮತ್ತೊಮ್ಮೆ ಪೂಜೆ ಸಲ್ಲಿಸಿ, ತೆಗೆದು ಹಾಳೆಯಲ್ಲಿ ಕಟ್ಟಿ ಮನೆಯ ಕೋಳುಕಂಬಕ್ಕೆ ಕಟ್ಟುವರು. ಪುನಃ ಮುಂದಿನ ದೀಪಾವಳಿಗೆ ದೇವರನ್ನು ಇಳಿಸಿ ಪೂಜಿಸುವುದು. ದೇವರ ಬುಡದಲ್ಲಿದ್ದ ಅಕ್ಕಿಯನ್ನು ತೆಗೆದು ಆ ಅಕ್ಕಿಗೆ ಮತ್ತಷ್ಟು ಸೇರಿಸಿ ಬೀಸಿ ಹಿಟ್ಟು ಮಾಡಿ ವರ್ಷತೊಡಕಿನ ದಿವಸ ರೊಟ್ಟಿ ಮಾಡುವರು. ಈ ರೊಟ್ಟಿಗೆ 'ಎಡೆ ಅಕ್ಕಿ ರೊಟ್ಟಿ ಎನ್ನುವರು. ಸಾಗರದ ಭಾಗದಲ್ಲಿ ವರ್ಷತೊಡಕಿನ ದಿವಸ ಮನೆ ಬಿಟ್ಟು ದೂರದ ಸ್ಥಳಗಳಿಗೆ ಹೋಗುವುದಿಲ್ಲ. ಪಾಡ್ಯದ ದಿವಸ ಹಣ್ಣು ಕಾಯಿ ಒಡೆಯದೇ ಉಳಿದ ಗ್ರಾಮಗಳ ದೇವರುಗಳಿಗೆ ಪೂಜೆ ಸಲ್ಲಿಸುವರು. ರಾತ್ರಿ ಕೋಳಿಮಾಂಸದ ಸಾರು ಮತ್ತು ಕಾಯಿಗರಿಗೆ ಕಜ್ಜಾಯ, ಎಡೆ ಅಕ್ಕಿ ರೊಟ್ಟಿ ಮಾಡಿ ಊಟ ಮಾಡುವರು.

ಹಸಲರು ಹಿಂದೂಗಳು ಆಚರಿಸುವ ಯುಗಾದಿ, ಗೌರಿ ಹಬ್ಬ, ನಾಗರಪಂಚಮಿ, ಶಿವರಾತ್ರಿ ಹಬ್ಬಗಳನ್ನು ವಿಶೇಷವಾಗಿ ಆಚರಿಸುವುದಿಲ್ಲ. ಕರ್ನಾಟಕ ಜಾನಪದ ಸಂಸ್ಕೃತಿ ವಿಶ್ವಕೋಶ ಸಂಪುಟ ೧(ಸಂ.ಕೃಷ್ಣಮೂರ್ತಿ ಹನೂರು, ೧೯೯೧)ರಲ್ಲಿ ದೀಪಾವಳಿ ಈ ಜನಾಂಗದ ವಿಶೇಷ ಹಬ್ಬ. ಆ ದಿನ ಬಲೀಂದ್ರ ನನ್ನು ಪೂಜೆಸುತ್ತಾರೆ. ದೀಪಾವಳಿಯ ರಾತ್ರಿ ದೀಪಗಳನ್ನು ಹಚ್ಚುತ್ತಾರೆ. ಹಾಗೂ ಜಾನಪದ ಗೀತೆಗಳನ್ನು ಹಾಡುತ್ತಾರೆ. ಈ ಪದ್ಧತಿ ಮೂರು ದಿನಗಳು ಇರುತ್ತದೆ. ಈ ಹಾಡಿಗೆ ಅವು ಬಿಂಗಿಯ ಹಾಡು ಎನ್ನುತ್ತಾರೆ. ಗೌರಿಹಬ್ಬ ಹಾಗೂ ನವರಾತ್ರಿ ಹಬ್ಬವನ್ನು ಆಚರಿಸುತ್ತಾರೆ. ಈ ಜನಾಂಗದ ಮುಖ್ಯದೇವರು ಶಿವನಾದರೂ ರಾಮನನ್ನು ಕೂಡ ಪೂಜಿಸುತ್ತಾರೆ. ಅದು ಅವರ ಪರಿಸರದ ಸಾಂಸ್ಕೃತಿಕ ಪ್ರಭಾವದಿಂದಾಗಿರಬಹುದು. ಅದಲ್ಲದೆ ಅವರಿಗೆ ಜಟ್ಟಿಗ, ಭೂತ, ಗಾಮ, ಗಾರ್ಯಮ್ಮ ಮುಂತಾದ ದೇವರುಗಳು ಇದ್ದಾರೆ. ಇವುಗಳಿಗೆ ಅವರು ಪ್ರಾಣಿಗಳನ್ನು ಬಲಿ ಕೊಡುತ್ತಾರೆ ಎಂಬುದನ್ನು ಗಮನಿಸಬೇಕಾದ ಅಂಶವಾಗಿದೆ.

**೪.೯. ಹಸಲರು ಮತ್ತು ತುಳಸಿ ಪೂಜೆ**

ದಿನಾಂಕ : ೧೮.೧೧.೨೦೧೮ ರಂದು ಭಾನುವಾರ ಕರ್ನಾಟಕದಾದ್ಯಂತ ತುಳಸಿ ಪೂಜೆ ಹಬ್ಬವನ್ನು ಸಡಗರ ಸಂಭ್ರಮದಿಂದ ಆಚರಿಸಲಾಯಿತು. ಹಾಗೆಯೇ ಶಿವಮೊಗ್ಗ ಜಿಲ್ಲೆಯಲ್ಲಿ ನೆಲೆಸಿರುವ ಹಸಲರು ತುಳಸಿ ಪೂಜೆಯನ್ನು ಸಡಗರ ಸಂಭ್ರಮದಿಂದ ತಮ್ಮದೇ ಆದ ಹಬ್ಬ ಎನ್ನುವ ಹಿನ್ನೆಲೆಯಲ್ಲಿ ಆಚರಿಸಿದರು. ತುಳಸಿ ಹಬ್ಬ ಬರುವುದು ಕಾರ್ತಿಕ ಮಾಸದ ಶುಕ್ಲ ಪಕ್ಷದ ದ್ವಾದಶಿ ದಿನ. ಅದು ಶ್ರೀ ಹರಿಗೂ ಹಾಗೂ ತುಳಸಿ ದೇವಿಗೂ ವಿವಾಹವಾಹಿತೆಂದು ಪುರಾಣದಿಂದ ತಿಳಿದು ಬರುತ್ತದೆ. ಶ್ರೀ ಹರಿಗೆ ತುಳಸಿ ಬಲು ಪ್ರಿಯ. ಯಾವ ಪೂಜೆ ಮಾಡಬೇಕಾದರೂ ತುಳಸಿ ಬೇಕೆ ಬೇಕು. ಶುಭ ಕಾರ್ಯಕ್ಕೂ, ಅಶುಭ ಕಾರ್ಯಕ್ಕೂ ತುಳಸಿ ಇರಲೇ ಬೇಕು. ತುಳಸಿ ಇಲ್ಲದೇ ಮಾಡಿದ ಪೂಜೆಯಿಂದ ಪೂರ್ಣ ಫಲ ಸಿಗುವುದಿಲ್ಲ. ತುಳಸಿ ಗಿಡದ ದರ್ಶನ ಹಾಗೂ ಸ್ಪರ್ಶದಿಂದಲೇ ಪಾಪಗಳು ಕಳೆಯುತ್ತವೆ. ತುಳಸಿ ಗಿಡಕ್ಕೆ ಪ್ರತಿದಿನ ನೀರು ಹಾಕುವುದರಿಂದ ರಾಗ ದ್ವೇಷಗಳು ದೂರವಾಗುತ್ತವೆ. ಶ್ರೀಮನ್ನಾ ನಾರಾಯಣನಿಗೆ ಒಂದೆಸಳು ತುಳಸಿ ಸರ್ಮಪಿಸಿದರೆ ಅದರಿಂದಲೇ

ಸಂತೋಷಗೊಳ್ಳುತ್ತಾನೆ. ತುಳಸಿಯಲ್ಲಿ ಪ್ರಮುಖವಾಗಿ ೩ ಬಗೆ ಕೃಷ್ಣ ತುಳಸಿ, ಶ್ರೀ ತುಳಸಿ, ಹಾಗೂ ಕಾಡು ತುಳಸಿ. ಶ್ರೀ ತುಳಸಿಗೆ ಸುರನಾ, ಬಹುಮಂಜರಿ, ದೇವದುಂಧುಭಿ, ಭಾರತೀ ಹೀಗೆ ಹಲವಾರು ಹೆಸರುಗಳಿವೆ.

**ತುಳಸಿಯ ಪೌರಣಿಕ ಹಿನ್ನೆಲೆ**

ಸಮುದ್ರ ಮಂಥನದ ಸಮಯದಲ್ಲಿ ಬಂದಂತಹ ಅಮೃತ ಕಲಶವನ್ನು ಮಹಾವಿಷ್ಣು ಪಡೆದುಕೊಳ್ಳುತ್ತಾನೆ. ಆ ಸಮಯದಲ್ಲಿ ಆತನ ಕಣ್ಣಿನಿಂದ ಆನಂದಭಾಷ್ಪ ಉಕ್ಕಿ ಹರಿಯುತ್ತದೆ. ಇದರ ಒಂದೊಂದು ಹನಿ ಕಲಶದಲ್ಲಿ ಬಿದ್ದಾಗ ಅದು ತುಳಸಿ ಗಿಡವಾಯಿತು ಎಂದು ಶ್ರೀ ವಿಷ್ಣು ಪುರಾಣದಲ್ಲಿ ಹೇಳಲಾಗಿದೆ. ಶಿವ ಬಿಲ್ವಪತ್ರೆ ಪ್ರಿಯನಾದರೆ, ಶ್ರೀ ವಿಷ್ಣು ತುಳಸಿ ಪ್ರಿಯ. ತುಳಸಿಯಲ್ಲಿ ಜೀವಾಣುಶಕ ಶಕ್ತಿ ಇರುವುದರಿಂದ ವಿಷಮ ಶೀತ ಜ್ವರವನ್ನು ನಿವಾರಿಸುತ್ತದೆ. ತುಳಸಿಗಿಡ ಇರುವ ಜಾಗದಲ್ಲಿ ಸೊಳ್ಳೆಗಳ ಕಾಟ ಇರುವುದಿಲ್ಲ. ಮುಖ್ಯವಾಗಿ ವಾಸ್ತು ದೋಷ ನಿವಾರಣೆಯಾಗುವುದು. ತುಳಸಿ ಕಾಂಡದಿಂದ ಮಣಿಯನ್ನು ಮಾಡಿ ಅದನ್ನು ಜಪಕ್ಕೆ ಉಪಯೋಗಿಸಬಹುದು. ತುಳಸಿ ಕಸಾಯದಿಂದ ಶೀತ, ಕೆಮ್ಮು ದೂರವಾಗುವುದು. ಚರ್ಮ ರೋಗಕ್ಕೆ ತುಳಸಿ ರಸವನ್ನು ಲೇಪನ ಮಾಡುವುದರಿಂದ ವಾಸಿಯಾಗುವುದು.

**ತುಳಸಿ ಕಲ್ಯಾಣ**

ಉತ್ಥಾನ ದ್ವಾದಶಿಯಂದು ತುಳಸಿ ವೃಂದಾವನಕ್ಕೆ ವಿಶೇಷ ಅಲಂಕಾರ, ಧೂಪ ದೀಪ ನೈವೇದ್ಯಗಳಿಂದ ಪೂಜಿಸಬೇಕು. ನೆಲ್ಲಿಟೊಂಗೆಯನ್ನು ಕಟ್ಟಿ ವೈಭವದಿಂದ ಪೂಜಿಸಬೇಕು. ನೆಲ್ಲಿಕಾಯಿ ದೀಪದಿಂದ ಆರತಿ ಬೆಳಗಬೇಕು. ವಂದೇ ವಂದ್ಯಂ ತುಳಸಿ ದೇವ್ಯಂ ಪುಣಾಮ್ಯಹಂ ಎಂದು ಐದು ಪ್ರದಕ್ಷಿಣೆ, ನಮಸ್ಕಾರ ಮಾಡಬೇಕು. ಕೊನೆಯಲ್ಲಿ ಮುತ್ತೈದೆಯರಿಗೆ ಅರಿಶಿಣ–ಕುಂಕುಮ ನೀಡಬೇಕು. ಉತ್ಥಾನ ದ್ವಾದಶಿಯನ್ನು ಕಿರುದೀಪಾವಳಿ ಎನ್ನುತ್ತಾರೆ. ಅಂದು ಶ್ರೀಹರಿ–ತುಳಸಿಗೆ ವಿವಾಹ ಆದ ಸಂತೋಷಕ್ಕೆ ಪಟಾಕಿ ಸಿಡಿಸುತ್ತಾರೆ.

**ಗಣಪತಿಗೆ ತುಳಸಿ ಪೂಜೆ**

ಒಮ್ಮೆ ಗಣಪತಿಯು ಧ್ಯಾನದಲ್ಲಿದ್ದಾಗ ತುಳಸಿ ದೇವಿಯು ಗಣಪತಿಯ ಧ್ಯಾನಭಂಗ ಮಾಡಿದಳು. ಆಗ ಗಣಪತಿಯು ನನ್ನ ಪೂಜೆಗೆ ನಿನ್ನನ್ನು ಉಪಯೋಗಿಸಬಾರದು ಎಂದು ಶಾಪ ನೀಡಿದನಂತೆ. ಈ ಕಾರಣಕ್ಕಾಗಿ ಗಣಪತಿಗೆ ತುಳಸಿಯನ್ನು ಅರ್ಪಿಸುವಂತಿಲ್ಲ. ಸಾಲಿಗ್ರಾಮದಲ್ಲಿ ವಿಷ್ಣು ಸಾನಿಧ್ಯ ಇರುವುದರಿಂದ ತುಳಸಿಯನ್ನು ಏರಿಸಬೇಕು. ಕೆಲವು ಸಾಲಿ ಗ್ರಾಮಗಳು ತುಳಸಿಯನ್ನು ಭಕ್ಷಿಸುತ್ತವೆ. ಪೂಜೆ ಮಾಡಿ ತುಳಸಿಯನ್ನು ಸಾಲಿ ಗ್ರಾಮದ ಮೇಲಿಟ್ಟರೆ ಮಾರನೆ ದಿನ ತುಳಸಿ ಮಾಯವಾಗಿರುತ್ತದೆ. ಈ ರೀತಿಯ ತುಳಸಿಯ ಮಹತ್ವದ ಬಗ್ಗೆ ಪುರಾಣಗಳು ಹೇಳುವ ಸತ್ಯ ಹಸಲರು ಬುಡಕಟ್ಟಿನಲ್ಲಿ ಮನೆ ಮಾಡಿದೆ.

## ೪.೧೦. ಜೀವನಚಕ್ರ

ಗರ್ಭಧಾರಣೆ ತಿಂಗಳ ಮುಟ್ಟು ನಿಲ್ಲುವುಯದರ ಆಧಾರದ ಮೇಲೆ ನಿರ್ಧರಿಸಲಾಗುವುದು. ಚೊಚ್ಚಲು ಬಸಿರಿಗೆ ಹೆಚ್ಚು ಗಮನ ಕೊಡಲಾಗುವುದು. ಏಳನೇ ತಿಂಗಳಲ್ಲಿ ಬಸುರು ಬಯಕೆಯನ್ನು ಪೂರೈಸಲಾಗುವುದು. ಒಂಭತ್ತನೇ ತಿಂಗಳಲ್ಲಿ ಗರ್ಭಿಣಿಯನ್ನು ಹೆರಿಗೆಗಾಗಿ ತವರುಮನೆಗೆ ಕರೆದುಕೊಂಡು ಹೋಗುತ್ತಾರೆ. ನಂತರದ ಹೆರಿಗೆಗಳು ಗಂಡನ ಮನೆಯಲ್ಲೇ ಆಗಬಹುದು. ಗರ್ಭಿಣಿ ಹೆಂಗಸು ಎಲ್ಲಾ ಕೆಲಸ ಮಾಡಬಹುದು. ತುಂಬು ಬಸಿರಿನಲ್ಲಿ ಹಗುರವಾದ ಕೆಲಸಗಳನ್ನು ಮಾಡುವಳು. ಆದರೆ ಗರ್ಭಿಣಿ ಮಹಿಳೆಗೆ ನಂಜಿನ ಪದಾರ್ಥಗಳಾದ ಬದನೆಕಾಯಿ, ಹಲಸಿನಕಾಯಿ, ಕಳಲೆ, ಏಡಿ, ಚೇಳು ಮತ್ತು ಮುರುಗೋಡು ಎಂಬ ಜಾತಿಯ ಮೀನು, ಹಂದಿಮಾಂಸ ತಿನ್ನಲು ಕೊಡುವುದಿಲ್ಲ. ಮನೆಯ ಮೂಲೆಯಲ್ಲಿ ಕಂಬಳಿ ಪರದೆ ಕಟ್ಟಿ ಹೆರಿಗೆ ಕೋಣೆ ಮಾಡಲಾಗುವುದು. ಹೆರಿಗೆ ನೋವು ಪ್ರಾರಂಭವಾದ ಕೂಡಲೇ ಕುಟುಂಬದ ಹಿರಿಯಳೊಬ್ಬಳು ಅಥವಾ ಸಮುದಾಯದ ಹಿರಿಯ ಹೆಂಗಸು ಬಂದು ಹೆರಿಗೆ ಮಾಡಿಸುತ್ತಾಳೆ. ಇವಳನ್ನು ಸೂಲಗಿತ್ತಿ ಅಥವಾ 'ಬೆಚ್ಚಗಿತ್ತಿ' ಎನ್ನುವರು. ಇವಳು ಹೆರಿಗೆ ಮಾಡಿಸಿ ಮಗುವಿನ ಹೊಕ್ಕಳಬಳ್ಳಿಯನ್ನು ಕುಯ್ದು ಬಾಣಂತಿಯ ಹೆರಿಗೆ 'ಕಸ'ವನ್ನು ಒಂದು ಮಡಕೆಗೆ ತುಂಬಿ ಕುಟುಂಬದ ಹಿರಿಯ ಹೆಂಗಸು ಮತ್ತು ಬೆಚ್ಚಗಿತ್ತಿ ಸೇರಿ ಮನೆಯ ಹಿತ್ತಲಲ್ಲಿ ಗುಂಡಿ ತೆಗೆದು ಹುಗಿಯುವರು. ಸೂಲಗಿತ್ತಿ ಬಾಣಂತಿ ಮಗುವಿಗೆ ಸ್ನಾನ ಮಾಡಿಸಿ, ತಾನೂ ಸ್ನಾನ ಮಾಡಿ ಬಾಣಂತಿಯ ಒಂದು ಒಳ್ಳೆಯ ಸೀರೆಯನ್ನು ಉಟ್ಟು ಹೆರಿಗೆ ಮಾಡಿಸಿ ಕೊಳೆಯಾದ ತನ್ನ ಸೀರೆಯನ್ನು ಅವರ ಮನೆಯಲ್ಲಿಯೇ ಬಿಟ್ಟು ಹೋಗುವಳು. ಗಂಡುಮಗುವಿಗೆ ಹೆಚ್ಚು ಪ್ರಾಶಸ್ತ್ಯ. ಹಾಗಂತ ಹೆಣ್ಣು ಮಗುವನ್ನು ತಿರಸ್ಕರಿಸುವುದಿಲ್ಲ. ಇತ್ತೀಚೆಗೆ ಒಂದು, ಎರಡು ಮಕ್ಕಳಿಗೆ ಕುಟುಂಬ ಯೋಜನೆ ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳುವರು. ಹೆಚ್ಚಾಗಿ ಮಹಿಳೆಯರೇ. ಗಂಡಸರು ಅಡಿಕೆಮರ ಹತ್ತಿ ಕಠಿಣವಾದ ಕೆಲಸ ಮಾಡುವುದರಿಂದ ಶಸ್ತ್ರಚಿಕಿತ್ಸೆ ಅಪಾಯವಾದೀತೆಂದು ಮಾಡಿಕೊಳ್ಳುವುದಿಲ್ಲ. ಬಂಜೆತನ ದೇವರ ಶಾಪವೆಂದು ನಂಬಿದ್ದಾರೆ. ಹಸಲರು ಜನನವಾದ ಮೂರು, ಏಳು ಮತ್ತು ಹನ್ನೊಂದನೇ ದಿವಸ ಹೀಗೆ ಮೂರು ಬಾರಿ ಸೂತಕ ಕಳೆದುಕೊಳ್ಳುತ್ತಾರೆ. ಸೂತಕದ ದಿವಸ ಮನೆಯನ್ನೆಲ್ಲಾ ಸಾರಿಸಿ, ಕುಟುಂಬದವರು ಸ್ನಾನ ಮಾಡುತ್ತಾರೆ. ನಂತರ ಬಾಣಂತಿಗೆ ಸ್ನಾನ ಮಾಡಿಸುತ್ತಾರೆ. ಮನೆ ತುಂಬಾ ಪಂಚಗವ್ಯ ಹಾಕಿ ಶುದ್ಧ ಮಾಡುತ್ತಾರೆ. ಮಗುವಿನ ತೊಟ್ಟಿಲಿಗೆ ಪೂಜೆ ಮಾಡಿ ತೆಂಗಿಕಾಯಿ ಒಡೆದು ಮಗುವನ್ನು ತೊಟ್ಟಲಿಗೆ ಹಾಕುತ್ತಾರೆ. ಈ ದಿವಸ ಬೆಚ್ಚಗಿತ್ತಿಯನ್ನು ಕರೆಸುತ್ತಾರೆ. ಮಗವುವನ್ನು ತೊಟ್ಟಿಲಿಗೆ ಹಾಕಿದ ನಂತರ ಇವಳಿಗೆ ಮಡಿಲು ತುಂಬಿ ರವಿಕೆ ಖಣ, ಐದು, ಹತ್ತು ರೂಪಾಯಿ ಕೊಟ್ಟು ಗೌರವಿಸಿ ಕಳುಹಿಸುವರು. ಹೆರಿಗೆ ದಿವಸ ಉಟ್ಟುಹೋದ ಸೀರೆಯನ್ನು ಕೊಟ್ಟು ತಾನು ಬಿಟ್ಟು ಹೋದ ಸೀರೆ ಉಟ್ಟು ಹೋಗುತ್ತಾಳೆ. ಬಾಣಂತಿ ಹನ್ನೊಂದನೇ ದಿವಸ ಸೂತಕ ಕಳೆದರೂ, ವಾಸದ ಬಾಗಿಲು ದಾಟಿ ಒಳಬರುವ

ಹಾಗಿಲ್ಲ. ಪುನಃ ಹದಿನಾರನೇ ದಿವಸ ಬಾಣಂತಿ ಸ್ನಾನ ಮಾಡಿ ಶುದ್ಧಳಾದ ನಂತರ ಒಳಗಡೆ ಪ್ರವೇಶ ಮಾಡಬಹುದು. ಮಗುವಿಗೆ ಹನ್ನೊಂದನೆ ದಿವಸಕ್ಕೆ ಹೆಸರಿಡುತ್ತಾರೆ. ಗಂಡುಮಕ್ಕಳಾದರೆ ಬೀರ, ಗಣಪ, ದ್ಯವ, ಪುಟ್ಟ, ತಿಮ್ಮ, ಚೌಡ, ಜೆಟ್ಟ, ಕೂರ, ಕೊಲ್ಲೂರ ಎಂದೂ, ಹೆಣ್ಣುಮಕ್ಕಳಾದರೆ ಚೌಡಿ, ಕೊಲ್ಲೂರಿ, ದೇವಿ, ಜೆಟ್ಟ, ಕೂರ, ಕೊಲ್ಲೂರ ಎಂದೂ, ಹೆಸರಿಡುತ್ತಾರೆ. ಗಂಡುಮಕ್ಕಳಲ್ಲಿ ಹಿರಿಯವನಿಗೆ ಅಜ್ಜನ ಹೆಸರನ್ನು, ಹೆಣ್ಣುಮಕ್ಕಳಲ್ಲಿ ಹಿರಿಯವಳಿಗೆ ಅಜ್ಜಿಯ ಹೆಸರನ್ನು ಇಡುವ ಪದ್ಧತಿಯಿದೆ. ಈಗ ಆಧುನಿಕತೆಯ ಪ್ರಭಾವದಿಂದ ಗಂಡುಮಕ್ಕಳಿಗೆ ಪ್ರಶಾಂತ, ಪ್ರಜ್ವಲ, ಪ್ರವೀಣ, ದಿನೇಶ ಎಂದೂ, ಹೆಣ್ಣುಮಕ್ಕಳಿಗೆ ಉಮಾ, ಉಷಾ, ನಾಗರನ್ನ, ಕಲಾವತಿ, ಪಾರ್ವತಿ ಎಂದೂ ಹೆಸರಿಡುವರು. ಹಸಲರಲ್ಲಿ ಹೆಸರುಗಳಲ್ಲಿ ವೈವಿಧ್ಯತೆಯಿದೆ. ಕಮ್ಮಾರಗೋಡು ಬೆಟ್ಟದ ಮನೆ, ಹೊಯ್ಸಳದಲ್ಲಿ ಕೊಡಿಯ, ಗುರುವ, ಮೊಡೆಂಕಿಲ, ಕೊರಗ, ಮೈಲ, ಸಿಂಕಾರ, ಹೆಂಗಸರಿಗೆ ಸೀತು, ಲಕ್ಷ್ಮಿ, ಕರುಪು, ಎಂಕು, ಮೇಚು ಇತ್ಯಾದಿ; ಸೊರಬದಲ್ಲಿ ಮಲ್ಲಪ್ಪ, ಶಿವಪ್ಪ, ಈರಪ್ಪ, ಬಸಪ್ಪ, ಸಿದ್ದಪ್ಪ, ಹನುಮಂತ, ಬೆಟ್ಟಪ್ಪ, ಗುರ್ಗಪ್ಪ, ರೇವಪ್ಪ, ಮರಿಯಪ್ಪ ಹೆಂಗಸರಲ್ಲಿ ಸೀತವ್ವ, ಗುತ್ಯವ್ವ, ಮಹಾದೇವಿ, ಚೌಡವ್ವ ಬಂಗಾರಮ್ಮ, ಈರಮ್ಮ, ಪಕೀರವ್ವ ಸಾಮಾನ್ಯವಾಗಿದೆ. ಹಸಲರು ಜನನವಾದ ಹನ್ನೊಂದನೇ ದಿವಸದ ಸೂತಕ ಆಗುವವರೆಗೆ ಮಗುವನ್ನು ನೆಲದ ಮೇಲೆ ಅಥವಾ ಪಟ್ಟೆಗೆ ಮುಚ್ಚಳದಲ್ಲಿ ಮಲಗಿಸುವರು. ನಂತರ ತೊಟ್ಟಿಲಲ್ಲಿ ಮಲಗಿಸುವರು. ಇವರು ಉಪಯೋಗಿಸುವ ತೊಟ್ಟಿಲುಗಳಲ್ಲಿ ಎರಡು ವಿಧ. ಹೂವು ತೊಟ್ಟಿಲು ಮತ್ತು ಮಂಕಟ ತೊಟ್ಟಿಲು. ಆಯಾಯ ಕುಟುಂಬದ ಪದ್ಧತಿ ಪ್ರಕಾರ ತೊಟ್ಟಿಲವನ್ನು ಬಳಸುತ್ತಾರೆ. ಕೆಲವರು ಅಡಿಕೆ ಹಾಳೆಗಳನ್ನು ಸೇರಿಸಿ ತಯಾರಿಸಿದ ತೊಟ್ಟಿಲಲ್ಲಿ ಮಲಗಿಸುವ ಪದ್ಧತಿಯೂ ಉಂಟು. ಮಗು ಜನನವಾದ ಎರಡು ಅಥವಾ ಮೂರನೇ ದಿವಸದಿಂದ ಮೊಲೆಹಾಲು ಕುಡಿಸುವರು. ಹನ್ನೊಂದನೇ ದಿವಸದಿಂದ ಪ್ರತಿದಿವಸ ಮಗುವಿಗೆ ಹರಳೆಣ್ಣೆ ಅಥವಾ ಕೊಬ್ಬರಿ ಎಣ್ಣೆ ಹಚ್ಚುವರು. ಮೂರು ದಿನಗಳಿಗೊಮ್ಮೆ ಬಿಸಿನೀರಿನಿಂದ ಸ್ನಾನ ಮಾಡಿಸಿ ಮಗುವಿಗೆ ಹೊಟ್ಟೆ ಹುಳು, ಕಫ, ಥಂಡಿ ಆಗದಿರಲೆಂದು ಒಂದು ಮೆಣಸಿನಕಾಯಿ ಪುಡಿ, ಓಂಪುಡಿ, ಒಣಶುಂಟಿ, ಬಜೆ, ಜ್ಯೇಷ್ಠಮಧು, ಜಾಯಿಕಾಯಿ, ತೇದು ನೀರಿನಲ್ಲಿ ಸೇರಿಸಿ 'ಒಳಲೆ'ಯಲ್ಲಿ ಕುಡಿಸುವರು. ಇವುಗಳ ಮಿಶ್ರಣಕ್ಕೆ 'ಖಾರಾ' ಎನ್ನುವರು. ಪ್ರತಿ ತಿಂಗಳು ಮೆಣಸಿನಕಾಳಿನ ಪ್ರಮಾಣವನ್ನು ಹೆಚ್ಚು ಮಾಡುವರು. ಮಗು ಬೆಳೆದ ಹಾಗೆ ಮೂರು ದಿವಸಗಳಿಗೆ ಬದಲು ಐದು ಅಥವಾ ವಾರಕ್ಕೊಮ್ಮೆ ಖಾರಾ ಹಾಕುವರು. ಮಗುವಿಗೆ ಆರು ತಿಂಗಳು ತುಂಬಿದ ಮೇಲೆ ಊಟ ಹಾಕುವರು. ಬಿಸಿ ಅನ್ನವನ್ನು ಚೆನ್ನಾಗಿ ಮಿಲಿದು ಹಾಲು ಅಥವಾ ಗಂಜಿಯನ್ನು ಸೇರಿಸಿ ಊಟ ಮಾಡಿಸುವರು. ಬಾಣಂತಿಗೆ ಹೆರಿಗೆ ಆದ ದಿವಸದಿಂದ ಒಂದು ತಿಂಗಳವರೆಗೆ ದಿನಕ್ಕೆ ಒಂದೇ ಊಟ. ಬಿಸಿ ಅನ್ನಕ್ಕೆ ಮೆಣಸಿನಕಾಳುಪುಡಿ, ಕೊಬ್ರಿಎಣ್ಣೆ ಅಥವಾ ತುಪ್ಪವನ್ನು ಸೇರಿಸಿ ಕೊಡುವರು. ಹನ್ನೊಂದನೇ ದಿವಸದಿಂದ ಕರನಂಬ್ರದ ಊಟ.ಮೆಣಸಿನ ಕಾಳುಪುಡಿ, ಕೊಬ್ರಿ , ವಾಟೆಹುಳಿ, ಬೆಳ್ಳಲ್ಲೀ, ದನಿಯಾಗಳನ್ನು ಹುರಿದು ಕಲ್ಲಿನಲ್ಲಿ ಅರೆದು ತಯಾರಿಸಿದ ಸಾರಿಗೆ ಕಾರನಾಂಬ್ರ ಎನ್ನುವರು. ಇದನ್ನು ಅನ್ನಕ್ಕೆ

ಹನಿಸಿಕೊಂಡು ಒಣಮೀನು ನೆಂಚಿಕೊಂಡು ಊಟ ಮಾಡುವರು. ಮೂರು ತಿಂಗಳ ನಂತರ ಸಾರು ಅನ್ನನ ಊಟ ಮಾಡಬಹುದು. ಮೂರು ಅಥವಾ ನಾಲ್ಕು ತಿಂಗಳು ತುಂಬಿದ ನಂತರ ಗಂಡನ ಮನೆಗೆ ಕಳುಹಿಸುವರು. ಕೆಲವರು ಎರಡು ತಿಂಗಳು ತುಂಬಿದ ಕೂಡಲೇ ಗಂಡನ ಮನೆಗೆ ಹೋಗುವರು. ಪರಿಶಿಷ್ಟ ಬುಡಕಟ್ಟು ಜನಾಂಗೀಯ ಮಾಹಿತಿ ೧೯೬೧ರಲ್ಲಿ ಹಸಲರ ಜನಾಂಗದಲ್ಲಿ 'ಜನನ'ವನ್ನು ಕುರಿತು ವಿವರವಾದ ವಿವರಣೆ ನೀಡಿದ್ದಾರೆ. ಗರ್ಭಿಣಿ ಹೆಂಗಸು ಎಲ್ಲಾ ಕೆಲಸ ಮಾಡಬಹುದು. ತುಂಬು ಬಸುರಿನಲ್ಲಿ ಹಗುರವಾದ ಕೆಲಸಗಳನ್ನು ಮಾಡಬಹುದು. ಆದರೆ ಗರ್ಭಿಣಿ ಹಸಿ ಹುಣಸೇಕಾಯಿ, ಕಳಲೆ, ಪಪ್ಪಾಯಿ, ಬದನೆಕಾಯಿ, ಹಲಸಿನಹಣ್ಣು ತಿನ್ನುವ ಹಾಗಿಲ್ಲ. ಕೆಲವು ಕಡೆ ಐದು ದಿನ ಸೂತಕವಿದ್ದರೆ ಇನ್ನು ಕೆಲವು ಕಡೆ ಹನ್ನೊಂದನೆ ದಿನ ಸೂತಕವಿರುತ್ತದೆ. ಆ ದಿವಸ ಸಗಣೆಯಿಂದ ಮನೆಯನ್ನು ಸಾರಿಸಿ, ಬ್ರಾಹ್ಮಣ ಪುರೋಹಿತರಿಂದ ಅಥವಾ ಲಿಂಗಾಯಿತ ಜಂಗಮರಿಂದ ಪಡೆದ ತೀರ್ಥ ಸಿಂಪಡಿಸಿ ಶುದ್ಧ ಮಾಡುವರು. ಸ್ನಾನ ಮಾಡಿದ ನಂತರ ಮನೆಯವರೆಲ್ಲರೂ ತೀರ್ಥ ಕುಡಿಯುತ್ತಾರೆ. ಬಾಣಂತಿಯ ಸೂತಕ ಹದಿನಾರು ಅಥವಾ ಇಪ್ಪತ್ತೇಳು ದಿನದವರೆಗೂ ಬಾವಿಕಟ್ಟೆಯಲ್ಲಿ ಅಥವಾ ಮನೆಯಲ್ಲಿ ಗಂಗೆಪೂಜೆ ಮಾಡುವ ತನಕ ಇರುತ್ತದೆ. ಹನ್ನೊಂದು ಅಥವಾ ಹದಿನಾರನೇ ದಿನ ಮಗುವನ್ನು ತೊಟ್ಟಿಲಿಗೆ ಹಾಕುತ್ತಾರೆ. ಅಲ್ಲಿಯತನಕ ಅಡಿಕೆ ಹಾಳೆ ಅಥವಾ ಒಂದು ಮೊರದಲ್ಲಿ ಮಲಗಿಸಿರುತ್ತಾರೆ. ಹೆರಿಗೆಯಾದ ಕೂಡಲೇ ಬಾಣಂತಿ, ಮಗು ಹಾಗೂ ಸೂಲಗಿತ್ತಿಯರು ಸ್ನಾನ ಮಾಡಿ ಬಟ್ಟೆ ಬದಲಿಸುವರು. ಮಗುವಿಗೆ ಹರಳೆಣ್ಣೆಯನ್ನು ಹಚ್ಚುತ್ತಾರೆ. ಮೂರನೇ ದಿನದಿಂದ ಮಗುವಿಗೆ ಮೊಲೆ ಹಾಲುಣಿಸಲು ಪ್ರಾರಂಭಿಸುತ್ತಾರೆ. ಹನ್ನೆರಡು ಅಥವಾ ಹದಿನೆಂಟು ತಿಂಗಳು ಕುಡಿಸುತ್ತಾರೆ. ಮಗು ಆರು ತಿಂಗಳಿರುವಾಗ ಊಟ ಕೊಡುತ್ತಾರೆ. ಮೇಕೆ ಹಾಲು ಕುಡಿಸುವರು. ಬಾಣಂತಿ ಹತ್ತರಿಂದ ಮೂವತ್ತು ದಿವಸ ಪಥ್ಯದಲ್ಲಿರಬೇಕಾಗುತ್ತದೆ. ಮೊದಲ ಹತ್ತು ದಿವಸ ಅನ್ನ ಹಾಗೂ ಮೆಣಸಿನಕಾಳೀನ ಸಾರು ಹಾಕುತ್ತಾರೆ. ಹದಿನೈದು ದಿನಕ್ಕೊಮ್ಮೆ ಬಾಣಂತಿ ಚೈತನ್ಯ ಪಡೆಯಲೆಂದು ಗೋಧಿ, ಮೆಣಸಿನಕಾಳು, ಬಾದಾಮಿ, ಮೆಂತೆ, ಕೊಬ್ಬರಿ, ಜೀರಿಗೆಯಿಂದ ತಯಾರಿಸಿದ ಖಾರ ಕೊಡುತ್ತಾರೆ. ಹತ್ತನೇ ದಿನದ ನಂತರ ಕೋಳಿ ಸಾರು ಊಟ ಮಾಡಬಹುದು. ಕ್ರಮೇಣ ಸಾಮಾನ್ಯ ಆಹಾರವನ್ನು ತೆಗೆದುಕೊಳ್ಳಬಹುದು. ಬಾಣಂತಿನವನ್ನು ಇಪ್ಪತ್ತೇಳು ಅಥವಾ ನಲವತ್ತೈದು ದಿನಗಳವರೆಗೂ ಮಾಡುತ್ತಾರೆ. ನಂತರ ಆಕೆ ತನ್ನ ಗಂಡನ ಮನೆಗೆ ಹೋಗಬಹುದು. ಮೂಗು, ಕಿವಿ ಚುಚ್ಚುವುದಕ್ಕೆ ಯಾವುದೇ ವಿಶೇಷ ಕಾರ್ಯಕ್ರಮ ಇರುವುದಿಲ್ಲ. ಹಸಲರು ಮಕ್ಕಳಿಗೆ ಐದು, ಏಳು ಮತ್ತು ಒಂಭತ್ತನೇ ತಿಂಗಳಲ್ಲಿ ಚೌಲ ಮಾಡಿಸುತ್ತಾರೆ. ಇದಕ್ಕೆ ಚೌಳಂಗಿ ಎನ್ನುತ್ತಾರೆ. ದೇವರಿಗೆ ಹರಕೆ ಹೊತ್ತವರು ಚಂದ್ರಗುತ್ತಿಗೆ ಹೋಗಿ ಚೌಲ ಮಾಡಿಸಿಕೊಂಡು ಬರುತ್ತಾರೆ. ಕೆಲವರು ಮನೆಯಲ್ಲಿಯೇ ಚೌಲ ಮಾಡುತ್ತಾರೆ. ಮಗುವಿನ ಕೂದಲು ಕತ್ತರಿಸಲು ಸೋದರಮಾವ ಆಗಲೇಬೇಕು. ಮಗುವಿನ ಚೌಲದ ದಿವಸ ಸೋದರಮಾವನನ್ನು ಕರೆಸುತ್ತಾರೆ. ಬಾಳೆದೊನ್ನೆಯಲ್ಲಿ ನವಧಾನ್ಯಗಳು, ಬೆಲ್ಲ, ತುಪ್ಪ, ಹಿತ್ತಾಳೆ ಲೋಟದ ತುಂಬಾ ಎಣ್ಣೆ, ಐದು

ಬಾಳೆಹಣ್ಣು, ಒಂದು ತೆಂಗಿನಕಾಯಿಯನ್ನು ಒಂದು ಹರಿವಾಣದಲ್ಲಿಟ್ಟು ಹುಡುಗನ ಎದುರಿಗೆ ಇಡುತ್ತಾರೆ. ನಂತರ ಸೋದರಮಾವ ಕೂದಲನ್ನು ಕತ್ತರಿಸುತ್ತಾನೆ. ಅವನು ಕತ್ತರಿಸಿದ ಕೂದಲನ್ನು ಬಾಳೆಎಲೆಯಲ್ಲಿರಿಸಿ ಒಂದು ಹಿಡಿ ಅಕ್ಕಿ, ಎಲೆ ಅಡಿಕೆ, ಬಾಳೆಹಣ್ಣು ಸೇರಿಸಿ ನದಿಗೆ ತೆಗೆದುಕೊಂಡು ಹೋಗಿ ಬಾಳೆಎಲೆ ಸಹಿತ ಕೂದಲನ್ನು ಬಿಟ್ಟು ಬರುತ್ತಾನೆ. ಹುಡುಗನ ತಂದೆ ಹರಿವಾಣವನ್ನು ಎತ್ತಿ ಸೋದರ ಮಾವನಿಗೆ ಕೊಡುತ್ತಾನೆ. ಹುಡುಗನಿಗೆ ಎಣ್ಣೆ ಅರಿಶಿನ ಹಚ್ಚಿ ಸ್ನಾನ ಮಾಡಿಸುತ್ತಾರೆ. ನಂತರ ಹೊಸಬಟ್ಟೆ ತೊಡಿಸಿ ತಲೆಗೆ ಪೇಟಾ ಸುತ್ತುತ್ತಾರೆ. ತಂದೆ ತಾಯಿಗೆ ನಮಸ್ಕಾರ ಮಾಡಿಸಿ, ಶೇಡಿ ಬರೆದ ಸ್ಥಳದಲ್ಲಿ ಅಕ್ಕಿಯಿಂದ ಚೌಕ ಬರೆಸಿ, ಹುಡುಗನ ಬಲಗಾಲು ಮುಂದಿಡಿಸಿ ಕೂರಿಸುತ್ತಾರೆ. ಹುಡುಗನ ತಂದೆಯ ಅಕ್ಕ ಅಥವಾ ತಂಗಿ ಕಳಸ ಹಿಡಿದು ಹುಡುಗನ ಬಲಗಡೆ ಕೂತಿರುತ್ತಾಳೆ. ನೆಂಟರು, ಸೇಸೆಯಿಟ್ಟು ಆರತಿ ಮಾಡುತ್ತಾರೆ. ಹುಡುಗನಿಗೆ ನಾಲ್ಕಾಣೆಯಿಂದ ಒಂದು ರೂಪಾಯಿ ಚಕ್ರ ಇಟ್ಟು ಉಡುಗೊರೆ ಮಾಡುತ್ತಾರೆ. ಊಟ ಪಾಯಸ, ಚಿತ್ರಾನ್ನ, ಅನ್ನ, ಸಾರು ತಯಾರಿಸುವರು. ಚೌಲಕ್ಕೆ ಬಂದಿರುವ ನೆಂಟರಿಗೆ, ಊಟ ಹಾಕುವರು. ಕೂದಲು ತೆಗೆದ ಸೋದರಮಾವನಿಗೆ ಒಂದು ಸೇರು ಅಕ್ಕಿ, ಅಡಿಕೆ, ಎಲೆ, ಬಾಳೆಹಣ್ಣು, ೨೧೧ರೂಪಾಯಿ ಅಥವಾ ೫,೧೧೪ರೂಪಾಯಿ, ಒಂದು ಟವಲ್ ಸೋದರತ್ತೆಗೆ ಸೀರೆ ಅಥವಾ ರವಿಕೆ ಖಣ ಉಡುಗೊರೆ ನೀಡುವರು. ಒಂದು ತಿಂಗಳ ನಂತರ ಮರುಚ್ವಾಳಂಗಿ ಮಾಡುವರು. ಹುಡುಗನಿಂದ ಅಡಿಕೆ ಎಲೆ ಬಾಳೆಹಣ್ಣು ಹಿರಿಯರಿಗೆ ಕೊಡಿಸಿ ನಮಸ್ಕಾರ ಮಾಡಿಸುತ್ತಾರೆ. ಶಿವಮೊಗ್ಗ ಜಿಲ್ಲೆಯ ಹಸಲ ಸಮುದಾಯದ ಋತುಮತಿಯಾದ ಹುಡುಗಿ ೫ ದಿನಗಳವರೆಗೆ ಒಂದು ಕೋಣೆಯಲ್ಲಿಯೇ ಇರಬೇಕು. ಹೊರಗಡೆಗೆ ಬರುವಂತಿಲ್ಲ. ಇದಕ್ಕೆ ಹಸಲರು ಸೂತಕವೆಂದು ಕರೆಯುತ್ತಾರೆ. ಈ ಸಂದರ್ಭದಲ್ಲಿ ಯಾವುದೇ ಶುಭಕಾರ್ಯವನ್ನು ಮಾಡುವುದಿಲ್ಲ. ೫ನೇ ದಿನದಂದು ಅಥವಾ ೯ನೇ ದಿನದಂದು ಋತುಮತಿಯಾದ ಹುಡುಗಿಗೆ ರೇಷ್ಮೆ ಸೀರೆಯನ್ನು ಉಡುಸಿ ಕೂಡಿಸುವ ಪದ್ಧತಿ ಇದೆ. ಅಂದು ಸುಮಂಗಲೆಯರು ಕಳಸ ಬೆಳಗುತ್ತಾರೆ. ಸಂಬಂಧಿಕರು, ಬೀಗರು, ಬಿಜ್ಜರು, ಅಕ್ಕ ಪಕ್ಕದ ಮನೆಯವರೆಲ್ಲ ಸಿಹಿ ಅಡುಗೆಯನ್ನು ಊಟ ಮಾಡುತ್ತಾರೆ. ಹಸಲರ ಹೆಣ್ಣು ಪ್ರಥಮ ಬಾರಿ ದೊಡ್ಡವಳಾದಾಗ ಸೋದರಮಾವನಿಗೆ ಸುದ್ದಿ ತಲುಪಿಸುತ್ತಾರೆ. ಐದು ದಿವಸಗಲ ನಂತರ ಸೋದರಮಾವ ಒಸಗೆ ಕೊಟ್ಟೆ ತರುತ್ತಾನೆ. ಋತುವಾದ ಹೆಣ್ಣಿಗೆ ಮನೆಯ ಒಳಗಡೆ ಸ್ನಾನ ಮಾಡಿಸುವುದಿಲ್ಲ. ಹಳ್ಳದಲ್ಲಿ ಅಥವಾ ಹತ್ತಿರದ ಕೆರೆಯಲ್ಲಿ ಸ್ನಾನ ಮಾಡಿಸುತ್ತಾರೆ. ನಂತರ ಹೊಸಸೀರೆ ಉಡಿಸಿ, ತಲೆ ಬಾಚಿ ಸೋದರಮಾವ ತಂದಿರುವ ಒಸಗೆ ಕೊಟ್ಟೆಯಲ್ಲಿರುವ ಹಿಂಗಾರ, ಹೂವು ಮುಡಿಸಿ ಹಸೆ ಕೂರಿಸುತ್ತಾರೆ. ಕೇರಿಯ ಹೆಣ್ಣುಮಕ್ಕಳು ಆರತಿ ಎತ್ತುವರು. ನಂತರ ಪಾಯಸದ ಊಟ ಹಾಕುವರು. ಪರಿಶಿಷ್ಟ ಬುಡಕಟ್ಟು ಜನಾಂಗೀಯ ಮಾಹಿತಿ ೧೯೬೧ರ ಪ್ರಕಾರ ಹಸಲರ ಹೆಣ್ಣು ಮೊದಲ ಬಾರಿ ಋತುಮತಿಯಾದರೆ ನಾಲ್ಕು ಅಥವಾ ಎಂಟು ದಿನಗಳ ಕಾಲ ಮೈಲಿಗೆಯಿರುತ್ತದೆ. ಅವಳು ಕೊಟ್ಟಿಗೆಯಲ್ಲಿ ಇಲ್ಲವೇ ಪ್ರತ್ಯೇಕ ಗುಡಿಸಲಿನಲ್ಲಿರುತ್ತಾಳೆ, ಪ್ರತಿದಿನ ಮದುವೆಯಾದ ಸ್ತ್ರೀಯರು ಸ್ನಾನ ಮಾಡಿಸಿ ಅವಳಿಗೆ ಮನರಂಜನೆಗಾಗಿ ಜನಪದ

ಗೀತೆಗಳನ್ನು ಹಾಡುತ್ತಾರೆ. ಈ ಸಮಯದಲ್ಲಿ ಅವಳು ಕೆಲಸಗಳನ್ನು ಮಾಡುವ ಹಾಗಿಲ್ಲ ಹಾಗೂ ಬೇರೆಯವರ ಜೊತೆ ಸೇರುವ ಹಾಗಿಲ್ಲ. ಐದು ಅಥವಾ ಒಂಭತ್ತನೇ ದಿವಸ ಸ್ನಾನ ಮಾಡಿಕೊಂಡು ಗಂಗೆ ಪೂಜೆ ಮಾಡುತ್ತಾಳೆ. ಜನಾಂಗದ ಐದಾರು ಜನರಿಗೆ ಸಿಹಿ ಊಟ ಹಾಕುತ್ತಾರೆ. ದಿ. ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ ಎಂಬ ಗ್ರಂಥದ ಸಂಪುಟ(ಎಲ್.ಕೆ. ಅನಂತಕೃಷ್ಣ ಅಯ್ಯರ್ ಮತ್ತು ಎಚ್. ವಿ ನಂಜುಂಡಯ್ಯ, ಪುನರ್ಮುದ್ರಣ ೧೯೮೮)ದಲ್ಲಿ ಹಸಲ ಹುಡುಗಿಯರು ಋತುಮತಿಯಾದ ನಂತರ ಹನ್ನೆರಡು ದಿನ ಪ್ರತ್ಯೇಕವಾಗಿರುತ್ತಾರೆ. ಪ್ರತಿದಿನ ಕೇರಿಯ ಹೆಂಗಸರು ಬಂದು ವಿಚಾರಿಸುವರು. ಐದು, ಏಳು, ಹನ್ನೆರಡನೇ ದಿನ ಸ್ನಾನ ಮಾಡಿಸುವರು. ಹನ್ನೆರಡನೇ ದಿನ ಕಳಸ ಹಿಡಿದು ದಾಸಯ್ಯನಿಂದ ತಂದ ತೀರ್ಥ ಕುಡಿದ ನಂತರ ಪವಿತ್ರಳಾಗುತ್ತಾಳೆ. ಮದುವೆ ಯಾಗಿದ್ದರೆ ಹನ್ನೆರಡನೇ ದಿನದ ನಂತರ ಗಂಡನ ಜೊತೆ ಇರಬಹುದು. ಹಸಲರಲ್ಲಿ ಗರ್ಭಿಣಿ ಮಹಿಳೆಗೆ ಏಳು ತಿಂಗಳು ತುಂಬಿದ ನಂತರ ಬಯಕೆ ಶಾಸ್ತ್ರ ಮಾಡುವರು. ಇದಕ್ಕೆ 'ಬಯಕೆ ಸಮ್ಮಾನ'ಎನ್ನುವರು. ಸೊರಬದಲ್ಲಿ 'ಹೂವು ಮುಡಿಸುವ ಶಾಸ್ತ್ರ'ಎನ್ನುವರು. ಸಾಗರ, ಹೊಸನಗರಗಳಲ್ಲಿ ಶಾಸ್ತ್ರ ಎನ್ನುವರು. ಮೊದಲು ಗಂಡನ ಮನೆಯಲ್ಲಿ ನಡೆಯುವುದು. ಗರ್ಭಿಣಿ ಸ್ತ್ರೀಗೆ ಇಷ್ಟವಾದ ಬುತ್ತಿ ಅನ್ನ(ಮೊಸರನ್ನ), ಕಲಸನ್ನ, ಅನ್ನ ಸಾರು, ಕಾಯಿಗರಿಗೆ ಕಜ್ಜಯ ಮಾಡಿ ಊಟ ಬಡಿಸುವರು. ನಂತರ ತವರುಮನೆಯವರು ಮೇಲಿನ ತಿಂಡಿ ತಿನಿಸುಗಳನ್ನು ಮಾಡಿಕೊಂಡು ಗಂಡನ ಮನೆಗೆ ಬಂದು ಗರ್ಭಿಣಿಗೆ ತಿನ್ನಿಸಿ ಹೋಗುವರು. ಎಂಟು ತಿಂಗಳು ತುಂಬಿದಾಗ ತವರುಮನೆಗೆ ಹೆರಿಗೆಗೆ ಕಳುಹಿಸಿ ಕೊಡುವರು.

**೪.೧೧. ಜನನ ಮತ್ತು ಮರಣ**

ಹಸಲರು ನಾಟೀವೈದ್ಯ ಪದ್ಧತಿ ಮತ್ತು ಹೆರಿಗೆಗೆ ಮಾಡಿದಸುವ ಪದ್ದತಿ ಸೂಲಗಿಯತ್ತಿಯವರ ಮೊರೆ ಹೋಗುವುದು. ಅತೀಹೆಚ್ಚು ಹಸಲರು ಬುಡಕಟ್ಟಿನ ಮಹಿಳೆಯರ ಹೆರಿಗೆ ನಡೆಯುವುದು ಗಂಡನ ಮನೆಗಿಂತ, ತವರು ಮನೆಯಲ್ಲಿ ನಡೆಯುವುದೇ ಹೆಚ್ಚು. ೭ ತಿಂಗಳಾದ ಗರ್ಭೀಣಿಯನ್ನು ತವರು ಮನೆಗೆ ಕರೆ ತರುತ್ತಾರೆ. ಮಗು ಜನನವಾಗಿ ೧೧ ದಿನಕ್ಕೆ ತವರು ಮನೆಯಲ್ಲಿ ನಾಮಕರಣ ನಡೆಯುತ್ತದೆ. ಹಸಲರು ಸಾಮಾನ್ಯವಾಗಿ ಹುಟ್ಟಿದ ಮಗುವಿಗೆ "ಅಮೆ"-ಎಂದು ಕರೆಯುತ್ತಾರೆ. ಮಗು ಹುಟ್ಟಿದ ೧೦ ದಿನಗಳವರೆಗೆ ಸೂತಕವೆಂದು ಕರೆಯುತ್ತಾರೆ. ನಾಮಕರಣದ ದಿನದಂದು ಮನೆಯಲ್ಲಿ ರಾತ್ರಿ ವೇಳೆಗೆ ಸಿಹಿ ಅಡುಗೆಯನ್ನು ಮಾಡಿ ಅಕ್ಕ ಪಕ್ಕದವರನ್ನು ಬೀಗರು-ಬಿಜ್ಜರನ್ನು ಕರೆಯಿಸಿ ಸಿಹಿ ಊಟವನ್ನು ಬಡಿಸುತ್ತಾರೆ. ಒಬ್ಬ ಮಹಿಳೆಯ ಹೆರಿಗೆ ಸಮಯದಲ್ಲಿ ಸೂಲಗಿತ್ತಿಯರು ಹೆರಿಗೆಯನ್ನು ಮಾಡಿಸಿಕೊಳ್ಳುತ್ತಾರೆ. ಉದಾ : ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಕೂಡಗುಂಜಿ ಗ್ರಾಮದ ಬಂಗಾರಮ್ಮ, ಕಾಳಮಂಜಿ ಹಾಡಿಯ ಕನ್ನೆಮ್ಮ, ಬಂದಕಪ್ಪ, ಹಾಡಿಯ ಸೀತಮ್ಮನಂತಹ ಸೂಲಗಿತ್ತಿಯರು ಹೆರಿಗೆಯನ್ನು ಮಾಡಿಸುತ್ತಾರೆ. ಮಗು ಹುಟ್ಟಿದ ೫ ತಿಂಗಳಲ್ಲಿ ತಾಯಿ ಮತ್ತು ಮಗುವನ್ನು ಗಂಡನ ಮನೆಗೆ ಕಳುಹಿಸಿಕೊಡುತ್ತಾರೆ. ಈ ಪದ್ದತಿ ಇಂದಿಗೂ ಹಸಲರು ಬುಡಕಟ್ಟಿನಲ್ಲಿದೆ.

ಹಸಲರು ಬುಡಕಟ್ಟಿನಲ್ಲಿ ಸತ್ತವರನ್ನು ಸುಡುವ ಮತ್ತು ಹೂಳುವ ಎರಡು ಪದ್ಧತಿಗಳೂ ಇವೆ. ವಿವಾಹಪೂರ್ವ ಸತ್ತವರನ್ನು ಹೂಳುತ್ತಾರೆ. ವಿವಾಹದ ನಂತರ ಸತ್ತವರನ್ನು ಸುಡುತ್ತಾರೆ. ಅಥವಾ ಮಹಿಳೆ ಮಳೆಗಾಲದಲ್ಲಿ ಸತ್ತರೆ ಅವರನ್ನು ಮಣ್ಣು ಮಾಡುತ್ತಾರೆ. ಬಾಣಂತಿ, ಗರ್ಭಿಣಿ ಮತ್ತು ಮಕ್ಕಳು ಸತ್ತರೆ ಸುಡುತ್ತಾರೆ. ಇವರಲ್ಲಿ ಯಾರಾದರೂ ಸತ್ತರೆ ಶವಸಂಸ್ಕಾರಕ್ಕೆ ಹೋಗಲು ಹೆದರುತ್ತಾರೆ. ಇವರಿಗೆ ದೆವ್ವ ಭೂತಗಳ ಹೆದರಿಕೆ ಬಹಳ. ಸತ್ತವನು ದೆವ್ವ ಆಗಿ ಕಾಡುತ್ತಾನೆ ಎಂಬ ಅಂಜಿಕೆ ಇದೆ. ಒಬ್ಬ ವ್ಯಕ್ತಿ ಇನ್ನೇನು ಸಾಯುತ್ತಾನೆ ಎಂದು ಖಚಿತವಾದಾಗ ಅವನ ಗಂಡುಮಕ್ಕಳು, ಹತ್ತಿರದ ಸಂಬಂಧಿಕರು ಬಾಯಿಗೆ ತಿಳಿಗಂಜಿ ಅಥವಾ ನೀರು ಬಿಡುತ್ತಾರೆ. ಸಾವಿನ ಸುದ್ದಿಯನ್ನು ಯಾರಾದರೂ ಹೋಗಿ ಸಂಬಂಧಿಕರಿಗೆ ಮುಟ್ಟಿಸಿ ಬರುತ್ತಾರೆ. ವ್ಯಕ್ತಿಯ ಪ್ರಾಣ ಹೋದಮೇಲೆ ಶವವನ್ನು ನೆಲದ ಮೇಲೆ ಮಲಗಿಸಿ ಕಂಬಳಿ ಮುಚ್ಚುತ್ತಾರೆ. ನಂತರ ಕಂಬಳಿ ತೆಗೆದು ಬಿಳಿಪಂಚೆ ಮುಚ್ಚುವರು. ತಲೆಯ ಹಿಂದೆ ಹಣತೆ ದೀಪವನ್ನು ಹಚ್ಚಿಡುತ್ತಾರೆ. ಶವದ ತಲೆಯ ಮತ್ತು ಕಾಲುಗಳ ಭಾಗದಲ್ಲಿ ಸ್ವಲ್ಪ ಮಣ್ಣು ತೆಗೆದು ಬಾಳೆಎಲೆಯಲ್ಲಿ ಒಂದು ಹಿಡಿ ಅಕ್ಕಿ ಮತ್ತು ಮಣ್ಣು ಹಾಕಿ ಶವದ ಬಲಭಾಗದಲ್ಲಿ ಹೊದಿಸಿದ ಪಂಚೆಗೆ ಹಾಕಿ ಗಂಟು ಕಟ್ಟುತ್ತಾರೆ. ಕೆಲವು ಜನ ಸ್ಮಶಾನಕ್ಕೆ ಸೌದೆ ಮಾಡಲು ಹೋಗುವರು. ಕಟ್ಟಿಗೆ ರಾಶಿ ಮಾಡಿದ ನಂತರ ಎರಡು ಜನ ಕಾಡಿನಿಂದ ಮರಳಿ ಬರುತ್ತಾರೆ. ಬರುವಾಗ ಬಾಳೆಮರದ ತುಂಡುಗಳನ್ನು ತರುವರು. ಬಾಳೆಯ ತುಂಡು ಎರಡೂವರೆ ಅಡಿ ಉದ್ದ ಇರುತ್ತದೆ. ಈ ತುಂಡನ್ನು ಅಮಗಳದಲ್ಲಿ ಬಿಡಿಯಾಗಿಟ್ಟು ಇವುಗಳ ಮೇಲೆ ಎರಡು ಗಟ್ಟಿಯಾದ ಅಡಿಕೆ ದಬ್ಬೆಗಳನ್ನು ಅಡ್ಡಲಾಗಿ ಕಟ್ಟಿ ಅಡಿಕೆಸೋಗೆ ಹಾಕಿ ಹೆಣವನ್ನು ತಂದು ಮಲಗಿಸುವರು. ಮಣ್ಣಿನ ಉರಿನೀರು ಬಿಂದಿಗೆಗೆ ನೀರು ತುಂಬಿಸುತ್ತಿರುವಾಗಲೇ ಕೊಡದಿಂದ ನೀರನ್ನು ಶವದ ಮೇಲೆ ಹಾಕುತ್ತಾರೆ. 'ಉರಿನೀರು'ಬಿಂದಿಗೆಯನ್ನು ಒಬ್ಬರು ಹಿಡಿದುಕೊಂಡಿರುತ್ತಾರೆ. ನಂತರ ಶವದ ಮೇಲೆ ಅಡಿಕೆಸೋಗೆ ಮುಚ್ಚಿ ಹಸಿ ಹಾಳೆಯ ಪಟ್ಟಿಯಿಂದ ಬಿಗಿದು ಕಟ್ಟುತ್ತಾರೆ. ಮತ್ತೊಂದು ಮಡಕೆಯಲ್ಲಿ ಸಗಣೆ ಕುರುಳಿಗೆ ಬೆಂಕಿ ಹಾಕಿ ಕವೆಕೋಲಿನಿಂದ ಕಟ್ಟಿ ಹಿಡಿದುಕೊಂಡಿರುತ್ತಾರೆ. ಗಂಡುಮಕ್ಕಳಿದ್ದರೆ ಅವರು ಎರಡು ಜನ ಶವವನ್ನು ಸ್ಮಶಾನಕ್ಕೆ ಹೊತ್ತುಕೊಂಡು ಹೋಗುವರು. ಶವದ ಕೆಳಗಿದ್ದ ಬಾಳೆದಿಂಡಿನ ತುಂಡುಗಳನ್ನು ತೆಗೆದು ಹಾಕುವರು. ಶವ ಎತ್ತುವಾಗ ಬಂದೂಕಿನಿಂದ ಗುಂಡು ಹಾರಿಸುವರು. ಕೆಲವರು ಮನೆಯ ಒಳಗೆ ಹುಲ್ಲು ಅಥವಾ ಹೆಂಚು ತೆಗೆದು ಹಂಡು ಹಾರಿಸುತ್ತಾರೆ. ಇದಕ್ಕೆ 'ಬಚ್ಚೆ'ಹೊಡೆಯುವುದು ಎನ್ನುವರು. ಮರಣ ಹೊಂದಿರುವ ವ್ಯಕ್ತಿ ಜೀವಂತವಾಗಿದ್ದಾಗ ಬಂದೂಕು ಬಳಸುತ್ತಿದ್ದರೆ ಅವನ ಮನಸ್ಸಿಗೆ ಶಾಂತಿ ಸಿಗಲಿ ಎಂದು 'ಬಚ್ಚೆ'ಹೊಡೆಯುತ್ತಾರೆ ಮತ್ತು ಈಡು ಹೊಡೆದರೆ ಕಾಲುದೋಷ ಹೋಗುತ್ತದೆ ಎಂಬ ನಂಬಿಕೆ. ಜೊತೆಗೆ ಹೊತ್ತಕೊಂಡು ಹೋದ ನಂತರ ಸ್ಮಶಾನದ ಸಮೀಪ ನೆಲದ ಮೇಲೆ ಇಳಿಸಿ, ಶವದ ಬಾಯಿಗೆ ಶವಯಾತ್ರೆಯಲ್ಲಿರುವವರು ಗಂಜಿಬಿಡುವರು. ಮೊದಲು ಹಿರಿಯಮಗ ಗಂಜಿ ಬಿಡುವನು. ನಂತರ ಉಳಿದವರು ಬಿಡುವರು. ಉರಿನೀರಿನ ಬಿಂದಿಗೆಯನ್ನು ಹಿರಿಯ ಮಗನೇ, ಹೊತ್ತುಕೊಳ್ಳಬೇಕು.

ಗಂಡು ಮಕ್ಕಳಿಲ್ಲದಿದ್ದರೆ ಹೆಣ್ಣುಮಕ್ಕಳು ಹಿಡಿದಿರುತ್ತಾರೆ. ಗಂಜಿ ಬಿಟ್ಟ ನಂತರ ಪುನಃ ಶವಯಾತ್ರೆ ಸಾಗುವುದು. ಸೌದೆರಾಶಿಯ ಹತ್ತಿರ ಬರುತ್ತಾರೆ. ಕಟ್ಟಿಗೆ ರಾಶಿಯನ್ನು ಆರು ಅಡಿ ಉದ್ದ, ನಾಲ್ಕು ಅಡಿ ಅಗಲ ಆಯತಾಕಾರ ಮಾಡಿರುತ್ತಾರೆ. ಹೀಗೆ ಕಟ್ಟಿಗೆರಾಶಿಮಾಡಿರುವುದಕ್ಕೆ 'ಈಡು' ಕಟ್ಟುವುದು ಎನ್ನುವರು. ಶವವನ್ನು ಸೌಧೆರಾಶಿಯ ಸುತ್ತಲೂ ಮೂರು ಬಾರಿ ಸುತ್ತಿಸಿ ಕಟ್ಟಿಗೆ ರಾಶಿಯ ಮೇಲೆ ಇಡುವರು. ಶವದ ಮೇಲಿರುವ ಎಲ್ಲಾ ವಸ್ತುಗಳನ್ನು ತೆಗೆದು ಬೆತ್ತಲೆ ಮಾಡುವರು. ಹಿರಿಯಮಗ ಮೊದಲು ಬೆಂಕಿ ಹಚ್ಚುವನು. ತಕ್ಷಣ ಉರಿನೀರಿನ ಬಿಂದಿಗೆಯನ್ನು ಹೊತ್ತು ಶವದ ಸುತ್ತ ಮೂರು ಬಾರಿ ತಿರುಗುವಾಗ ಒಂದೊಂದು ತೂತು ಕತ್ತಿಯಿಂದ ಮಾಡುವರು. ಮೂರನೇ ಸುತ್ತಿಗೆ ಬಿಂದಿಗೆಯನ್ನು ಹಿಂದಕ್ಕೆ ಬಿಡುವನು. ನಂತರ ಎಲ್ಲರೂ ಶವಕ್ಕೆ ಬೆಂಕಿ ಹಾಕುವರು. ಮರಣ ಹೊಂದಿದವನ ಪತ್ನಿಯ ತಾಳಿ ಬಿಚ್ಚಿ ಕಾಲುಂಗುರ, ಮೂಗುತಿ, ಬೆಂಡೋಲೆಗಳನ್ನು ತೆಗೆದು ಬಳೆಗಳನ್ನು ಒಡೆಯುತ್ತಾರೆ. ಶವದ ಈಡಿಗೆ ಮೂರು ಕಡೆ ಬೆಂಕಿ ಹತ್ತುವವರಿಗೆ ಇದ್ದು ನಂತರ ವಾಪಾಸಾಗುವರು. ಸ್ವಲ್ಪ ದೂರ ಬಂದನಂತರ ಕಾರೆಮರದ ಸೊಪ್ಪಿನಕೊನೆ ಮುರಿದು ನೆಲದ ಮೇಲಿಟ್ಟು ಅದರ ಮೇಲೆ ಬಿಳಿಕಲ್ಲು ಇಡುತ್ತಾರೆ. ಎಲ್ಲರೂ ಎದನ್ನು ದಾಟಿ ಹೋಗಬೇಕು. ನಂತರ ನದಿಯಲ್ಲಿ ಅಥವಾ ಕೆರೆಯಲ್ಲಿ ಸ್ನಾನ ಮಾಡಿ ಒದ್ದೆ ಬಟ್ಟೆಯುಟ್ಟು ಗೋಮಯ(ಸಗಣಿನೀರು) ಹಾಕಿಕೊಂಡು ಮನೆಗೆ ಬರುತ್ತಾರೆ. ನಂತರ ಬಿಸಿನೀರಿನ ಸ್ನಾನ ಮಾಡುತ್ತಾರೆ. ಮರಣ ಹೊಂದಿದ ವ್ಯಕ್ತಿ ಪ್ರಾಣ ಬಿಟ್ಟ ಸ್ಥಳದಲ್ಲಿ ದೀಪ ಹಚ್ಚಿ ಇಡುತ್ತಾರೆ. ಪ್ರತಿದಿವಸ ಸ್ಮಶಾನಕ್ಕೆ ಹೋಗಿ ಹತ್ತು ದಿವಸ 'ಬಾಯಿಗಂಜಿ'ಇಟ್ಟು ಬರುತ್ತಾರೆ. ಮಾರನೇ ದಿವಸ ಹಿರಿಮಗ, ಗ್ರಾಮದ ಎರಡು ಜನ ಸೇರಿ ಸ್ಮಶಾನಕ್ಕೆ ಹೋಗಿ ಶವ ಸರಿಯಾಗಿ ಸುಟ್ಟಿದೆಯೋ, ಇಲ್ಲವೇ ಎಂದು ನೋಡಿ ಮರುಕೊಳ್ಳಿ ಚಾಚಿ ಬರುತ್ತಾರೆ. ಮರಣ ಹೊಂದಿದ ಘಳಿಗೆ ಒಳ್ಳೆದಿದೆಯೆ ಇಲ್ಲವೇ ಎಂದು ಪುರೋಹಿತರನ್ನು ಕೇಳುತ್ತಾರೆ. ಕೆಟ್ಟಘಳಿಗೆಯಲ್ಲಿ ಮರಣ ಹೊಂದಿದ್ದರೆ ಇಪ್ಪತ್ತೊಂದು ಅಥವಾ ನಲವತ್ತೆಂಟು ದಿವಸ ಮನೆ ಬಿಟ್ಟು ಬೇರೆ ಕಡೆ ವಾಸ ಮಾಡಬೇಕಾಗುತ್ತದೆ. ಮರಣ ಹೊಂದಿದ ಸ್ಥಳದಲ್ಲಿ ಬೂದಿ ಅಥವಾ ರಂಗೋಲಿಪುಡಿ ಹರಡಿ ಒಂದು ಲೋಟ ನೀರು ಇಡುತ್ತಾರೆ. ಮರಣ ಹೊಂದಿದವನ ಜೀವ ಬೆಕ್ಕು, ಆಕಳು, ಹುಲಿ ರೂಪದಲ್ಲಿ ಹೋಗುತ್ತದೆ ಎಂಬ ನಂಬಿಕೆ. ಬೂದಿಯಲ್ಲಿ ಪ್ರಾಣಿಗಳ ಪಾದದ ಗುರುತು ಕಾಣುತ್ತದೆ ಮತ್ತು ಲೋಟದಲ್ಲಿಯ ನೀರು ಕಡಿಮೆಯಾಗಿರುತ್ತದೆ ಎಂಬ ನಂಬಿಕೆ, ಜೀವ ಹುಲಿಯ ರೂಪದಲ್ಲಿ ಹೋದರೆ ಮನೆ ಬಿಡಬೇಕು. ಮೂರನೇ ದಿವಸ ಸೂತಕ ಕಳೆದುಕೊಳ್ಳುವ ಕಾರ್ಯವಿರುತ್ತದೆ. ಮನೆಯವರು, ದಾಯದಿಗಳು ಸ್ನಾನ ಮಾಡಿ, ಗೋಮಯಹಾಕಿಕೊಂಡು ಶುದ್ಧರಾಗುತ್ತಾರೆ. ಇದೇ ರೀತಿ ಏಳನೇ ದಿವಸಕ್ಕೆ ಶುದ್ಧರಾಗುತ್ತಾರೆ. ಹನ್ನೊಂದನೇ ದಿವಸ ಕೋಳಿಮಂಡೆ ಮಾಂಸ, ಅಕ್ಕಿ ಸೇರಿಸಿ ಬೇಯಿಸುತ್ತಾರೆ. ಇದಕ್ಕೆ ಪಿಂಡ ಎನ್ನುವರು. ಸ್ಮಶಾನಕ್ಕೆ ಹೋಗಿ ಶವದ ಬೂದಿಯನ್ನು ವಬ್ಬಳಿಸಿ, ಬಿದರಿನ ಬುಟ್ಟಿಯಲ್ಲಿ ತುಂಬಿ, ಹಿರಿಯಮಗ ಹೊತ್ತು ತಂದು ನದಿಗೆ ಚೆಲ್ಲುತ್ತಾನೆ. ಪಿಂಡವನ್ನು ಎಡೆ ಮಾಡಿ ಗುಳಿ ಕರೆದು

(ಕಾಗೆಗೆ) ಹಾಕುತ್ತಾರೆ. ಹೆಣವನ್ನು ಸುಟ್ಟ ಸ್ಥಳದ ಮಧ್ಯೆ ತುಳಸಿಗಿಡ ನೆಟ್ಟು ಗೋಮಯ ಸಿಂಪಡಿಸಿ ಬರುತ್ತಾರೆ. ನಂತರ ಮರಳಿ ಮನೆಗೆ ಬಂದು ಸ್ನಾನ ಮಾಡಿ ಕೋಳಿಮಾಂಸದ ಸಾರು, ಮೂರು ರೊಟ್ಟಿ, ಅನ್ನ ತೆಗೆದುಕೊಂಡು ಗಾಡಿಗನನ್ನು ಕರೆದುಕೊಂಡು ಮೂರು ಜನ ಸ್ಮಶಾನಕ್ಕೆ ಹೋಗುವರು. ತುಳಸಿಗಿಡದ ಹತ್ತಿರ ದೀಪ ಹಚ್ಚಿ ಎರಡು ಎಡೆ ಮಾಡುತ್ತಾರೆ. ಒಂದು ಎಡೆಯನ್ನು ಮತ್ತೊಮ್ಮೆ ಗುಳಿ ಕರೆದು ಕಾಗೆಗೆ ಕೊಡುತ್ತಾರೆ. ಇನ್ನೊಂದು ಎಡೆಯನ್ನು ಅಲ್ಲಿಯೇ ಬಿಟ್ಟು ಬರುವರು. ನಂತರ ಹಿರಿಯಮಗ ಮತ್ತು ಉಳಿದ ಗಂಡು ಮಕ್ಕಳು ತಲೆ ಬೋಳಿಸಿಕೊಳ್ಳುವರು. ಮರಣ ಹೊಂದಿದ ದಿವಸದಿಂದ ಹನ್ನೊಂದನೇ ದಿವಸದವರೆಗೆ ಕುಟುಂಬದ ಯಜಮಾನ ಕೆಲಸಕ್ಕೆ ಹೋಗುವುದಿಲ್ಲ. ಮೈಗೆ ಬಟ್ಟೆ ತೊಡುವುದಿಲ್ಲ. ಬೇರೆಯವರ ಮನೆಗಳಿಗೆ ಹೋಗುವ ಹಾಗಿಲ್ಲ ಖಾರ, ಉಪ್ಪು ಸೇರಿಸಿದ ಪದಾರ್ಥಗಳನ್ನು ತಿನ್ನುವ ಹಾಗಿಲ್ಲ. ಬರೀ ಗಂಜಿ ಊಟ ಮಾಡುವರು. ಟೀ, ಕಾಫಿ ಕುಡಿಯುವುದಿಲ್ಲ. ಎಲೆ ಅಡಿಕೆ, ತಂಬಾಕು ತಿನ್ನುವ ಹಾಗಿಲ್ಲ.ಬೇರೆಯವರೊಡನೆ ಮಾತನಾಡುವುದಿಲ್ಲ. ಕರಿದ ಪದಾರ್ಥ ಅಂಬಾಡಿ ಎಲೆ ಅಡಿಕೆ ತಿನ್ನಬಹುದು. ಪುರೋಹಿತರಿಂದ ತಂದ ಪಂಚಗವ್ಯವನ್ನು ಕುಟುಂಬದವರೆಲ್ಲರೂ ಸ್ನಾನ ಮಾಡಿ ಶುದ್ಧರಾಗಿ ಹಾಕಿಕೊಳ್ಳುವರು. ಮನೆಯ ಒಳಗೂ ಹಾಕುವರು. ದುಃಖೀತರನ್ನು ಸಮಾಧಾನಪಡಿಸಲು ಬರುವ ಬಂಧುಗಳು ತರುವ ಅವಲಕ್ಕಿ, ಭತ್ತದ ಅರಳು ಮನೆಯವರು ತಿನ್ನುವರು. ಹದಿನಾರನೇ ದಿವಸ, ಮರಣ ಹೊಂದಿದವನಿಗೆ ಅನ್ನ ಹಾಕುವ ಶಾಸ್ತ್ರ ಮಾಡುತ್ತಾರೆ. ಈ ಪದ್ಧತಿಗೆ ಕೆಲವು ಕಡೆ ಖಣಿ ಕೂಡಿಸುವುದು ಎನ್ನುವರು. ಕುರಿ, ಕೋಳಿ ಕುಡಿದು ಮಾಂಸದ ಸಾರು ಮಾಡುತ್ತಾರೆ. ಬಂಧುಗಳನ್ನು, ಆಹ್ವಾನಿಸುವರು. ಈ ದಿವಸ ಗಾಡಿಗ ಬರಲೇಬೇಕು. ಪುರೋಹಿತರಲ್ಲಿ ನಿಂಬೆಹಣ್ಣು, ತೆಂಗಿನಕಾಯಿ ಮಂತ್ರಿಸಿಕೊಂಡು ತಂದಿರುತ್ತಾರೆ. ಕಡುಬು, ಕಾಯಿಗರಿಗೆ ಕಜ್ಜಾಯ, ರೊಟ್ಟಿ, ಪಾಯಸ, ಚಿತ್ರಾನ್ನ ಇನ್ನೂ ಅನೇಕ ಬಗೆಯ ಪದಾರ್ಥಗಳನ್ನು ತಯಾರಿಸಿ ಎಡೆ ಮಾಡಿ ಮೊದಲು ಹೊರಗೆ ಹೋಗಿ ಗುಳಿ ಕರೆದು ಕಾಗೆಗೆ ಕೊಟ್ಟುಬರುತ್ತಾರೆ. ಕಾಗೆ ತಿಂದರೆ ಮರಣ ಹೊಂದಿದವನಿಗೆ ತೃಪ್ತಿಯಾಗಿದೆ ಎಂದು ಭಾವಿಸುತ್ತಾರೆ. ಒಂದು ವೇಳೆ ಕಾಗೆ ಎಡೆಯಲಿರುವ ಪದಾರ್ಥಗಳನ್ನು ಮುಟ್ಟದಿದ್ದರೆ ನದಿಗೆ ಹಾಕಿ ಬರುವರು. ನಂತರ ರಾತ್ರಿ ಮನೆಯಲ್ಲಿ ತಾಮ್ರದ ಹಂಡೆ ಅಥವಾ ದೊಡ್ಡ ಮಣ್ಣಿನ ಮಡಕೆಯಲ್ಲಿ ನೀರು ತುಂಬಿ ಇಟ್ಟು ಮನೆಯಲ್ಲಿ ತಯಾರಿಸಿದ ಮತ್ತು ಬಂಧುಗಳು ತಂದ ತಿಂಡಿ ತಿನಿಸುಗಳನ್ನು ಎಡೆ ಮಾಡಿ ಮಡಕೆಯ ಎದುರು ಇಡುತ್ತಾರೆ. ಒಂದು ಮರದ ಮಣೆಯ ಮೇಲೆ ಮೃತನು ತೊಡುವ ಬಟ್ಟೆಗಳನ್ನು ಗಳಿಗೆ ಮಾಡಿ ಇಡುವರು. ಮಡಕೆಗೆ ಮಾವಿನ ತೊಳಲು ಇಟ್ಟು ಹೂವುಗಳನ್ನು ಮುಡಿಸುವರು. ಜೋಡಿಹಣತೆ ದೀಪಗಳನ್ನು ಮಣೆಯ ಮೇಲೆ ಇಟ್ಟು ಪುರೋಹಿತರಿಂದ ತಂದ ನಿಂಬೆಹಣ್ಣು, ತೆಂಗಿನಕಾಯಿ, ಗಾಡಿಗ ಮಂತ್ರಿಸಿದ ಅಕ್ಕಿಕಾಳುಗಳನ್ನು ಮಣೆಯ ಮೇಲಿಡುವರು. ಎರಡೂ ದೀಪಗಳ ಸುಳಿ ಒಂದಾಗಿ ಕೂಡಬೇಕು. ಆವಾಗ 'ದೀಪ ಕೂಡಿತು'ಎನ್ನುವರು. ದೀಪದ ಸುಳಿಗಳು ಒಂದಕ್ಕೊಂದು

ಕೂಡಿದರೆ ಮರಣ ಹೊಂದಿದವನಿಗೆ ಸಮಾಧಾನವಾಗಿದೆ. ಎಂದು ಭಾವಿಸುತ್ತಾರೆ. ದೀಪಗಳು ಏಕವಾಗಿ ಕೂಡದಿದ್ದರೆ ಮೃತನ ಆತ್ಮಕ್ಕೆ ತೃಪ್ತಿಯಾಗಿಲ್ಲವೆಂದು ಭಾವಿಸುತ್ತಾರೆ. ದೀಪ ಕೂಡದಿದ್ದಾಗ ಗಾಡಿನ ಒಮ್ಮೊಮ್ಮೆ ಬೆಳಗಾಗುವ ತನಕ ಗಾಡಿನ ಹೊಡೆಯುವುದುಂಟು. ಮೃತನ ಆತ್ಮವನ್ನು ಊರಿನ ಭೂತ ಅನ್ನ ಹಾಕುವವರೆಗೆ ಹಿಡಿದಿರುತ್ತದೆ ಎಂಬ ನಂಬಿಕೆ. ಆ ದಿವಸ ಭೂತಕ್ಕೆ ಜಕಣೆಯನ್ನು ನಮ್ಮ ವಶಕ್ಕೆ ಬಿಟ್ಟುಕೊಡು ಎಂದು ಗಾಡಿಗ ಭೂತನಿಗೆ ಕೋಳಿಯನ್ನು ಬಲಿ ಕೊಡುತ್ತಾರೆ. ಮದುವೆಯಾಗದ ಗಂಡು ಮಕ್ಕಳ ಮರಣ ಹೊಂದಿದರೆ ಹುಗಿಯುತ್ತಾರೆ. ಮಕ್ಕಳು ಮರಣ ಹೊಂದಿದರೆ ಯಾವ ಶವಸಂಸ್ಕಾರ ಕಾರ್ಯವಿಲ್ಲದೇ ಹುಗಿಯುವರು. ಸೊರಬ, ಹೊಸನಗರಗಳಲ್ಲಿ ಶವವನ್ನು ಹುಗಿಯುವಾಗ ಕುಳಿತ ಭಂಗಿಯಲ್ಲಿ ಹೆಣವನ್ನುಗುಂಡಿಯಲ್ಲಿಟ್ಟು ಮಣ್ಣು ಮುಚ್ಚುವರು. ಉಳಿದ ಕಡೆ ಮಲಗಿಸಿಯೇ ಮಣ್ಣು ಮುಚ್ಚುವರು. ಶವದ ಗುಂಡಿ ಐದು ಅಡಿ ಆಳ ಆರು ಅಡಿ ಉದ್ದ ನಾಲ್ಕು ಅಡಿ ಅಗಲವಿರುತ್ತದೆ. ಉಳಿದ ಎಲ್ಲಾ ಪದ್ಧತಿಗಳು ಸುಡುವಾಗ ಇರುವ ಆಚರಣೆಗಳಿರುತ್ತವೆ. ಬೆಂಕಿಯನ್ನು ಮಾತ್ರ ತೆಗೆದುಕೊಂಡು ಹೋಗುವುದಿಲ್ಲ. ಪರಿಶಿಷ್ಟ ಬುಡಕಟ್ಟು ಜನಾಂಗೀಯ ಮಾಹಿತಿ ೧೯೬೧ ರಲ್ಲಿ ಹಸಲರು ಬುಡಕಟ್ಟಿನಲ್ಲಿ ಶವಸಂಸ್ಕಾರದ ಬಗ್ಗೆ ವಿವರವಾದ ಮಾಹಿತಿಯನ್ನು ನೀಡಲಾಗಿದೆ. ಹಸಲರಲ್ಲಿ ಕುಷ್ಠರೋಗಿಗಳು, ಗರ್ಭಿಣಿಯರು ಮರಣ ಹೊಂದಿದರೆ ಸುಡುತ್ತಾರೆ. ವಿಧವೆಯರು ಮರಣ ಹೊಂದಿದರೆ ಶವಸಂಸ್ಕಾರ ಪದ್ಧತಿಗಳು ರೂಢಿಯಲ್ಲಿವೆ. ಮದುವೆಯಾಗದ ಗಂಡು ಅಥವಾ ಹೆಣ್ಣು ಮರಣ ಹೊಂದಿದರೆ ಆ ಹೆಣವನ್ನು ಕಂಬಳಿ ಅಥವಾ ಉಣ್ಣೆ ಬಟ್ಟೆಯನ್ನು ಸುತ್ತಿ ಒಂದು ಬಿದರಿನ ಕೋಲಿಗೆ ಕಟ್ಟಿ ಹೊತ್ತುಕೊಂಡು ಹೋಗುತ್ತಾರೆ. ಮದುವೆಯಾದವರು ಮರಣ ಹೊಂದಿದರೆ ಎರಡು ಬಿದಿರಿನ ಕೋಲುಗಳನ್ನು ಇಟ್ಟು ಮಧ್ಯದಲ್ಲಿ ಅಡ್ಡತುಂಡುಗಳನ್ನು ಜೋಡಿಸಿ ಹೆಣವನ್ನು ಒಯ್ಯುತ್ತಾರೆ. ಒಬ್ಬ ವ್ಯಕ್ತಿ ಸಾಯುವ ಹಂತದಲ್ಲಿದ್ದರೆ ಅವನ ಮಕ್ಕಳು ಹಾಗೂ ಸಂಬಂಧಿಕರು ಅವನ ಬಾಯಲ್ಲಿ ನೀರು ಬಿಡುತ್ತಾರೆ. ಮರಣ ವಾರ್ತೆಯನ್ನು ಕೂಡಲೇ ಎಲ್ಲಾ ಸಂಬಂಧಿಕರಿಗೆ ದೂತರನ್ನು ಕಳುಹಿಸಿ ಅಥವಾ ತಾವೇ ಹೋಗಿ ವಿಷಯ ತಿಳಿಸುತ್ತಾರೆ. ಹೆಣವನ್ನು ಶುದ್ಧವಾದ ಬಟ್ಟೆಯಿಂದ ಮುಚ್ಚುತ್ತಾರೆ. ಹೆಣವು ಹೆಣ್ಣಿನದಾದರೆ ಅದನ್ನು ಹೊಸ ಸೀರೆಯಿಂದ ಮುಚ್ಚುತ್ತಾರೆ. ಸಂಜೆ ಮರಣ ಹೊಂದಿದ ಆರರಿಂದ ಎಂಟು ಗಂಟೆಯೊಳಗೆ ಹೂಳುತ್ತಾರೆ. ಸಂಜೆ ಮರಣ ಹೊಂದಿದರೆ ಬೆಳಗಿನವರೆಗೆ ಇಟ್ಟುಕೊಂಡಿರುತ್ತಾರೆ. ಎಲ್ಲಾ ಸಂಬಂಧಿಕರು ಬಂದ ಮೇಲೆ ಹೆಣಕ್ಕೆ ಹೂವಿನ ಹಾರ ಹಾಕಿ ಊದುಬತ್ತಿ ಬೆಳಗುವರು. ತೆಂಗಿನಕಾಯಿ ಒಡೆಯುವರು. ಹೆಂಡತಿಯಿದ್ದರೆ ಹೆಣದ ಪಕ್ಕದಲ್ಲಿ ಕುಳಿತಿರುತ್ತಾಳೆ. ಆ ಸಂದರ್ಭದಲಿ ಆಕೆ ಹೆಣಕ್ಕೆ ವೀಳ್ಯಾ ಕೊಡುವ ಶಾಸ್ತ್ರವಿದೆ. ಆ ಸಮಯದಲ್ಲಿ ಆಕೆಯ ಸೋದರ ಅಥವಾ ತಂದೆ ಅವಳಿಗೆ ಹೊಸ ಸೀರೆಯನ್ನು ಉಡುಗೊರೆಯಾಗಿ ಕೊಡುತ್ತಾರೆ. ಈ ಸಂದರ್ಭದಲ್ಲಿ ಹೆಣದ ಗುಂಡಿ ತಯಾರಾಗಿರುತ್ತದೆ. ದೇಹ ಸುಡುವುದಾದರೆ ಕಟ್ಟಿಗೆಯ ರಾಶಿ ಹಾಕಿರುತ್ತಾರೆ. ಹೆಣವನ್ನು ಹೊತ್ತುಕೊಂಡು ಹೋಗುವಾಗ ಎಲ್ಲರೂ ಹಿಂದೆಯೇ ಹೋಗುತ್ತಾರೆ. ಸೊರಬ ತಾಲ್ಲೂಕಿನಲ್ಲಿ ಹೆಣದ ಬಾಯಿಗೆ

ಗಂಜಿ ಬಿಡುತ್ತಾರೆ. ನೀರು ಮೊಗೆ ಒಡೆದು ಹೆಣ ಹೂಳಿ ವಾಪಸ್ಸು ಬರುತ್ತಾರೆ. ಕೆಲವು ಕಡೆ ಹೆಣವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗಿ ಹೂತು, ಹೂವು ಹಾಕಿ ಊದುಬತ್ತಿ ಬೆಳಗುತ್ತಾರೆ. ನಂತರ ಹಿರಿಯ ಮಗ ನೀರು ಮೊಗೆಯನ್ನು ಹೊತ್ತು ಮೂರು ಸುತ್ತು ಹಾಕಿ ಮಡಕೆಯನ್ನು ಒಡೆಯುತ್ತಾನೆ. ಹೆಣವನ್ನು ಹೂಳುವಾಗ ಮತ್ತು ಸುಡುವಾಗಲೂ ಇದೇ ಪದ್ಧತಿಯನ್ನು ಅನುಸರಿಸುವರು. ಹೂಳುವಾಗ ಹಿರಿಯಮಗ ಮೊದಲು ಒಂದು ಇಡಿಮಣ್ಣು ಹಾಕುತ್ತಾನೆ. ಸಮಾಧಿಯಲ್ಲಿ ತಲೆಯ ಕಡೆ ವೀಳ್ಯಾ ಇಟ್ಟು ಸ್ವಲ್ಪ ನೀರು ಹಾಕಿ ಊದುಬತ್ತಿ ಹಚ್ಚುತ್ತಾರೆ. ಶವ ಸಂಸಸ್ಕಾರದಲ್ಲಿ ಪಾಲ್ಗೊಂಡವರೆಲ್ಲರೂ ಸ್ನಾನ ಮಾಡಿ ಮನೆಗೆ ಹೋಗುತ್ತಾರೆ. ಮನೆಯಲ್ಲಿ ಸತ್ತ ವ್ಯಕ್ತಿಯ ಜಾಗವನ್ನು ಸ್ವಚ್ಛಗೊಳಿಸುತ್ತಾರೆ. ಆ ದಿನ ಸತ್ತವರ ಮನೆಯಲ್ಲಿ ಮಾಡುವ ಅಡುಗೆಯನ್ನು 'ಹುಳಿಕೂಳು'ಎನ್ನುತ್ತಾರೆ. ಅದನ್ನು ಕುಟುಂಬದ ಸಾಮಾನ್ಯ ಸದಸ್ಯರು ಮಾತ್ರ ಊಟ ಮಾಡುತ್ತಾರೆ. ರಾತ್ರಿಯಲ್ಲಿ ಹೆಣ ಸುಟ್ಟ ಭಸ್ಮವನ್ನು ಸತ್ತ ಜಾಗದಲ್ಲಿ ಹರಡಿ, ಒಂದು ಪಾತ್ರೆ ತುಂಬಾ ನೀರು ತುಂಬಿಡುತ್ತಾರೆ. ಆ ಭಸ್ಮದ ಮೇಲೆ ಸತ್ತವರು ಮುಂದಿನ ಜನ್ಮದಲ್ಲಿ ಪಡಯುವ ಜನ್ಮದ ಕುರುಹು ಸಿಗುತ್ತದೆ ಎನ್ನುವ ನಂಬಿಕೆಯಿದೆ. ಮಾರನೇ ದಿನ ಬೂದಿಯನ್ನು ಎಚ್ಚರಿಕೆಯಿಂದ ಪರೀಕ್ಷಿಸುತ್ತಾರೆ. ಅಲ್ಲಿ ಪ್ರಾಣಿ, ಪಕ್ಷಿಯ ಹೆಜ್ಜೆ ಗುರುತಿಗಾಗಿ ಹುಡುಕುತ್ತಾರೆ ಮಾರನೇ ದಿನ ಹಿರಿಯಮಗ ಹೆಣವನ್ನು ಸುಟ್ಟಲ್ಲಿ ಹಾಗೂ ಸುಡಲು ಹೋಗುವ ದಾರಿಯ ಮಧ್ಯದಲ್ಲಿ ಹೆಣವನ್ನು ಇಳಿಸಿದ್ದರೆ ಆ ಜಾಗದಲ್ಲಿ ಅನ್ನವನ್ನು ನೈವೇದ್ಯ ಮಾಡುತ್ತಾನೆ. ಬೂದಿಯನ್ನು ಒಟ್ಟುಗೂಡಿಸಿ ಅದರ ಮೇಲೆ ಯಾವುದಾದರೂ ಹೂವಿನಗಿಡ ಹಾಕುತ್ತಾರೆ. ಮನೆಯ ಹಿರಿಯ ಮಗ ತಲೆ ಮತ್ತು ಗಡ್ಡ ಬೋಳಿಸಿಕೊಳ್ಳುತ್ತಾನೆ. ಸಾವಿರ ಸೂತಕ ಒಂಭತ್ತರಿಂದ ಹನ್ನೊಂದು ದಿನವಿರುತ್ತದೆ ಅಥವಾ ಶುಚಿಕಾರ್ಯ ಆಗುವ ತನಕ ಇರುತ್ತದೆ. ಶುಚಿಕಾರ್ಯ ದಿನ ಮನೆಯನ್ನೆಲ್ಲಾ ತೊಳೆಯುತ್ತಾರೆ. ಸಗಣಿಯಿಂದ ಸಾರಿಸುತ್ತಾರೆ. ಬ್ರಾಹ್ಮಣ ಭಟ್ಟರಿಂದ ಅಥವಾ ಲಿಂಗಾಯಿತ ಜಂಗಮನಿಂದ ತಂದ ತೀರ್ಥವನ್ನು ಸಿಂಪಡಿಸುತ್ತಾರೆ. ಅಂದು ಅಡುಗೆ ಮಾಡಿ ಊಟ ಮಾಡುತ್ತಾರೆ. ಸಂಜೆ ಮಾಂಸದ ಊಟವಿರುತ್ತದೆ. ಆಗ ಪ್ರತಿ ಮನೆಗೊಬ್ಬರು ಬಂದು ಊಟ ಮಾಡುತ್ತಾರೆ. ಸತ್ತವರ ಆತ್ಮವನ್ನು ಸತ್ತ ಹಿರಿಯರೊಡನೆ ಸೇರಿಸುವ ಸಾಂಕೇತಿಕ ಕಾರ್ಯಕ್ರಮ ಇದಾಗಿದೆ. ದೇವರ ಕೋಣೆಯಲ್ಲಿ ದೇವರಿಡುವಲ್ಲಿ ಒಂದು ನೀರು ತುಂಬಿದ ಮಡಕೆಯಿಟ್ಟು ಹೂವು ಇಟ್ಟು ಸಿಂಗರಿಸುತ್ತಾರೆ. ಅದರ ಪಕ್ಕದಲ್ಲಿ ಧೋತಿ ಅಥವಾ ಸೀರೆ ಇಡುತ್ತಾರೆ. ಮನೆಯ ಹಿರಿಯ ಮಗನಿಂದ ಪೂಜೆಯಾಗುತ್ತದೆ. ನಂತರ ಬಂದವರೆಲ್ಲಾ ಪೂಜೆ ಮಾಡುತ್ತಾರೆ. ಮಡಕೆಯ ಎದುರಿಗೆ ಒಂದು ಹರಳೆಣ್ಣೆ ದೀಪ ಇಡುತ್ತಾರೆ. ಅದರಲ್ಲಿ ಎರಡು ಬತ್ತಿಗಳನ್ನು ಹತ್ತಿರದಲ್ಲಿ ಇಟ್ಟಿರುತ್ತಾರೆ. ದೀಪ ಹಚ್ಚಿದಾಗ ಅವೆರಡರ ಬತ್ತಿಗಳ ಜ್ವಾಲೆ ಕೂಡಿದರೆ ಸತ್ತವರ ಆತ್ಮ ಪೂರ್ವಜರೊಡನೆ ಕೂಡಿತು ಎಂದುಅರ್ಥ, ದೀಪ ಕೂಡುವವರೆಗೆ ಊಟ ಮಾಡುವುದಿಲ್ಲ. ತೀರ್ಥಹಳ್ಳಿ ತಾಲ್ಲೂಕಿನಲ್ಲಿ ಈ ಕಾರ್ಯಕ್ರಮದಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಅಲ್ಲಿ ಮನೆ ಎದುರಿಗೆ ದೀಪ ಇಡುತ್ತಾರೆ. ನಂತರ ಸತ್ತವರ ಆತ್ಮ ಮನೆಯೊಳಗೆ ಬರಲಿ ಎಂದು ಕಾಯುತ್ತಾರೆ. ಆತ್ಮ ಒಳಗೆ

ಬರುವಾಗ ದೀಪ ಆರಿದರೆ ಬಂತು ಎಂದು ಅರ್ಥ. ಬರದಿದ್ದರೆ ಇನ್ನಷ್ಟು ಪೂಜೆ ಮಾಡಿ ಕಾಯುತ್ತಾರೆ. ಕಾಡಿಗೆ ಬಂದು ಇದನ್ನು ಮಾಡುತ್ತಾರೆ. ಈ ಕಾರ್ಯಕ್ರಮವಾದ ಮೇಲೆ ಕೊಯ್ದು ಸಾರುಮಾಡಿ ಊಟ ಮಾಡುತ್ತಾರೆ. ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ ಸಂಪುಟ ೫ ಪುನರ್ಮುದ್ರಣ ೧೯೮೮(ಎಲ್.ಕೆ.ಅನಂತಕೃಷ್ಣ ಅಯ್ಯರ್ ಮತ್ತು ಹೆಚ್. ವಿ. ನಂಜುಂಡಯ್ಯ)ರಲ್ಲಿ ಶವಸಂಸ್ಕಾರದ ಬಗ್ಗೆ ಈ ರೀತಿ ಪ್ರಸ್ತಾಪ ಮಾಡಿದ್ದಾರೆ. ಹಸಲರಲ್ಲಿ ಸತ್ತವರನ್ನು ಹೂಳುತ್ತಾರೆ ಇಲ್ಲವೇ ಸುಡುತ್ತಾರೆ. ಯಲ್ಲಮ್ಮ ದೇವರ ತಾಳಿ ಕಟ್ಟಿಕೊಂಡವರು ಗುತ್ಯಮ್ಮನ ದಾರ ಕಟ್ಟಿಕೊಂಡವರನ್ನು ಸುಡುತ್ತಾರೆ. ಹೊಲೆಯನಿಗೆ ಶವಸಂಸ್ಕಾರದಲ್ಲಿ ಪ್ರಮುಖ ಪಾತ್ರ, ಹೊಲೆಯ ಹೆಣ ಹೂಳಲು ಗುಂಡಿ ತೋಡುತ್ತಾನೆ ಇಲ್ಲವೇ ಸುಡಲು ಕಟ್ಟಿಗೆ ಕೂಡಿಡುತ್ತಾನೆ. ಅವನು ಮಡಕೆಯಲ್ಲಿ ಬೆಂಕಿಯಿಟ್ಟುಕೊಂಡು ಶವಯಾತ್ರೆಯನ್ನು ಮುನ್ನಡೆಸುತ್ತಾನೆ. ಹಿಂದೆ ದೊಂದಿಯನ್ನು ಹಿಡಿದು ಹಸಲರು ಬರುತ್ತಿದ್ದರು. ಹೆಣ ಹೂಳುವ ಸ್ಥಳದಿಂದ ಅರ್ಧದಾರಿ ಇರುವಾಗ ಕೊಡದಲ್ಲಿದ್ದ ನೀರನ್ನು ಹಾಕಿ ಕೊಡ ಒಡೆಯುತ್ತಾರೆ. ಸ್ಮಶಾನದಲ್ಲಿ ಹೆಣವನ್ನು ಕಟ್ಟಿಗೆ ರಾಶಿಯ ಸುತ್ತಮುತ್ತ ಹಾಕುತ್ತಾರೆ. ನಂತರ ಕಟ್ಟಿಗೆ ಮೇಲೆ ಉತ್ತರಕ್ಕೆ ತಲೆಯಿರುವಂತೆ ಶವವನ್ನ ಇಡುತ್ತಾರೆ. ಹೊಲೆಯ ಬೆಂಕಿ ಇಡುತ್ತಾನೆ. ನಂತರ ಹಸಲರು ದೊಂದಿಯಿಂದ ಸುತ್ತ ಬೆಂಕಿಯಿಡುತ್ತಾರೆ. ಎಲ್ಲಾ ಹಸಲರು ಒಂದೊಂದು ಸೌದೆ ತುಂಡು ತೆಗೆದುಕೊಂಡು ಶವದ ಮೇಲೆ ಹಾಕುವರು. ಸೇವೆಗಾಗಿ ಹೊಲೆಯನಿಗೆ ಎರಡು ರೂಪಾಯಿ ಕೊಡುತ್ತಾರೆ. ಎಲ್ಲರೂ ಸ್ನಾನ ಮಾಡಿ ಮನೆಗೆ ಹೋಗುತ್ತಾರೆ. ಹನ್ನೆರಡನೇ ದಿನ ಬೂದಿ ಶೇಕರಿಸುತ್ತಾರೆ. ರಾಶಿ ಮಾಡಿ ಹಾಲು ಬಿಡುವರು. ಶವಸಂಸ್ಕಾರಕ್ಕೆ ಬಂದವರು ಕ್ಷೌರ ಮಾಡಿಕೊಂಡು ಸ್ನಾನ ಮಾಡುತ್ತಾರೆ. ವಡೆಮಾಡಿ ಸತ್ತವರ ಆತ್ಮಕ್ಕೆ ನೈವೇದ್ಯ ಮಾಡುವರು. ಮನೆಯ ಸುತ್ತ ತೀರ್ಥ ಹಾಕಿ, ತಾವೂ ಕುಡಿದು ಶುದ್ಧಿ ಮಾಡಿಕೊಳ್ಳುವರು. ಪ್ರತಿವರ್ಷ ಸತ್ತ ಪೂರ್ವಜರ ಆತ್ಮವನ್ನು ಕಳಸಕ್ಕೆ ಬರಮಾಡಿಕೊಂಡು ಪೂಜಿಸುತ್ತಾರೆ. ಕಳಸದ ಪಕ್ಕದಲ್ಲಿ ಬೆಳ್ಳಿಯ ಬೊಟ್ಟು ಇಟ್ಟು ಸಾಂಕೇತಿಕವಾಗಿ ಸತ್ತವರನ್ನು ಗುರುತಿಸುತ್ತಾರೆ. ಹಸಲರಲ್ಲಿ ಇನ್ನೊಂದು ವಿಚಿತ್ರ ನಂಬಿಕೆಯಿದೆ. ಯಾರಾದರೂ ಸತ್ತರೆ ಅವರ ದೇಹಕ್ಕೆ ಇನ್ನೊಬ್ಬರ ಭೂತ ಸೇರುತ್ತದೆ ಎಂಬ ನಂಬಿಕೆ ಇದೆ. ಗಾಡಿಗ ಅಥವಾ ಮಾಂತ್ರಿಕ ಅದು ಯಾರ ಪ್ರೇತಾತ್ಮವೆಂದು ಹೇಳುತ್ತಾನೆ. ಅವನು ಕವಡೆ ಹಾಕಿ ಪ್ರೇತವನ್ನು ಗುರುತಿಸುವನು. ನಂತರ ಕುರಿ ಅಥವಾ ಕೋಳಿ ಬಲಿ ಕೊಟ್ಟು ಶಾಂತಿ ಮಾಡ ಬೇಕಾಗುತ್ತದೆ. ನಂತರ ಭೂತ ಬಿಟ್ಟಿತು ಎನ್ನುವ ನಂಬಿಕೆ ಇದೆ. ಇಲ್ಲಿ ಹೆಚ್ಚು ಕಡಿಮೆ ಸುಸಂಸ್ಕೃತ ನಾಗರಿಕ ಜನಾಂಗವು ಕೂಡ ಆಚರಿಸುವ ಮರಣಕಾರ್ಯವಾದ ಶ್ರಾದ್ಧಕ್ಕೂ, ಹಸಲರ ಆಚರಣೆಗೂ ಸಾಮ್ಯತೆಯಿದೆ.

ಹಸಲರು ಹಿಂದೂ ಧರ್ಮದ ಸಂಪ್ರದಾಯಗಳನ್ನೇ ಆಚರಿಸುವರು. ಇವರದೇ ಆದ ಬುಡಕಟ್ಟು ನಂಬಿಕೆಗಳು ಇಲ್ಲ. ಇವರು ಹೆಚ್ಚಾಗಿ ಹವ್ಯಕ ಬ್ರಾಹ್ಮಣರ ಸಂಪರ್ಕದಲ್ಲಿ ಇರುವುದರಿಂದ ಅವರ ಅಡಿಕೆ ತೋಟ, ಮನೆಗಳಲ್ಲಿ ಕಾರ್ಮಿಕರಾಗಿ ದುಡಿಯುತ್ತಿರುವುದರಿಂದ ಆ ಜನಾಂಗದ ಪ್ರಭಾವ ಇವರ ಮೇಲೆ ಆಗಿದೆ.ಸೊರಬ, ಹೊಸನಗರಗಳಲ್ಲಿ ಲಿಂಗಾಯಿತರ ಮನೆಗಳಲ್ಲಿ ಕಾರ್ಮಿಕ

ರಾಗಿರುವುದರಿಂದ ಲಿಂಗಾಯಿತರ ಪ್ರಭಾವ ಇವರ ಮೇಲೆ ಆಗಿದೆ. ಹಸಲರು ಹಲವು ದೇವತೆಗಳನ್ನು ಪೂಜಿಸುವವರು. ಮುಖ್ಯವಾಗಿ ಅವರು ಪೂಜಿಸುವ ದೈವಗಳು ಚೌಡಿ, ಭೂತ, ಯಕ್ಷಿ, ಮಾಸ್ತಿ, ಸೊರಬ, ಶಿಕಾರಿಪುರ ಭಾಗದ ಹಸಲರು ಚಂದ್ರಗುತ್ತಿ(ಗುತ್ಯಮ್ಮ)ಯ ಭಕ್ತರು, ಹೊಸನಗರ ಭಾಗದವರು ಕೋಡೂರು ಜೇನುಕಲ್ಲಪ್ಪ, ಕಾರ್ಗಡಿ ಗಣಪತಿ, ಅಲಾಬಿ ದೇವರಿಗೆ ನಡೆದುಕೊಳ್ಳತ್ತಾರೆ. ಕೆಲವರು ಮನೆಯಲ್ಲಿ ಮುಡುವಿನ ಅಂಡೆಗಳನ್ನು ಇಟ್ಟಿರುತ್ತಾರೆ. ಶನಿವಾರ, ಸೊಮವಾರ, ಶುಕ್ರವಾರ ಸ್ನಾನ ಮಾಡಿ ಶುದ್ಧರಾಗಿ ಇಷ್ಟದೇವರನ್ನು ಪೂಜೆ ಮಡಿ ಮುಡುವಿನ ಅಂಡೆಗಳಿಗೆ ಇಪ್ಪತ್ತೈದು ಪೈಸೆ, ಐವತ್ತು ಪೈಸೆ ಮುಡುಪು ಹಾಕುತ್ತಾರೆ. ಆ ದಿವಸ ಮಾಂಸ, ಮೀನು ತಿನ್ನುವುದಿಲ್ಲ. ವರ್ಷಕ್ಕೋ ಅಥವಾ ಎರಡು ವರ್ಷಕ್ಕೋ ಧರ್ಮಸ್ಥಳ, ಕೊಲ್ಲೂರು, ಚಂದ್ರಗುತ್ತಿ, ಸೋಡಿಗದ್ದೆಗಳಿಗೆ ಹೋಗಿ ಮುಡುಪು ಸಲ್ಲಿಸಿ ಬರುತ್ತಾರೆ. ಸಾಗರ ಮತ್ತು ಸೊರಬ ತಾಲೂಕಿನ ಕಡೆಯವರು ಸೋಡಿಗದ್ದೆ ಮಾಸ್ತಿಗೆ ನಡೆದುಕೊಳ್ಳುವರು. ಶಿಕಾರಿಪುರ ಹಸಲರು ಕೊಲ್ಲೂರು ಮೂಕಾಂಭಿಕೆಯ ಭಕ್ತರು. ಮೂಕಾಂಭಿಕೆಯ ರಾಗಿ ಗುಗ್ಗೋಳಿ ಅಮ್ಮನ ಪೂಜೆ ಹಲಸರು ಜನಾಂಗದವರಿಂದ ನಡೆಯುತ್ತದೆ. ಆದ್ದರಿಂದ ಆ ಭಾಗದ ಹಸಲರು ಮೂಕಾಂಬಿಕೆ ಮತ್ತು ಗುಗ್ಗೋಳಿ ಅಮ್ಮನವರ ಭಕ್ತರು. ಭದ್ರಾವತಿ ಮತ್ತು ತೀರ್ಥಹಳ್ಳಿ ತಾಲ್ಲೂಕಿನ ದೊಡ್ಮನೆ, ಹೂವಿನಮನೆ, ವಂದಾನೆ ಗೊರ್ಲಮನೆ, ಗುಬ್ಬಗೋಡು ಹಸಲರಿಗೆ ಇಟಗಿ ರಾಮೇಶ್ವರ ರಥೋತ್ಸವದ ದಿವಸ ದೊಡ್ಡ ಹಬ್ಬ. ಆ ದಿವಸ ಸೊರ್ಲು ಮೀನು ಸಾರು, ರೊಟ್ಟಿ ತಯಾರಿಸಿ ಮಧ್ಯಾಹ್ನ ಊಟ ಮಾಡಿ ಇಟಗಿ ಜಾತ್ರೆಗೆ ಹೋಗುತ್ತಾರೆ. ರಥೋತ್ಸವದಲ್ಲಿ ಪಾಲ್ಗೊಂಡು ಬರುತ್ತಾರೆ. ಬಿಳಗಿ ಮಾರ್‍ಯಮ್ಮ ಕೂಡ ಹಸಲರ ಆರಾಧ್ಯದೈವ. ಶಿರಸಿಯ ಹಸಲರು ಶಿರಸಿ ಮಾರಿಕಾಂಬೆಗೆ ನಡೆದುಕೊಳ್ಳುವರು. ಸಾಗರದ ಹಸಲರು ಬೆಳ್ಳಣ್ಣೆ ಶಂಭುಲಿಂಗೇಶ್ವರ ಮತ್ತು ಶಿರವಂತೆಯ ತ್ರಿಪರಾಂತಕೇಶ್ವರನ ರಥೋತ್ಸವಗಳಲ್ಲಿ ಭಾಗವಹಿಸಿ ಪೂಜೆ ಸಲ್ಲಿಸುವರು. ಸಾಗರ ತಾಲ್ಲೂಕಿನ ಸಮಸ್ತ ಹಸಲರಿಗೆ ಸಿಗಂದೂರು ಚೌಡೇಶ್ವರಿ ಅಧಿದೇವತೆ, ಅವಳ ಅಪ್ಪಣೆಯಿಲ್ಲದೆ ಇವರು ಶುಭಕಾರ್ಯಗಳನ್ನು ಮಾಡುವ ಹಾಗಿಲ್ಲ. ಮದುವೆ ಮುಂಜಿಗೆ ಚೌಡೇಶ್ವರಿ ದೇವಿಯ ಅಪ್ಪಣೆ ಬೇಡುತ್ತಾರೆ. ಕಾಯಿಲೆ ಗುಣಪಡಿಸಲು, ಕಳ್ಳತನ ಪತ್ತೆ ಮಾಡಲು, ಹಸು ಹಾಲು ಕರೆಯದೇ ಇದ್ದಲ್ಲಿ, ಜಾನವಾರುಗಳು ತಪ್ಪಿಸಿಕೊಂಡರೆ, ಹೆಣ್ಣುಮಕ್ಕಳ ಶೋಧನೆಗೆ, ಮುಂತಾದ ಕುಟುಂಬದ ಎಲ್ಲಾ ಸಮಸ್ಯೆಗಳ ಪರಿಹಾರಕ್ಕೆ ಚೌಡೇಶ್ವರಿಗೆ, ಹರಕೆ ಹೊರುವರು. ಬಚ್ಚಗಾರು ಮತ್ತು ಸಾಗರ ಗಣಪತಿ ದೇವರುಗಳಿಗೆ ಆಯಾಯ ಭಾಗದ ಹಸಲರು ನಡೆದುಕೊಳ್ಳುವರು. ಇತ್ತೀಚಿಗೆ ಹಸಲರಲ್ಲಿ ಶನೀಶ್ವರ ದೇವರು ಕೆಲವರ ಮೈಮೇಲೆ ಬಂದು ಹೇಳಿಕೆ ಮಾಡುತ್ತಾನೆ ಎಂದು ಹೇಳಿಕೊಳ್ಳುತ್ತಾರೆ. ಸಾಗರದ ಸಿಂಗಂಧೂರು, ಶೆಟ್ಟಿಸರ, ಹೊಸನಗರದ ಮತ್ತೀಮನೆ ಮತ್ತು ಮಡವಿ, ಇನ್ನಿತರ ಗ್ರಾಮಗಳ ಹಸಲರು ಏರಿಯಾಗಳಲ್ಲಿ ಶನೀಶ್ವರ ದೇವಸ್ಥಾನಳು ತಲೆ ಎತ್ತಿವೆ. ನೂರಾರು ಜನ ಭಕ್ತಾದಿಗಳು ಈ ಕ್ಷೇತ್ರಗಳಿಗೆ ಭೇಟಿ ನೀಡುವರು. ಶನೀಶ್ವರ ಮೈಮೇಲೆ ಬರುತ್ತೆ ಎಂದು ಹೇಳಿಕೊಳ್ಳುವರು. ಮಾಂಸಾಹಾರವನ್ನು ತ್ಯಜಿಸಿ ದಿನನಿತ್ಯ ಸ್ನಾನ ಮಾಡಿ ಕಠಿಣವಾದ ವ್ರತವನ್ನು ಮಾಡುವರು. ಹಿಂದೆ

ಹಸಲರಿಗೆ ಹಿಂದೂ ದೇವಾಲಯಗಳಿಗೆ ಪ್ರವೇಶ ಇರಲಿಲ್ಲ. ಆದರೆ ಸ್ವಾತಂತ್ರ್ಯಾನಂತರದಲ್ಲಿ ಈ ನಿರ್ಬಂಧವಿಲ್ಲ. ಎಲ್ಲರಂತೆ ದೇವಾಲಯಗಳಿಗೆ ಹೋಗುತ್ತಾರೆ. ಸರ್ಕಾರದ 'ಆರಾಧನಾ' ಯೋಜನೆಯಿಂದ ಹಸಲರ ಏರಿಯಾಗಳಲ್ಲಿರುವ ದೇವತೆಗಳಾದ ಚೌಡಮ್ಮ, ಭೂತಪ್ಪ, ಯಕ್ಷಿ, ಶನೀಶ್ವರಗಳಿಗೆ ಗುಡಿ ಗೋಪುರಗಳು ನಿರ್ಮಾಣವಾಗಿವೆ. ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ ಸಂಪುಟ ೫(ಪುನರ್ ಮುದ್ರಣ ೧೯೮೮ ಎಲ್.ಕೆ. ಅನಂತಕೃಷ್ಣ ಅಯ್ಯರ್, ಎಚ್.ವಿ. ನಂಜುಂಡಯ್ಯ)ರಲ್ಲಿ ಹಸಲರ ಧರ್ಮವನ್ನು ಕುರಿತು ಹೀಗೆ ಹೇಳಿದೆ. ಹಸಲರ ಧರ್ಮ, ಆತ್ಮಗಳು ಪೂಜಿಸುವುದನ್ನು ಒಳಗೊಂಡಿದೆ. ಅದರಲ್ಲೂ ಸತ್ತ ಪೂರ್ವಜರ ಆತ್ಮಗಳನ್ನು ಪೂಜಿಸುವುದು, ವರ್ಷಕ್ಕೊಂದು ಬಾರಿ ಹಾಲುಮರದ(ಬಿಳಿರಸ ಹೊರಡುವ ಮರ) ಕೆಳಗೆ ಪೂರ್ವಜರ ಹೆಸರಿನಲ್ಲಿ ಕಲ್ಲುಗಳನ್ನಿಟ್ಟು ಪೂಜಿಸುವರು. ಅವುಗಳಿಗೆ ಹಣ್ಣು, ಕಾಯಿ, ಕೋಳಿ ಕೊಯ್ದು ನೈವೇದ್ಯ ಮಾಡುತ್ತಾರೆ. ಹೀಗೆ ಪೂಜಿಸುವಾಗ ಯಾರಾದರೂ ವಾಂತಿ ಮಾಡಿದರೆ ಮುಂದೆ ಅವರ ಕುಟುಂಬದಲ್ಲಿ ಯಾರಾದರೂ ಕಾಯಿಲೆ ಬೀಳುತ್ತಾರೆ ಎಂದು ನಂಬುತ್ತಾರೆ. ಅವರ ಆತ್ಮಗಳು ಕನಸಿನಲ್ಲಿ ಬಂದು ಆಹಾರ ಕೇಳುತ್ತವೆ ಎಂಬ ನಂಬಿಕೆ ಇದೆ. ಸತ್ತ ಪ್ರತಿಯೊಬ್ಬರ ನೆನಪಿಗೂ ಒಂದೊಂದು ಕಲ್ಲನ್ನು ಇಡುತ್ತಾರೆ. ಗಾಡಿಗ ಅವರ ಮಾಂತ್ರಿಕ, ಅವನು ಭೂತ, ಪ್ರೇತಗಳನ್ನು ನಿಯಂತ್ರಿಸುತ್ತಾನೆ. ಕುಟುಂಬದವರಿಗೆ ತೊಂದರೆಯಾದರೆ ಗಾಡಿಗ ಬಂದು ಭೂತ ಪ್ರೇತಗಳನ್ನು ಬಿಡಿಸುತ್ತಾನೆ. ಇದಲ್ಲದೆ ವೀರಭದ್ರ, ಧರ್ಮಸ್ಥಳದ ಮಂಜುನಾಥ ಹಾಗೂ ಇತರ ದೇವರನ್ನು ಪೂಜಿಸುತ್ತಾರೆ. ನಾಗರಹಾವುಗಳುಸತ್ತಿರಲಿ, ಬದುಕಿರಲಿ ಆರಾಧಿಸುತ್ತಾರೆ.. ಬದುಕಿದ್ದರೆ ನಮಸ್ಕಾರ ಮಾಡುತ್ತಾರೆ. ಸತ್ತಿದ್ದರೆ ಶವಸಂಸ್ಕಾರ ಮಾಡುತ್ತಾರೆ. ಗುತ್ಯಮ್ಮ ಚೌಡಿ, ಪಂಜುರ್ಲಿ ಹಾಗೂ ತುಳಸಿಗಿಡಗಳನ್ನು ಪೂಜಿಸುತ್ತಾರೆ. 'ಭೂಮಿ ಹುಣ್ಣಿಮೆ' ಆಚರಿಸುವರು. ಬಸವಣ್ಣನನ್ನು ಪೂಜಿಸುತ್ತಾರೆ. ಕೆಲವು ಮಠಗಳಿಗೂ ನಿಷ್ಠೆಯನ್ನು ಇಟ್ಟುಕೊಂಡಿರುತ್ತಾರೆ. ಕೆಳದಿ ಮಠ, ಬಾಳೆಹಳ್ಳಿಮಠ, ತೊಗಸಿಮಠ, ಕೂಡ್ಲಿಮಠಗಳಿಗೆ ನಡೆದುಕೊಳ್ಳುವರು. ನಾಮಧಾರಿ ಒಕ್ಕಲಿಗರ ಗುರುಗಳ ಮೇಲೂ ಗೌರವಾದರಗಳು ಇವೆ. ನಾಮಧಾರಿ ಒಕ್ಕಲಿಗರ ಕುಟುಂಬದಿಂದ ನೀರೂ ಪಡೆಯುತ್ತಾರೆ. ದಾಸಯ್ಯ ಹಾಗೂ ಜಂಗಮರಿಂದ ತೀರ್ಥ ಪಡೆದು ಮೈಲಿಗೆ ಕಳೆಯಲು ಇಟ್ಟುಕೊಂಡಿರುತ್ತಾರೆ. ಪರಿಶಿಷ್ಟ ಬುಡಕಟ್ಟು ಜನಾಂಗೀಯ ಮಾಹಿತಿ ೧೯೬೧ರ ಪ್ರಕಾರ ೧೯೬೧ ಜನಗಣತಿ ವರದಿಯ ಪ್ರಕಾರ ಹಸಲರು ಹಿಂದೂಗಳು, ಮೊದಲು ಅವರು ಪ್ರಕೃತಿಯ ಭಾಗವಾಗಿ ಪ್ರಾಣಿಗಳ ಗುಂಪಿಗೆ ಸೇರಿದ ಗುಡ್ಡಗಾಡಿನವರಾಗಿದ್ದಾರೆ. ಹಿಂದೂಧರ್ಮದ ಬಹಳಷ್ಟು ಪೀಳಿಗೆಗಳ ನಂತರ ಬದಲಾವಣೆಯಾಗಿ ಹಿಂದೂ ಪರಿಧಿಯಲ್ಲೇ ಇದ್ದಾರೆ. ಸೊರಬ, ಸಾಗರ, ಹೊಸನಗರ ತಾಲ್ಲೂಕಿನ ಹಸಲರು ಹಿಂದೂ ದೇವರುಗಳನ್ನೇ ಆರಾಧಿಸುತ್ತಾರೆ. ಹಿಂದೂ ದೇವರುಗಳಾದ ಈಶ್ವರ, ಪಾರ್ವತಿ, ವಿಷ್ಣು, ಲಕ್ಷ್ಮಿ ಇವರನ್ನೇ ಪೂಜಿಸುತ್ತಾರೆ. ಹಿರೇಕಸವಿಯ(ಸೊರಬ) ಹಸಲರು ಉದಾಹರಣೆಗೆ ಮಲೇಶ್ವರ, ಭೀಮರಾಯ, ಬಸವಣ್ಣ(ಹೊನ್ನತ್ತಿ ನಂದಿ), ಶಿಕಾರಿಪುರದ ಹುಚ್ಚರಾಯಸ್ವಾಮಿ, ವೀರಭದ್ರ, ಚಂದ್ರಗುತ್ತಿ ಗುತ್ಯಮ್ಮ, ಕರಿಯಮ್ಮ, ಗುಡ್ನಾಪುರದ ಬಂಗಾರೇಶ್ವರ, ನೀರಮುತ್ಯಮ್ಮ ಅಲ್ಲದೆ ಚೌಡಮ್ಮ, ಭೂತಪ್ಪ ಇತ್ಯಾದಿ ದೇವರನ್ನು ಪೂಜಿಸುತ್ತಾರೆ.

ತೀರ್ಥಹಳ್ಳಿ, ಹಾಗೂ ಮುಡಿಗೆರೆ ತುಳು ಹಸಲರು ಕುಲದೈವವನ್ನು ಪೂಜಿಸುತ್ತಾರೆ. ಮುದ್ದ ಹಾಗೂ ಕಲಾಲರನ್ನು ಆರಾಧಿಸುತ್ತಾರೆ. ಪಂಜುರ್ಲಿ, ಗೂಲಿಗ, ಹಾಲಸಿನಹಳ್ಳಿಯಲ್ಲಿ ಅವರ ಪ್ರಮುಖ ದೈವ ಬ್ರಹ್ಮ. ಇಲ್ಲಿಯೂ ಕೂಡ ಬಿಲ್ಲುಬಾಣಗಳನ್ನು ಆರಾಧಿಸುವ ಪದ್ಧತಿಯಿದೆ. ಧರ್ಮಸ್ಥಳ ಇವರ ಪ್ರಮುಖ ಯಾತ್ರಸ್ಥಳ. ಪುತ್ತೂರಿನ ಮಹಾಲಿಂಗೇಶ್ವರ, ಕುಂದಾಪುರದ ಮಾರಣಕಟ್ಟೆ ದೇವರು ಇವರ ದೈವಗಳು. ಕಲ್ಲುನಾಗರ, ತುಳಸಿ ಪೂಜೆ ಸಾಮಾನ್ಯವಾಗಿ ಇರುತ್ತದೆ. ಯುಗಾದಿ, ನಾಗರಪಂಚಮಿ, ಗೌರಿಹಬ್ಬ, ಮಹಾಲಯ ಅಮಾವಾಸ್ಯೆ ಇವು ಇತರ ಸಾಮಾನ್ಯ ಹಬ್ಬಗಳು, ಸುಬ್ರಹ್ಮಣ್ಯಷಷ್ಠಿ ದಿನ ನಾಡದೇವತೆಯನ್ನು ಪೂಜಿಸುತ್ತಾರೆ. ಆರೋಗ್ಯ ಸರಿಯಿಲ್ಲದಿದ್ದಾಗ ಗಾಡಿಗನನ್ನು ಕರೆಸುವುದು ರೂಢಿ, ಬ್ರಾಹ್ಮಣ ಹಾಗೂ ಲಿಂಗಾಯತರಿಗೆ ಹೆಚ್ಚು ಗೌರವ ಕೊಡುತ್ತಾರೆ. ಹಸಲರ ಧಾರ್ಮಿಕ ಕೇಂದ್ರಗಳು ಎರಡು: ೧. ಹೇರಗಳ್ಳಿಮಠ: ಇದು ಸಾಗರ ತಾಲ್ಲೂಕು ಆವಿನಹಳ್ಳಿ ಹೋಬಳಿಯಲ್ಲಿತ್ತು ಇದರ ಗುರುಗಳು ತಾತಾಚಾರ್ಯರು. ೨. ತರಳಿ ಮಠ. ಇಲ್ಲಿಯ ಗುರುಗಳು ಬಾಲಕೃಷ್ಣ ಸ್ವಾಮಿಗಳು. ಆದರೆ ಹೇರಗಳ್ಳಿಮಠ ಹಿರೇಭಾಸ್ಕರ ಅಣೆಕಟ್ಟಿನಿಂದ ಮುಳುಗಡೆಯಾಗಿದೆ. ಈಗ ಅದರ ಅವಶೇಷವೂ ಇಲ್ಲ. ಹಸಲರಿಗೆ ಈ ಮಠಗಳು ಪವಿತ್ರ ಧಾರ್ಮಿಕ ಕೇಂದ್ರಗಳಾಗಿದ್ದವು. ಹಸಲರ ಸಮಾಜ ಈ ಎರಡು ಮಠಗಳ ನಿಯಂತ್ರಣಕ್ಕೊಳಪಟ್ಟಿತ್ತು. ತರಳಿಮಠದ ಸ್ವಾಮಿಗಳು ಮಠ ಬಿಟ್ಟುಹೋಗಿದ್ದರಿಂದ ಅನೇಕ ವರ್ಷಗಳ ಕಾಲಮಠ ಪಾಳು ಬಿದ್ದಿತ್ತು. ಈಗ್ಗ ಕೆಲವಾರು ವರ್ಷಗಳಿಂದ ಬಾಲಕೃಷ್ಣ ಸ್ವಾಮಿಗಳು ಮರಳಿ ಬಂದು ನಾಮಾವಶೇಷವಾಗಿದ್ದ ಮಠವನ್ನು ಜೀರ್ಣೋದ್ಧಾರ ಮಾಡಿದ್ದಾರೆ. ಹಸಲರನ್ನು ಪುನರ್‌ಸಂಘಟನೆ ಮಾಡುತ್ತಿದ್ದಾರೆ.

### ೪.೧೨. ಸಾಮಾಜಿಕ ಜೀವನ

ಹಸಲರು ಬುಡಕಟ್ಟಿನಲ್ಲಿ ಜಾತಿಯ ಪಂಚಾಯಿತಿಗಳಿವೆ. ಅವುಗಳು ಗೌಡ, ನಾಯಕ, ಬುದ್ದಿವಂತ ಹಾಗೂ ಕೋಲ್ಕಾರರನ್ನು ಒಳಗೊಂಡಿದೆ. ಇವು ವಂಶಪಾರಂಪರ್ಯವಾಗಿ ಬಂದಿದ್ದರೂ ಕೆಲವು ಕೋಲ್ಕಾರರನ್ನು ಒಳಗೊಂಡಿದೆ. ಇವು ವಂಶಪಾರಂಪರ್ಯವಾಗಿ ಬಂದಿದ್ದರೂ ಕೆಲವು ಚುನಾಯಿತರಾಗುತ್ತಾರೆ. ಊರಿಗೆ(ಕೇರಿಗೆ) ಒಬ್ಬ ಗಿರಿಯ(ಯಜಮಾನ) ಹಾಗೂ ಕೊಂಡಿಕಾರ ಇರುತ್ತಾರೆ. ಏಳು ಹಳ್ಳಿಗಳು ಸೇರಿ ತೋಪುಕಟ್ಟೆ ಇರುತ್ತದೆ. ಇದಕ್ಕೆ ಗೌಡನೇ ಮುಖ್ಯಸ್ಥ. ಹಸಲರಲ್ಲಿ ಗಿರಿಯ (ಬುದ್ದಿವಂತ)ಒಬ್ಬ ಕೊಂಡಿಕಾರ ಇರುತ್ತಿದ್ದರು. ವ್ಯಾಜ್ಯಗಳನ್ನು ಪಂಚಾಯಿತಿ ಮಾಡಿ ಬಗೆಹರಿಸುತ್ತಾರೆ. ಇವರಲ್ಲಿರುವ ಸಾಮಾಜಿಕ ಕಟ್ಟುಕಟ್ಟಳೆಗಳೆಲ್ಲಾ ಸಡಿಲಗೊಂಡಿದ್ದವು. ಮದುವೆಯಾಗದ ಹೆಣ್ಣು ಬೇರೊಬ್ಬ ಗಂಡಿನೊಂದಿಗೆ ಅನೈತಿಕ ಸಂಬಂಧವಿಟ್ಟುಕೊಂಡು ಗರ್ಭಿಣಿಯಾದರೆ ಪಂಚಾಯಿತಿ ಮಾಡಿ ದಂಡ ವಿಧಿಸಿ ಅವಳ ವಿಟನಿಗೆ ಕೂಡಿಕೆ ಮಾಡುತ್ತಾರೆ. ಕೂಡಿಕೆಯಾಗದಿದ್ದರೆ ಹೆಣ್ಣು ಸಮಾಜದಿಂದ ಬಹಿಷ್ಕೃತಳಾಗುತ್ತಾಳೆ. ಮದುವೆಯಾದವಳು ಬೇರೆಯೊಬ್ಬ ಪುರುಷನೊಂದಿಗೆ ಅನೈತಿಕೆ ಸಂಬಂಧವಿಟ್ಟುಕೊಂಡು ವಿಟನೊಡನೆ ಓಡಿಹೋದರೆ ಅವಳ ಗಂಡನಿಂದ ತಿರಸ್ಕೃತಳಾಗುತ್ತಾಳೆ. ವಿಟ ಹತ್ತಿರ ಹಳ್ಳಿಗಳಿದ್ದರೆ ಅಥವಾ ಅದೇ ಗ್ರಾಮದವನಾದರೆ ಪಂಚಾಯಿತಿ ಮಾಡಿ ದಂಡ ವಿಧಿಸುವರು.

ಹೆಂಗಸು ಗಂಡನ ಜೊತೆಯಲ್ಲಿರಲು ಬಯಸದಿದ್ದಲ್ಲಿ ಗಂಡ ಮಾಡಿದ ಮದುವೆ ಖರ್ಚಿನ ಹಣವನ್ನು ಕೊಡಬೇಕಾಗುತ್ತದೆ. ಒಂದು ವೇಳೆ ಗಂಡನೇ ಹಂಡತಿಯನ್ನು ಬಿಡುವುದಾದರೆ ಅವಳ ತವರುಮನೆಗೆ ಕರೆದುಕೊಂಡು ಹೋಗಿ ಅವಳ ತಪ್ಪು ನಡವಳಿಗೆಗಳನ್ನು ಹೇಳಿ ಬರುತ್ತಾನೆ. ಇದಾದ ನಂತರ ಅವಳು ಸೀರುಡಿಕೆ ಮಾಡಿಕೊಳ್ಳಬಹುದು. ಬಹಳ ವರ್ಷಗಳ ಹಿಂದೆ ಯಾರಾದರೂ ಚಪ್ಪಲಿಯಲ್ಲಿ ಹೊಡೆದರೆ ಹೊಡಿಸಿ ಕೊಂಡವನು ದಾಸಯ್ಯನ ಮೂಲಕ ಹೇರಗಳ್ಳಿಮಠಕ್ಕೆ ಹೋಗಿ ಸ್ವಾಮಿಗಳಿಂದ ತೀರ್ಥ ಹಾಕಿಸಿಕೊಂಡು ಬರಬೇಕಾಗಿತ್ತು. ಸಮಾಜದ ವ್ಯಾಜ್ಯಗಳನ್ನು ಮಠದವರೇ ಬಗೆ ಹರಿಸುತ್ತಿದ್ದರು.

**೪.೧೩. ಮಾಟ–ಮಂತ್ರ**

ಹಸಲರು ಬುಡಕಟ್ಟಿನಲ್ಲಿ ದೆವ್ವ ಭೂತಗಳ ಅಸ್ತಿತ್ವದಲ್ಲಿ ಅಚಲವಾದ ವಿಶ್ವಾಸ, ಮಂತ್ರ ಮಾಡುವವರು ಈ ಜನಾಂಗದದ್ದಾರೆ. ಅವರಿಗೆ 'ಗಾಡಿಗರು'ಎನ್ನುತ್ತಾರೆ. ಇವರ ಮೈಮೇಲೆ ಭೂತ, ಚೌಡಿ, ಮಾಸ್ತಿ ಹಾಯಗುಳಿ, ಕಲ್ಕುಟಿಗೆ, ಯಕ್ಷಿ ಬಂದು ಹೇಳಿಕೆ ನೀಡುತ್ತವೆ ರಾತ್ರಿ ಹೊತ್ತು ದಾರಿಯಲ್ಲಿ ಬರುವಾಗ ನಾಯಿ, ಬೆಕ್ಕು ಓಡಾಡಿದಂತಾದರೆ, ಗಿಡಗಳನ್ನು ಅಲುಗಾಡಿಸಿದರೆ, ಯಕ್ಷಿ, ಭೂತಗಳ ತೊಂದರೆ ಎಂದು ಭಾವಿಸುತ್ತಾರೆ. ಗಾಡಿಗರ ಹತ್ತಿರ ಹೋಗಿ 'ನಿಮಿತ್ತ' ನೋಡಿಸುತ್ತಾರೆ. ಗಾಡಿಗರು ದೀಪಾವಳಿಯ ದಿವಸ ಅಡುಗೆಮನೆಯ ಒಲೆಯಲ್ಲಿರುವ ಬೂದಿಯನ್ನು ತೆಗೆದುಕೊಂಡು ಇಟ್ಟುಕೊಂಡಿರುತ್ತಾರೆ. ವರ್ಷವೆಲ್ಲಾ ಈ ಬೂದಿಯನ್ನು ಮಂತ್ರಿಸಿ ಕೊಡುವರು. ಮನೆಯ ಜಾನುವಾರು ಹಾಲು ಕೊಡದೇ ಇದ್ದರೆ, ಕೊಟ್ಟಿಗೆಯಲ್ಲಿ 'ಉಣುಗು'ಜಾಸ್ತಿಯಾದರೆ ಯಾವುದೋ ಕೀಳು ಕುಲದ ಚೌಡಿ ಅಥವಾ ರಾಹುವಿನ ಕಾಟ ಎಂದು ಗಾಡಿಗರ ಹತ್ತಿರ ಹೋಗಿ ತೆಂಗಿನಕಾಯಿ, ಬೂದಿ ಮಂತ್ರಿಸಿಕೊಂಡು ಬಂದು ಕೊಟ್ಟಿಗೆಯ ತೊಲೆಗೆ ಕಟ್ಟುತ್ತಾರೆ. ಗಾಡಿಗರು ಮಂತ್ರಿಸುವಾಗ ಕವಡೆ ಬಳಸುವರು. ಮಣೆಯ ಮೇಲೆ ಅಕ್ಕಿಕಾಳು ಹಾಕಿಕೊಂಡು ನಿಮಿತ್ತ ನೋಡುವರು. ಕೆಲವು ಪೀಡೆಗಳಿಗೆ ಹಾನ ಮಾಡುತಾರೆ. ಹಾನಗಳಲ್ಲಿ ನಾಲ್ಕು ವಿಧ, ಕಪ್ಪು, ಕೆಂಪು, ಬಿಳಿ, ಹಳದಿ ಬಣ್ಣದವು. ಹಾಳೆ ಕೊಟ್ಟೆಯಲ್ಲಿ ನೀರು ಹಾಕಿ ಕಪ್ಪು ಮಸಿ ಸೇರಿಸಿದರೆ ಕಪ್ಪು ಹಾನ, ಹಾಗೆಯೇ ಅರಿಶಿನ ಹಾಕಿ ಸುಣ್ಣ ಸೇರಿಸಿದರೆ ಕೆಂಪುಹಾನ, ಅಕ್ಕಿ ಹಿಟ್ಟನ್ನು ನೀರಿಗೆ ಸೇರಿಸಿದರೆ ಬಿಳಿಹಾನ, ಅರಿಶಿನಪುಡಿ ನೀರಿಗೆ ಸೇರಿಸಿ ಹಳದಿ ಹಾನ, ಈ ಹಾನಗಳನ್ನು ಪೀಡೆ, ಪಿಶಾಚಿಗಳನ್ನು ನಿವಾಳಿಸಲು ಗಾಡಿಗರು ಬಳಸುತ್ತಾರೆ. ಭೂತ, ಚೌಡಿ, ಯಕ್ಷಿಗಳು ಕಾಡುತ್ತಿದ್ದರೆ ಕೋಳಿಪೂಜೆ, ಕುರಿ ಪೂಜೆ ಮಾಡುತ್ತಾರೆ. ಹಸಲರು ತುಂಬಾ ಮೂಢನಂಬಿಕೆಯವರು, ದೆವ್ವ, ಭೂತ, ಪಿಶಾಚಿಗಳನ್ನು ಬಿಡಿಸುವಾಗ ಗಾಡಿಗನ ಹೇಳಿಕೆಯಂತೆ ಕೋಳಿ ಕುರಿ ಬಲಿ ಕೊಟ್ಟು ಪೂಜೆ ಸಲ್ಲಿಸುತ್ತಾರೆ. ಇತ್ತೀಚಿಗೆ ಗಾಡಿಗರ ಮೇಲಿನ ನಂಬಿಕೆ ಕಡಿಮೆಯಾಗುತ್ತಿದೆ. ಆಸ್ಪತ್ರೆಗಳಲ್ಲಿ ಔಷಧಿ ಪಡೆಯುವುದು ರೂಢಿಯಾಗಿದೆ. ಹಳೆಕಾಲದ ಪ್ರಾದೇಶಿಕ ವೈದ್ಯಕೀಯ ಪದ್ಧತಿಗಳು ರೂಢಿಯಲ್ಲಿವೆ ಮತ್ತು ಸರ್ಕಾರಿ ಅಥವಾ ಖಾಸಗಿ ವೈದ್ಯರಿಂದಲೂ ಚಿಕಿತ್ಸೆಪಡೆಯುತ್ತಾರೆ. ಸಾಂಕ್ರಾಮಿಕ ಚುಚ್ಚುಮದ್ದುಗಳನ್ನು ಹಾಕಿಸುವರು.

## ೪.೧೪. ಉದ್ಯೋಗ

ಒಂದು ಕಾಲದಲ್ಲಿ ಹಸಲರು ಬುಡಕಟ್ಟು ಜನಾಂಗದ ವಿಶಿಷ್ಟ ಲಕ್ಷಣಗಳನ್ನು ಹೊಂದಿದ್ದರು. ಕಾಡಿನಲ್ಲಿ ಆಹಾರ ಹುಡುಕುತ್ತಾ ಬಹಳ ನಾಚಿಕೆ ಸ್ವಭಾವದವರಾಗಿ ಸ್ವಲ್ಪ ಅಪಾಯದ ಸಂದರ್ಭವೆನಿಸಿದಾಗ ಕಾಡಿನಲ್ಲಿ ಏಲಕ್ಕಿ ಹಾಗೂ ಇತರ ಕಾಡಿನ ಉತ್ಪನ್ನಗಳನ್ನು ಹುಡುಕುತ್ತಾ ಗುಲಾಮರಾಗಿ ಬದುಕುತ್ತಿದ್ದರು. ಕಾಲಕ್ರಮೇಣ ಸುಮಾರು ಮೂರು ನಾಲ್ಕು ದಶಕಗಳಷ್ಟು ಹಿಂದಿನಿಂದ ಜೀವನಕ್ರಮದಲ್ಲಿ ಬದಲಾವಣೆಯಾಯಿತು. ಅವರಿಗ ಒಂದು ನಿರ್ದಿಷ್ಟ ಹಳ್ಳಿಯಲ್ಲಿ ಕಾಫಿ ಎಸ್ಟೇಟ್‌ನಲ್ಲಿ ಹಿಂದೂ ಧರ್ಮದ ಇತರ ಕನಿಷ್ಠ ಜಾತಿಯವರಂತೆ ಬದುಕುತ್ತಿದ್ದಾರೆ. ಇದುವರೆಗೂ ಸಿಕ್ಕಿರುವ ಮಾಹಿತಿಗಳ ಪ್ರಕಾರ ಶಿವಮೊಗ್ಗ ಜಿಲ್ಲೆ ಹಸಲರ ಜನ್ಮನಾಡು. ಬಹುಶಃ ನಂತರ ಗುಂಪುಗಳಾಗಿ ಮೇಲೆ ಹತ್ತಿ ಮೂಲಸ್ಥಳದಿಂದ ಬಹುದೂರ ಬಂದಿದ್ದಾರೆ. ಕಾಲಕ್ರಮೇಣ ತಮ್ಮ ಮೂಲ ಬುಡಕಟ್ಟು(ಆದಿವಾಸಿ)ಲಕ್ಷಣಗಳನ್ನು ಕಳೆದುಕೊಂಡು ಹೊಸ ಸಾಮಾಜಿಕ ಬದಲಾವಣೆಯ ಸುಳಿಯಲ್ಲಿ ಸೇರಿಹೋಗಿದ್ದಾರೆ. ಈಗ ಹಸಲರು ಯಾರು ತುಳು ಮಾತನಾಡುವುದಿಲ್ಲ. ಅಲ್ಲದೇ ತಮ್ಮ ಮೂಲ ಭೂತಾರಾಧನೆಯನ್ನು, ಬಿಲ್ಲು ಬಾಣಗಳನ್ನು ಮರೆತಿದ್ದಾರೆ. ಆದರೆ ತಮ್ಮ ಪೂರ್ವಜರ ಸಂಪ್ರದಾಯದ ಕತೆಗಳನ್ನು ಮರೆತಿಲ್ಲ. ತಾಲ್ಲೂಕಿನಲ್ಲಿರುವ ಕಾಫಿ ತೋಟಗಳಲ್ಲಿ ಕೂಲಿಗಳು. ಅದರಲ್ಲೂ ಕೆಲವರು ಭೂಮಿಯನ್ನು ಹೊಂದಿ ಕೃಷಿಕರಾಗಿದ್ದಾರೆ. ತುಳು ಕೆಲವು ಹಸಲರ ಮಾತೃಭಾಷೆಯಾಗಿದ್ದು ತಮ್ಮ ಪೂರ್ವಜರ ಹಳ್ಳಿಗಳೊಡನೆ ಸಾಮಾಜಿಕ ಸಂಬಂಧಗಳನ್ನು ಇಟ್ಟುಕೊಂಡಿದ್ದು ಭೂತಾರಾಧನೆಯನ್ನು ನೆನಪಿಸಿಕೊಳ್ಳುತ್ತಾರೆ. ಹಸಲರು ಪ್ರಮುಖವಾಗಿ ಇರುವ ಸ್ಥಳಗಳೆಂದರೆ ಬೆಟ್ಟ ಹಾಗೂ ಕಾಡಿನಿಂದಾವೃತವಾದ ಮಲೆನಾಡು ಪ್ರದೇಶ. ಮಲೆನಾಡಿನ ಹವಾಮಾನ, ಭತ್ತ ಬೆಳೆಯಲು ಪ್ರಶಸ್ತವಾಗಿದೆ. ಕೆಲ ತಾಲ್ಲೂಕುಗಳು ಕಾಫಿ ಪ್ಲಾಂಟೇಶನ್‌ನಿಂದ ಕೂಡಿವೆ. ಈ ತಾಲ್ಲೂಕುಗಳಲ್ಲಿ ಹಸಲರು ಕೂಲಿಗಳು ವಲಸೆ ಬಂದಿರುವುದು ಈ ಕಾರಣದಿಂದ, ಸಾಗರ, ಹೊಸನಗರ, ತೀರ್ಥಹಳ್ಳಿ, ಸೊರಬದಲ್ಲಿ ಅಡಿಕೆ ತೋಟಗಳಲ್ಲಿ ಕೆಲಸ ಮಾಡುವವರು ಹಸಲರು ಪಂಗಡದಲ್ಲಿ ಬಗ್ಗಾಲಿನ ಹಲಸರು ಕುರಿತು ಎಲ್. ಕೆ. ವೈ. ಅಯ್ಯರ್ ಹಾಗೂ ನಂಜುಂಡಯ್ಯನವರು ಹೀಗೆ ಹೇಳುತ್ತಾರೆ–ಕಾಲು ಬಗ್ಗಿಸಿ ನಿರಂತರವಾಗಿ ಅಡಿಕೆಮರಗಳನ್ನು ಹತ್ತಿ ಅವರ ಕಾಲುಗಳು ಬಾಗಿವೆ. ಅಡಿಕೆ ಮರ ಹತ್ತುವ ಈ ಕಲೆ ಹಸಲರ ಕೂಲಿಗಳನ್ನು ಮಲೆನಾಡಿಗೆ ಆಕರ್ಷಿಸಿದೆ. ಹಸಲರು ಹೆಚ್ಚಾಗಿ ಅಡಿಕೆ ತೋಟಗಳಲ್ಲಿ ಕೆಲಸ ಮಾಡುವವರು. ಅಡಿಕೆಗೆ ಕೊಳೆ ರೋಗ ಬಂದಾಗ ಕೊಟ್ಟೆ ಕಟ್ಟುವುದು, ಔಷಧಿ ಹೊಡೆಯುವುದು, ಅಡಿಕೆ ಸಸಿ ನೆಡುವುದು, ಅಡಿಕೆ ಕೊನೆ ಇಳಿಸುವುದು, ಸೊಪ್ಪು ಗೊಬ್ಬರ ಹಾಕುವುದು, ಅಗತೆ ಮಾಡುವುದು ಮುಂತಾದ ಕೆಲಸಗಳನ್ನು ಮಾಡುತ್ತಾರೆ. ಅಡಿಕೆ ಮರ ಹತ್ತಿ ಮರದಿಂದ ಮರಕ್ಕೆ ದಾಟುತ್ತಾ ದಿನವೆಲ್ಲಾ ಮರದ ಮೇಲಿರಬಲ್ಲರು. ಮಲೆನಾಡಿನಲ್ಲಿ ಹಸಲರು ಶತಮಾನಗಳಿಂದ ಹವ್ಯಕ ಬ್ರಾಹ್ಮಣರ ಮನೆಗಳಲ್ಲಿ ಹುಟ್ಟಾಳುಗಳಾಗಿ ಜೀತ ಮಾಡುತ್ತಾ. ದುಡಿಯುತ್ತಾ ಬಂದಿದ್ದಾರೆ. ಹಸಲ ಮಹಿಳೆಯರು

ಅಡಿಕೆ ಸುಲಿಯುವುದು, ತೋಟದ ಕಳೆ, ತೆಗೆಯುವದು, ಪಾತ್ರೆ ಬೆಳಗುವುದು, ಮನೆಯನ್ನು ಸ್ವಚ್ಛಗೊಳಿಸುವುದು, ಕೊಟ್ಟಿಗೆಯಲ್ಲಿ ಸಗಣಿ ತೆಗೆಯುವುದು ಇತ್ಯಾದಿ ಕೆಲಸಗಳನ್ನು ಮಾಡುತ್ತಾರೆ. ಹಸಲರ ವ್ಯಕ್ತಿ ಮದುವೆಯಾಗುವಾಗ ಆತನ ಒಡೆಯ ಎರಡು ಅಥವಾ ಮೂರು ನೂರು ರೂಪಾಯಿ ಸಾಲ ಕೊಟ್ಟರೆ ಮುಗಿಯಿತು. ಆತನ ಮನೆಯವರೆಲ್ಲರೂ ಒಡೆಯನ ಮನೆಯಲ್ಲಿ ದುಡಿಯಬೇಕು. ಇಡೀ ಕುಟುಂಬವೇ ದುಡಿದರೂ ಒಡೆಯನ ಸಾಲ ತೀರುವುದಿಲ್ಲ. ಹುಟ್ಟಾಳಿಗೆ ದೀಪಾವಳಿ ಹಬ್ಬದಲ್ಲಿ ಗಂಡಾಳಿಗೆ ಕುರಗೋಡು ಪಂಚೆ ಷರಟು, ಹೆಣ್ಣಾಳಿಗೆ ಒಂದು ಸೀರೆ ಕೊಡುತ್ತಿದ್ದರು. ಒಡೆಯರ ಮನೆಗೆ ಕೆಲಸಕ್ಕೆ ಹೋದಾಗ ಐದು ಸಿದ್ದೆ ಭತ್ತ ಕೊಡುತ್ತಿದ್ದರು. ಉಪ್ಪು, ಮೆಣಸಿನಕಾಯಿ ಕೂಡ ಒಡೆಯರ ಮನೆಯಿಂದ ತರಬೇಕಾಗಿತ್ತು. ಒಡೆಯರ ಮನೆಯಲ್ಲಿ ಊಟ ಮಾಡುವ ಹಾಗಿಲ್ಲ. ಪಾತ್ರೆಗಳಲ್ಲಿ ಊಟ ಬಡಿಸುತ್ತಿರಲಿಲ್ಲ. ಅಡಿಕೆ ಹಾಳೆಯಲ್ಲಿ ಅನ್ನ, ಸಾರು ಹಾಕುತ್ತಿದ್ದರು. ಇದನ್ನು ತೋಟಕ್ಕೆ ತೆಗೆದುಕೊಂಡು ಬಂದು ಊಟ ಮಾಡಬೇಕಾಗಿತ್ತು. ಈಗ ಸ್ವಲ್ಪ ಬದಲಾಗಿದೆ. ಹಸಲರಿಗೆ ಒಡೆಯರ ಮನೆಯ ಕೈಸಾಲೆಯಲ್ಲೋ ಅಥವಾ ಹಿಂದುಗಡೆ ಕೂರಿಸಿ ಊಟ ಹಾಕುವರು. ಊಟದ ನಂತರ ಸ್ಥಳವನ್ನು ಸಾರಿಸಬೇಕು. ಟೀ. ಕಾಫಿಗಳನ್ನು ಸ್ಟೀಲು ಲೋಟದಲ್ಲಿಯೇ ಕೊಡುವರು. ಆದರೆ ಕುಡಿದ ನಂತರ ತೊಳೆದು ಇಡಬೇಕು. ಶಿಕಾರಿಪುರ, ಸೊರಬದ ಹಸಲರು ಸ್ವಂತ ಜಮೀನು ಹೊಂದಿದ್ದಾರೆ. ಭತ್ತ ಹತ್ತಿ, ಶೇಂಗಾ, ಬೆಳೆಯುತ್ತಾರೆ. ಎತ್ತು, ಎಮ್ಮೆಗಳನ್ನು ಸಾಕುತ್ತಾರೆ. ಸ್ವಾವಲಂಬಿಗಳಾಗಿ ನಿರುಮ್ಮಳ ಜೀವನ ಸಾಗಿಸುತ್ತಿದ್ದಾರೆ. ಜಮೀನು ಇಲ್ಲದವರು ಕೃಷಿ ಕಾರ್ಮಿಕರಾಗಿ ಶ್ರಮ ವಹಿಸಿ ದುಡಿಯುತ್ತಾರೆ. ಹೊಸನಗರದ ಹಸಲರು ಸರ್ಕಾರಿ ಭೂಮಿಯನ್ನು ಕೆಲವರು ದರಾಖಾಸ್ತು ಮೂಲಕ ಪಡೆದು ಸಾಗುವಳಿ ಮಾಡುತ್ತಾರೆ. ಕೆಲವರು ಬಗರ್‌ಹುಕುಂ ಆಗಿ ಸಾಗುವಳಿ ಮಾಡುವರು. ಜಮೀನಿನಲ್ಲಿ ಭತ್ತ, ಕಬ್ಬು, ಶುಂಠಿ, ಶೇಂಗಾ, ಮೆಣಸಿನಕಾಯಿ ಬೆಳೆಯುತ್ತಾರೆ. ಜಮೀನು ಇಲ್ಲದೇ ಇರುವವರು ಗಾರೆಕೆಲಸ, ಮರ ಗೆಲಸ, ಕಲ್ಲು ಹೊಡೆಯುವುದು, ಕಲ್ಲು ಕಟ್ಟುವ ಕೆಲಸ ಮಾಡುವರು ಒಂದು ದಿವಸಕ್ಕೆ ೧೫೦ರಿಂದ ೨೦೦ರೂಪಾಯಿ ಸಂಪಾದನೆ ಮಾಡುತ್ತಾರೆ. ಹಂಗಾಮಿ ಕೂಲಿಯವರಿಗೆ ೪೦ ರಿಂದ ೫೦ ರೂಪಾಯಿ ಕೂಲಿ ಸಿಗುತ್ತದೆ. ಹೆಂಗಸರಿಗೆ ಖಾಯಂ ಕೆಲಸಮಾಡುವವರಿಗೆ ಒಂದು ಸೇರು ಅಕ್ಕಿ, ೧೫ ರೂಪಾಯಿ ಹಾಗೂ ಚಂಗೂಲಿಯವರಿಗೆ ಮೂವತ್ತೈದು ರೂಪಾಯಿ ಕೂಲಿ ಸಿಗುತ್ತದೆ. ತೀರ್ಥಹಳ್ಳಿಯ ಹಸಲರಲ್ಲಿನ ಕೆಲವರು ಬಾಗಾಯ್ತು(ಅಡಿಕೆ ತೋಟ) ಮತ್ತು ತರಿ ಜಮೀನು ಹೊಂದಿದ್ದಾರೆ. ಸಾಗರ ಮತ್ತು ಹಸಲರಲ್ಲಿ ಕೆಲವು ಜನ ತರಿ ಜಮೀನು ಹೊಂದಿದ್ದಾರೆ.

**೪.೧೫. ನಾಟೀ ವೈದ್ಯ ಪದ್ದತಿ**

ಹಸಲ ಸಮುದಾಯವು ಮೊದಲಿನಿಂದಲೂ ಕಾಡಿನಲ್ಲಿ ವಾಸಿಸುವ ಸಮುದಾಯವಾಗಿದೆ. ಈ ಸಮುದಾಯವು ಸರಕಾರಿ ಆಸ್ಪತ್ರೆ ಮತ್ತು ಖಾಸಗೀ ಆಸ್ಪತ್ರೆ ಹೋಗುವುದು ತುಂಬಾ ಕಡಿಮೆ. ಅನಾದಿ ಕಾಲದಿಂದಲೂ ತನ್ನದೇ ಆದ ನಾಟೀ ವೈದ್ಯ ಪದ್ಧತಿಯನ್ನು ಉಪಯೋಗಿಸುತ್ತಾ ಬಂದಿದೆ.

ಉದಾ : ನಾಯಿ ಕಡಿತ, ಹಾವು ಕಡಿತ, ಚೋಳು ಕಡಿತ, ಜ್ವರ, ನೆಗಡಿ, ತಲೆನೋವು, ಶೀತಾ, ವಾಂತಿ, ಮಂಡೆ ನೋವು, ಹೊಟ್ಟೆ ನೋವು, ಕೆಮ್ಮು, ಕೈಕಾಲು ನಾವು, ಕಜ್ಜಿ, ತುರುಕೆ–ಇತ್ಯಾದಿ ರೋಗಗಳಿಗೆ ಈ ಸಮುದಾಯ ನಾಟೀವೈದ್ಯ ಪದ್ಧತಿಯ ಮರೆ ಹೋಗುತ್ತದೆ. ಹಸಲರು ಸಾಮಾನ್ಯ ಕಾಯಿಲೆಗೆ ಗಿಡಮೂಲಿಕೆ ಔಷಧವನ್ನು ಬಳಸುತ್ತಾರೆ. ಹಳೇ ಕಾಲದ ಪ್ರಾದೇಶಿಕ ವೈದ್ಯಪದ್ಧತಿಗಳು ಬಳಕೆಯಲ್ಲಿವೆ. ಸಾಗರ ತಾಲ್ಲೂಕು ಹಿರೇಮನೆಯಲ್ಲಿ ದುರ್ಗಪ್ಪ ಎಂಬುವ ಸ್ತ್ರೀಯರಿಗೆ ಬರುವ ಅನೇಕ ಕಾಯಿಲೆಗಳಿಗೆ ಔಷಧ ಕೊಡುತ್ತಿದ್ದನು. ಹೊಟ್ಟೆನೋವು, ಗರ್ಭ ಕಾಮಾಲೆ, ಚವಿ( ಗರ್ಭ ನಿಲ್ಲದೇ ಇರುವುದು), ಬಿಳಿಮುಟ್ಟು ಹೋಗುವುದು, ಸೂತಕ ಸನ್ನೆ(ರಕ್ತಸ್ರಾವ), ರುತಿಹಣ್ಣು ಬಾವು(ಕುರು) ಇತ್ಯಾದಿ ಕಾಯಿಲೆಗಳಿಗೆ ಗಿಡಮೂಲಿಕೆ ಔಷಧ ಕೊಡುತ್ತಿದ್ದನು. ಅನೇಕ ಜನ ಇವನಲ್ಲಿ ಔಷಧ ಪಡೆದು ಗುಣಮುಖರಾಗುತ್ತಿದ್ದರು. ಕೆಲವು ವರ್ಷಗಳ ಹಿಂದೆ ಈತ ಮರಣ ಹೊಂದಿದ. 'ಮದ್ದಾಲೆ' ಮರದ ಚಕ್ಕೆಯನ್ನು ದೀಪಾವಳಿಯ ಬೂರೆಯ ಹಿಂದಿನ ದಿವಸ ತಂದು ಕುಟ್ಟಿ ನೀರಿನಲ್ಲಿ ನೆನೆಸಿ, ಕಷಾಯ ಮಾಡಿ ಬೂರೆಯ ದವಸ ಕುಡಿಯುತ್ತಾರೆ. ಬೂರೆ ದಿವಸ ಮದ್ದಾಲೆ ಮರದ ಕಷಾಯ ಕುಡಿದರೆ ವರ್ಷವೆಲ್ಲಾ ಮದ್ದು ಮಾಡುವ ಅಗತ್ಯವಿಲ್ಲ ಎಂಬ ನಂಬಿಕೆ ಹಸಲರಲ್ಲಿ ಇದೆ. ಸಾಗರದ ಕಾರ್ಗಲ್‌ನಲ್ಲಿ ಹಸಲ ಜನಾಂಗದವರು ಪಾರ್ಶ್ವವಾಯುವಿಗೆ ಔಷಧ ಕೊಡುತ್ತಿದ್ದರು. ಔಷಧ ಪಡೆದ ಅನೇಕರಿಗೆ ವಾಸಿಯಾಗಿದೆ. ಮಕ್ಕಳಿಗೆ ಬರುವ ಜ್ವರ, ಹೊಟ್ಟೆನೋವು, ತುರಿಕಜ್ಜಿ, ಕುರು, ನೆಗಡಿ, ಕೆಮ್ಮು ಮುಂತಾದ ಕಾಯಿಲೆಗಳಿಗೆ ಹಸಲರು ಆಸ್ಪತ್ರೆಗೆ ಹೋಗುವುದಿಲ್ಲ. ತಾವೆ ಗಿಡಮೂಲಿಕೆ ಔಷಧಿ ಮಾಡಿಕೊಳ್ಳುತ್ತಾರೆ. ನಾಟೀವೈದ್ಯರು ಶಿವಮೊಗ್ಗ ಜಿಲ್ಲೆಯ ಪ್ರತಿಯೊಂದು ತಾಲೂಕಿನಲ್ಲಿ ಮತ್ತು ಗ್ರಾಮಗಳಲ್ಲಿ ಕಂಡು ಬರುತ್ತಾರೆ. ಇತ್ತೀಚಿಗೆ ಈ ಪದ್ಧತಿಯನ್ನು ಅನುಸರಿಸುವುದು ಕಡಿಮೆಯಾಗಿದೆ. ಪ್ರತಿಯೊಂದು ಸಾಮಾನ್ಯ ಕಾಯಿಲೆಗಳಿಗೂ ಆಸ್ಪತ್ರೆಯ ವೈದ್ಯರಿಂದ ಚಿಕಿತ್ಸೆ ಪಡೆಯುತ್ತಾರೆ. ಕಳೆದುಹೋದ ದಿನಗಳಲ್ಲಿ ಹಸಲರು ಕಾಡಿನಲ್ಲಿ ವಾಸವಾಗಿದ್ದು ಆಹಾರ ಹುಡುಕುವುದೇ ಅವರ ಕೆಲಸವಾಗಿತ್ತು. ಬಿಲ್ಲು, ಬಾಣ ಹಿಡಿದು ಆಗಾಗ ಬೇಟೆ ಯಾಡುತ್ತಿದ್ದರು. ನಂತರದಲ್ಲಿ ಅವರು ಕಾಡಿಗೆ ಹೋಗಿ ಗಡ್ಡೆ ಗೆಣಸುಗಳನ್ನು ಕಿತ್ತು ತರುತ್ತಿದ್ದರು. ಆಮೇಲೆ ಅವರು ತೋಟಗಳಲ್ಲಿ ಕೆಲಸ ಮಾಡುವ ಗುಲಾಮರಾದರು. ಬಹಳಷ್ಟು ಕಡೆ ಹಸಲರು ಇನ್ನೂ ಜೀತದಾಳುಗಳಾಗಿಯೇ ಇದ್ದಾರೆ. ಆದರೆ ಯಾವುದೇ ಒಂದು ಜನಾಂಗದ, ಜಮೀನುದಾರರ ಜೀತದಾಳುಗಳಾಗಿಲ್ಲ. ಮಣ್ಣಾಳು ಮತ್ತು ಹುಟ್ಟಾಳುವಿ ನಂತಹ ಮಲೆನಾಡಿನ ಅಮಾನುಷ ಪದ್ಧತಿ ಈಗಿಲ್ಲ. ಆಳು ಹಾಗೂ ಜಮೀನದಾರ ಸಂಬಂಧ ಕೇವಲ ಹಣಕಾಸಿನದು ಮಾತ್ರ, ಕೆಲವು ಕಡೆ ಹುಟ್ಟಾಳು ಪದ್ಧತಿ ಬೇರೆ ರೂಪದಲ್ಲಿ ಇದೆ. ಒಳಕಟ್ಟೆ(ಹೊಸನಗರ)ಯಲ್ಲಿ ಮಾತ್ರ ಒಂದು ಕುಟುಂಬ ಹುಟ್ಟಾಳು ಗುಂಪಿಗೆ ಸೇರಿದ್ದು (ತಂದೆ, ಅಜ್ಜ, ಮಗ, ಮೊಮ್ಮಗ) ಒಬ್ಬನೇ ಜಮೀನುದಾರನ ಗುಲಾಮರಾಗಿರುವುದು. ಹಿರೇಕಸವಿ (ಸೊರಬ) ಯಲ್ಲಿ ಐದು ಜನ ಲಿಂಗಾಯಿತ ಹಾಗೂ ಮುಸಲ್ಮಾನ ಜಮೀನುದಾರರಲ್ಲಿ ಜೀತದಾಳುಗಳಾಗಿ ಕೆಲಸ ಮಾಡುತ್ತಿದ್ದರು. ಈ ಜೀತದಾಳು ಪದ್ಧತಿಯಲ್ಲಿ ಕೂಲಿ(ಕಾರ್ಮಿಕ)ಯು ಯಜಮಾನನ

ಮನೆಯಲ್ಲಿ ಊಟ, ಬಟ್ಟೆ ಪಡೆದು ವರ್ಷಕ್ಕೆ ೧೫೦ ರಿಂದ ೨೦೦ ರೂಪಾಯಿ ಸಂಬಳ ಪಡೆಯುತ್ತಾನೆ. ಯುವಕನಾದವನು ಜಮೀನುದಾರರಿಂದ ಸಾಲಪಡೆದು ಸಾಲ ತೀರುವತನಕ ಮನೆಯಲ್ಲಿಯೇ ಕೆಲಸ ಮಾಡುತ್ತಿರುತ್ತಾನೆ. 'ಜೀತದಾಳು' ಹಳೇಪದ್ಧತಿಯ ಪ್ರಕಾರ ಒಬ್ಬ ಯಜಮಾನ ಜೀತದಾಳಿನ ಇಡೀ ಕುಟುಂಬವನ್ನೇ ಸಾಕುತ್ತಾನೆ. ಆಳಿನ ಕುಟುಂಬಕ್ಕೆ ಊಟ, ಬಟ್ಟೆಯಷ್ಟೇ ಅಲ್ಲದೆ ಮನೆ ಜಾಗ ಮಾಡಿಕೊಟ್ಟು ಎರಡು ತೆಂಗಿನಗಿಡ, ಎರಡು ಅಡಿಕೆ ಗಿಡಗಳನ್ನು ಕೊಟ್ಟು ಆ ಕುಟುಂಬದಿಂದ ಎಷ್ಟು ಸಾಧ್ಯವೋ ಅಷ್ಟು ಕೆಲಸಗಳನ್ನು ಪಡೆಯುತ್ತಾನೆ. ಇತ್ತೀಚಿಗೆ ಈ ಪದ್ಧತಿ ನಿಂತುಹೋಗಿದೆ. ಹಸಲರು ಸಾಮಾನ್ಯವಾಗಿ ಭತ್ತ ಬೆಳೆಯುತ್ತಾರೆ. ಅವರಲ್ಲಿ ಗೇಣಿ ಮಾಡುವವರಿದ್ದರು. ಭೂಸುಧಾರಣಾ ಕಾಯಿದೆ ಜಾರಿಗೆ ಬಂದ ನಂತರ ಜಮೀನು ಅವರದೇ ಆಗಿದೆ. ಇತ್ತೀಚೆಗೆ ಕಾಫಿ ತೋಟಗಳನ್ನು ಗೇಣಿಗೆ ಪಡೆದು ಬಂದ ಫಸಲಿನಲ್ಲಿ ಅರ್ಧದಷ್ಟು ಒಡೆಯನಿಗೆ ಕೊಡುತ್ತಾರೆ. ತರಿ ಜಮೀನು ಕೂಡ ಗೇಣಿಗೆ ಪಡೆದು ಫಸಲಲ್ಲಿ ಅರ್ಧ ಮಾಡಿ ಹಂಚಿಕೊಳ್ಳುತ್ತಾರೆ. ತೀರ್ಥಹಳ್ಳಿಯಲ್ಲಿ ಅವರು ಬ್ರಾಹ್ಮಣ, ಜೈನ, ಬಂಟ ಜನಾಂಗದ ಗುಲಾಮರಾಗಿದ್ದರು. ಹೆಣ ಹೂಳುವ ಗುಂಡಿ ತೋಡುವದು, ಕಟ್ಟಿಗೆ ಮಾಡುವುದು ಅವರ ಕೆಲಸಗಳಾಗಿದ್ದವು. ಪರಿಶಿಷ್ಟ ಬುಡಕಟ್ಟು ಜನಾಂಗೀಯ ಅಧ್ಯಯನ ೧೯೬೧ರ ಹಸಲರು ಆರ್ಥಿಕ ಸ್ಥಿತಿಗತಿ ಸಮೀಕ್ಷೆಯ ಪ್ರಕಾರ ಶೇಕಡಾ ೩೭ಜನ ತೋಟ, ಕಾಡು, ಅರಣ್ಯದಲ್ಲಿ ಕೆಲಸ ಮಾಡುವವರಿದ್ದಾರೆ. ಶೇಕಡಾ ೨೫ರಷ್ಟು ಜನ ಕೃಷಿ ಕಾರ್ಮಿಕರು, ಶೇಕಡಾ ೨೦ರಷ್ಟು ಜನ ಕೃಷಿಕರು. ಹಿರೇಕಸವಿ, ಸೊರಬದಲ್ಲಿ ೩೧ ಕುಟುಂಬಗಳಿದ್ದು ೨೩ ಕುಟುಂಬಗಳು ಸ್ವಂತ ಜಮೀನು ಹೊಂದಿದ್ದಾರೆ. ಒಟ್ಟು ಹೊಂದಿರುವ ಭೂಮಿ ೬೮ ಎಕರೆ, ತಲಾವಾರು ಮೂರು ಎಕರೆ ಭೂಮಿಯಾಯಿತು. ಭೂಮಿಯನ್ನು ಹೊಂದಿರುವ ಕುಟುಂಬಗಳಲ್ಲಿ ೧೯ಕುಟುಂಬ ೨೦ ರಿಂದ ೪ ಎಕರೆ ಭೂಮಿಯನ್ನು, ಎರಡು ಕುಟುಂಬ ತಲಾ ಒಂದು ಎಕರೆ ಭೂಮಿಯನ್ನು ಎರಡು ಕುಟುಂಬ ತಲಾ ಒಂದು ಎಕರೆ, ಒಂದು ಕುಟುಂಬ ೯ ಎಕರೆ ಒಂದು ಕುಟುಂಬ ೫ಎಕರೆ, ಅವರು ಹೊಂದಿರುವ ಶಿಕಾರಿಪುರ ಗುಡ್ಡದ ಹೊಸಳ್ಳಿಯಲ್ಲಿ ಬಹುತೇಕ ಕುಟುಂಬದವರಿಗೂ ಜಮೀನು ಇದೆ. ಸೊರಬ ತಾಲ್ಲೂಕಿನ ಕುಂಸಿ, ಬಿಳುವಾಣಿ, ದುಗ್ಲಿ, ಶಾಂತಗೆರೆ ಚಿಕ್ಕಾವಲಿ, ಹಿರೇಕಾವಲಿ ಗ್ರಾಮಗಳಲ್ಲಿರುವ ಹಸಲರು ಸ್ವಂತ ಜಮೀನು ಹೊಂದಿದ್ದಾರೆ. ಕಮ್ಮಾರಗೋಡೆಯಲ್ಲಿ ಯಾರೂ ಭೂಮಿ ಹೊಂದಿಲ್ಲ. ಮೂರು ಜನ ೩ಎಕರೆ ಭತ್ತದ ಗದ್ದೆಯನ್ನು ಭೋಗ್ಯಕ್ಕೆ ಪಡೆದುಕೊಂಡಿದ್ದಾರೆ. ಹೊಯ್ಸಳದಲ್ಲಿ ಒಬ್ಬ ಹತ್ತು ಎಕರೆ ಭೂಮಿಯನ್ನು ಪಡೆದಿದ್ದಾನೆ. ಬೆಟ್ಟದ ಮನೆಯಲ್ಲಿ ಒಬ್ಬ ಎರಡು ಎಕರೆ ಹೊಂದಿದ್ದಾನೆ. ಬಳಕಟ್ಟೆಯಲ್ಲಿ ಎಲ್ಲಾ ಹಸಲರು ಭೂರಹಿತರು. ಎಲ್ಲೋ ಕೆಲವರು ಬಿಟ್ಟರೆ ಕಾಡಿನಲ್ಲಿ ಗೆಡ್ಡೆ ಗೆಣಸು ಹುಡುಕುವುದು. ಬಲೆ ಹಾಕುವುದು, ಬೇಟೆಯಾಡುವದು ಎಲ್ಲಾ ಕಡಿಮೆಯಾಗಿದೆ. ಬದಲಿಗೆ ಅವರ ಒಡೆಯರಿಗಾಗಿ ಕಾಡಿನಲ್ಲಿ ಏಲಕ್ಕಿ ಹಾಗೂ ಇತರ ಕಾಡಿನ ಉತ್ಪನ್ನಗಳನ್ನು ತಂದು ಕೊಡುತ್ತಾ ಗುಲಾಮರಾಗಿ ಕಾಲ ಕಳೆಯುತ್ತಾರೆ. ತೋಟದಲ್ಲಿ ಕೆಲಸ ಮಾಡುವುದನ್ನು ಬಿಟ್ಟರೆ ಮರ ಕಡಿಯುವುದು, ಯಾಲಕ್ಕಿ, ಮೆಣಸಿನಕಾಳು

ಹುಡುಕಿ ತರುವುದು ಅವರ ಮುಖ್ಯ ಉದ್ಯೋಗವಾಗಿದೆ ಎಂದು ಥರ್ಸ್ಟನ್ (೧೯೦೯) ಹೇಳುತ್ತಾರೆ. ಸಾಗರ ತಾಲ್ಲೂಕು ಹಿರೇಮನೆಯಲ್ಲಿ ೨೪ ಹಸಲರ ಕುಟುಂಬಗಳಿವೆ. ೧೭ ಕುಟುಂಗಳಿಗೆ ತಲಾ ೨ ಎಕರೆ, ಏಳು ಕುಟುಂಬದವರಿಗೆ ಒಂದು ಎಕರೆಯಂತೆ ದರಾಖಾಸ್ತು ಮೂಲಕ ಭೂಮಿ ಹೊಂದಿದ್ದಾರೆ. ೪೨ ಎಕರೆ ಭೂಮಿಯನ್ನು ಸಮಮಟ್ಟ ಮಾಡಿ ಬದು ಹಾಕಿಸಿದ್ದಾರೆ. ಗಂಗಾಕಲ್ಯಾಣ ಯೋಜನೆಯಡಿಯಲ್ಲಿ ಮೂರು ನೀರಾವರಿ ಬಾವಿಗಳನ್ನು ತೋಡಿಸಿ ಏಳು ಮತ್ತು ಐದು ಅಶ್ವಶಕ್ತಿಯ ಪಂಪ್‌ಸೆಟ್‌ಗಳನ್ನು ಜೋಡಿಸಿ ಅಲ್ಲಲ್ಲಿ ನೀರು ಶೇಖರಣೆಗಾಗಿ ಮೂರು ಟ್ಯಾಂಕ್‌ಗಳನ್ನು ನಿರ್ಮಾಣ ಮಾಡಿದ್ದಾರೆ. ೧೯೬೪ರಲ್ಲಿ ಸಾಗರ ಕ್ಷೇತ್ರದ ಶಾಸಕರ ಪ್ರಯತ್ನದಿಂದ ೪೧ ಎಕರೆ ಭೂಮಿಯನ್ನು ಟ್ರ್ಯಾಕ್ಟರಿನಿಂದ ಉಳುಮೆ ಮಾಡಿಸಿದರು. ಕೃಷಿ ಇಲಾಖೆಯಿಂದ ಬೀಜ, ಗೊಬ್ಬರ ಕೊಡಿಸಿ, ಭೂಮಿಯಲ್ಲಿ ಬೆಳೆ ಬೆಳೆಯಲು ಹಸಲರಿಗೆ ಪ್ರೋತ್ಸಾಹವನ್ನು ನೀಡಲಾಯಿತು. ಆ ವರ್ಷ ಭತ್ತವನ್ನು ಬೆಳೆದರು. ಸುಮಾರು ನೂರುಪಲ್ಲ ಭತ್ತ ಬಂದಿತ್ತು. ಪ್ರತಿವರ್ಷ ಸರ್ಕಾರದ ನೆರವು ಪಡೆದು ಭೂಮಿಯನ್ನು ಕೃಷಿ ಮಾಡುವುದು ಕಷ್ಟವೆಂದು ಹಸಲರು ನಿರಂತರವಾಗಿ ಕೃಷಿ ಮಾಡಲು ಆರ್ಥಿಕ ನೆರವು ನೀಡುವ ಉದ್ದೇಶದಿಂದ ೧೯೬೫ರಲ್ಲಿ ಸಾಗರ ತಾಲೂಕು ಗಿರಿಜನರ ವಿವಿಧೋದ್ದೇಶ ಸಹಕಾರ ಸಂಘವನ್ನು (ಹಿರೇಮನೆ) ಸ್ಥಾಪಿಸಲಾಗಿದೆ. ೧೯೮೭ ರಲ್ಲಿ ವಿಶೇಷ ಘಟಕ ಯೋಜನೆಯಡಿಯಲ್ಲಿ ಹಿರೇಮನೆ ಹಸಲರಿಗೆ ಪ್ರತಿ ಕುಟುಂಬಕ್ಕೂ ಒಂದು ಹಾಲು ಕರೆಯುವ ಎಮ್ಮೆ, ಉಳುಮೆ ಎತ್ತುಗಳನ್ನು ಕೊಡಲಾಯಿತು. ಹಳೇಮನೆಗಳನ್ನು ರಿಪೇರಿ ಮಾಡಿಸಿ, ಮನೆ ಇಲ್ಲದವರಿಗೆ ಹೊಸದಾಗಿ ಮನೆ ಕಟ್ಟಿಸಿಕೊಟ್ಟಿದ್ದಾರೆ.

**೪.೧೬. ಹಸಲರು ಮತ್ತು ಭಾಷೆ**

ಹಸಲರು ಮೂಲತಃ ಕಾಡಿನ ವಾಸಿಗಳಾಗಿದ್ದು ಅವರದ್ದೇ ಆದ ಬೇರೆ ಭಾಷೆಯಿಲ್ಲ. ಮೂಲತಃ ಬಂದವರಾಗಿದ್ದು ಅವರ ಮಾತೃಭಾಷೆ ತುಳು, ಆದರೆ ಇದರಲ್ಲಿ ಕೆಲವು ಗೊಂದಲಗಳಿವೆ. ೧೮೬೧ರ ಮೈಸೂರು ಜನಗಣತಿ ವರದಿಯಲ್ಲಿ ಲೂಯಿಸ್‌ರೈಸ್ ಹಾಗೂ ಎಲ್. ಕೆ. ಅನಂತಕೃಷ್ಣಯ್ಯನವರು ತುಳು ಹಸಲರ ಮಾತೃಭಾಷೆ ಎನ್ನುತ್ತಾರೆ. ಆದರೆ ಥರ್ಸ್ಟನ್‌ರು(೧೯೦೯) ಲೂಯಿಸ್‌ರೈಸ್‌ರ ಮೈಸೂರು ಗೆಜೆಟಿಯರ್ ಮೊದಲನೆ ಆವೃತ್ತಿಯಲ್ಲಿ ಹಸಲರು ಕರಾವಳಿ ನಾಡು ಭಾಷೆಯನ್ನು ಆಡುತ್ತಾರೆ ಎಂದು ಹೇಳುವುದನ್ನು ತೋರಿಸುತ್ತಾರೆ. ೧೯೦೧ರ ಮದ್ರಾಸ್ ಜನಗಣತಿ ವರದಿಯಲ್ಲೂ ಕೂಡ ಹಸಲರು ಕರಾವಳಿಯ ಕೃಷಿ ಕಾರ್ಮಿಕರು ಎಂದು ತಿಳಿಸುತ್ತಾರೆ. ಅಲ್ಲದೆ ಮುಂಬಯಿ ಜಿಲ್ಲಾ ಗೆಜೆಟಿಯರ್‌ನಲ್ಲಿ (ಸಂಪುಟ ೧೫, ೧೮೮೩ ಹಾಗೂ ಸಂಪುಟ ೨೨, ೧೮೮೪) ಕನ್ನಡವು ಹಸಲರ ಆಡುಭಾಷೆ ಎಂದು ನಮೂದಿಸಲಾಗಿದೆ. ಶಿವಮೊಗ್ಗ ಜಿಲ್ಲೆಗೆ ವಲಸೆ ಬಂದ ಹಸಲರು ಅಲ್ಲಿಯ ಪ್ರಾಂತೀಯ ಭಾಷೆಯನ್ನು ಕೂಡಲೇ ಕಲಿತುಕೊಂಡು ಕ್ರಮೇಣ ಅವರ ಭಾಷೆಯನ್ನಾಗಿ ಮಾಡಿಕೊಂಡರು. ಆದ್ದರಿಂದ ಸಾಗರ, ಸೊರಬ, ಹೊಸನಗರ, ತೀರ್ಥಹಳ್ಳಿ, ಸಾಗರ ಹಸಲರುಗಳಲ್ಲಿ ಯಾವ ಕುರುಹೂ ಕೂಡ ಸಿಗುವುದಿಲ್ಲ. ಆದರೆ ತೀರ್ಥಹಳ್ಳಿ ಹಸಲರು

ತುಳು ಭಾಷೆ ಮಾತನಾಡುವುದರ ಜೊತೆಗೆ ಇತರರೊಡನೆ ಹಸಲರಲ್ಲಿ ಶೇಕಡಾ ೯೮ರಷ್ಟು ಜನ ಒಂದೇ ಭಾಷೆ ಮಾತನಾಡುತ್ತಾರೆ. ತುಳು ಮಾತನಾಡುವವರಲ್ಲಿ ಅಂದಾಜು ಶೇಕಡಾ ೪೪ರಷ್ಟು ಜನ ಎರಡೂ ಭಾಷೆಗಳನ್ನು ಮಾತನಾಡುತ್ತಾರೆ. ಸ್ವಾತಂತ್ರ್ಯಾನಂತರದಲ್ಲಿ ಸರ್ಕಾರ ಬುಡಕಟ್ಟು ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಅಲ್ಲಲ್ಲಿ ಅವರು ವಾಸಿಸುವ ಕಾಲೋನಿಗಳಲ್ಲಿ ಆಶ್ರಮ ಶಾಲೆಗಳನ್ನು ತೆರೆದಿದ್ದಾರೆ. ೧೯೫೯ರಲ್ಲಿ ಸಾಗರ ತಾಲ್ಲೂಕು ಹಿರೇಮನೆ ಮತ್ತು ೧೯೬೯ರಲ್ಲಿ ಸೊರಬದಲ್ಲಿ ಹಸಲರ ಮಕ್ಕಳಿಗೆ ಆಶ್ರಮಶಾಲೆಗಳನ್ನು ತೆರೆಯಲಾಯಿತು. ಇಲ್ಲಿ ಪ್ರಾಥಮಿಕ ಒಂದನೇ ತರಗತಿಯಿಂದ ನಾಲ್ಕನೇ ತರಗತಿಯವರೆಗೆ ಶಿಕ್ಷಣ ನಿಡುವರು. ಮಕ್ಕಳಿಗೆ ಉಚಿತ, ಊಟ, ಬಟ್ಟೆ, ಪಠ್ಯಪುಸ್ತಕ, ಹಾಸಿಗೆ, ಹೊದಿಕೆಗಳನ್ನು ಕೊಡುತ್ತಾರೆ. ಮಹಾತ್ಮಾಗಾಂಧಿ ಗಿರಿಜನ ಆಶ್ರಮ ಶಾಲೆ ಎಂಬ ಹೆಸರಿಗೆ ಈ ಆಶ್ರಮಶಾಲೆ ಪ್ರಾರಂಭದಲ್ಲಿ ಇಪ್ಪತ್ತೈದು ವಿದ್ಯಾರ್ಥಿಗಳನ್ನು ಹೊಂದಿತ್ತು. ಈಗ ಒಂದು ನೂರು ವಿದ್ಯಾರ್ಥಿಗಳಿಗೆ ಅನುಕೂಲತೆಗಳನ್ನು ಕಲ್ಪಿಸಲಾಗಿದೆ. ಇಲ್ಲಿ ಓದಿ ನಾಲ್ಕನೆ ತರಗತಿಯಲ್ಲಿ ತೇರ್ಗಡೆಯಾದವರಿಗೆ ಮಾಧ್ಯಮಿಕ, ಪ್ರೌಢ ಶಿಕ್ಷಣಕ್ಕೆ ಅನುಕೂಲ ಮಾಡಿಕೊಡಲು ಹಸಲರ ಮಕ್ಕಳಿಗಾಗಿಯೆ ಗಿರಿಜನ ವಿದ್ಯಾರ್ಥಿ ನಿಲಯವನ್ನು ತಾಳಗುಪ್ಪದಲ್ಲಿ ತೆರೆಯಲಾಗಿದೆ. ಹೈಸ್ಕೂಲು ಮತ್ತು ಮಾಧ್ಯಮಿಕ ಶಾಲೆಗೆ ಸೇರಿದ ಮಕ್ಕಳು ಈ ವಿದ್ಯಾರ್ಥಿನಿಲಯದಲ್ಲಿರುತ್ತಾರೆ. ಹಿರೇಮನೆ ಆಶ್ರಮಶಾಲೆಯಲ್ಲಿ ಸಾಗರ, ಸೊರಬ, ಹೊಸನಗರ, ತಾಲ್ಲೂಕಿನ ಹಸಲರ ಮಕ್ಕಳು ವ್ಯಾಸಂಗ ಮಾಡುತ್ತಿದ್ದಾರೆ. ಅನೇಕ ವರ್ಷಗಳಿಂದ ಈ ಶಾಲೆಯನ್ನು ಮೇಲ್ದರ್ಜೆಗೆ ಏರಿಸಲು ಪ್ರಯತ್ನ ನಡೆಯುತ್ತಿದೆ. ಏಳನೆಯ ತರಗತಿಯವರೆಗೆ ಈ ಶಾಲೆಯನ್ನು ಮೇಲ್ದರ್ಜೆಗೆ ಏರಿಸಿದರೆ ಮಾಧ್ಯಮಿಕ ಹಂತದವರೆಗೆ ಶಿಕ್ಷಣವನ್ನು ನೀಡಲು ಅನುಕೂಲವಾಗುತ್ತದೆ. ಕನಿಷ್ಠ ಪ್ರೌಢಶಿಕ್ಷಣದವರೆಗೆ ಕಲಿಸಲು ಆಶ್ರಮಶಾಲೆಗಳಲ್ಲಿ ಅನುಕೂಲತೆಯಿರಬೇಕು. ನಾಲ್ಕನೇ ತರಗತಿಯಲ್ಲಿ ತೇರ್ಗಡೆಯಾದ ಮಕ್ಕಳು ಪೋಷಕರು ಮುಂದಿನ ತರಗತಿಗೆ ಸೇರಿಸದಿದ್ದರೆ ಮಕ್ಕಳ ವಿದ್ಯಾಭ್ಯಾಸ ನಿಲ್ಲುವ ಅಪಾಯವಿದೆ. ಬಹಳಷ್ಟು ವಿದ್ಯಾರ್ಥಿಗಳು ಆಶ್ರಮಶಾಲೆಯನ್ನು ಬಿಟ್ಟ ನಂತರ ತಮ್ಮ ವಿದ್ಯಾಭ್ಯಾಸವನ್ನು ನಿಲ್ಲಿಸಿಬಿಡುತ್ತಾರೆ. ಈ ಅಪಾಯವನ್ನು ತಪ್ಪಿಸಲು ಆಶ್ರಮ ಶಾಲೆಗಳಲ್ಲಿ ಪ್ರೌಢಶಿಕ್ಷಣದವರೆಗೆ ಕಲಿಸುವಂತೆ ಇರಬೇಕು. ಹಿರೇಮನೆ ಆಶ್ರಮಮನೆ ಮಕ್ಕಳು ವಿದ್ಯೆಯನ್ನು ಈ ಶಾಲೆಯಲ್ಲಿ ಪಡೆದಿದ್ದಾರೆ. ಸರ್ಕಾರ ಈ ಶಾಲೆಗೆ ಇಪ್ಪತ್ತು ಲಕ್ಷ ರೂ.ಗಳ ವೆಚ್ಚದಲ್ಲಿ ಒಂದು ಸುಸಜ್ಜಿತವಾದ ಕಟ್ಟಡವನ್ನು ಕಟ್ಟಿಸಿದೆ. ಇಡೀ ರಾಜ್ಯದಲ್ಲಿಯೇ ಹಸಲರಿಗಾಗಿ ಇರುವ ಆಶ್ರಮ ಶಾಲೆಗಳಲ್ಲಿ ಇದು ಮಾದರಿಯಾಗಿದೆ. ಸೊರಬ ಪಟ್ಟಣದಲ್ಲಿ ೧೯೬೯ರಲ್ಲಿ ಪ್ರಾರಂಭವಾದ ಆಶ್ರಮ ಶಾಲೆ ಇಂದು ಕೂಡ ಇಪ್ಪತ್ತೈದು ವಿದ್ಯಾರ್ಥಿಗಳ ಸಂಖ್ಯೆ ಹೊಂದಿದೆ. ಇದರದೇ ಆದ ಸ್ವಂತ ಕಟ್ಟಡವಿಲ್ಲ. ಸೊರಬ ತಾಲ್ಲೂಕಿನಲ್ಲಿ ಹಸಲರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಅವರಿಗೆ ಇದರ ಪರಿಚಯವೇ ಇಲ್ಲ. ತಾಳಗುಪ್ಪ ಗಿರಿಜನ ವಿದ್ಯಾರ್ಥಿನಿಲಯದಲ್ಲಿ ಮೂವತ್ತೈದು ಹಸಲರು ವಿದ್ಯಾರ್ಥಿಗಳಿಗೆ ಅವಕಾಶವಿದೆ. ತಾಲ್ಲೂಕಿನ ಹಸಲರ ಮಕ್ಕಳು ಇಲ್ಲಿದ್ದು ಮಾಧ್ಯಮಿಕ ಮತ್ತು ಪ್ರೌಢ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಹಸಲರ ಆಶ್ರಮಶಾಲೆಗಳು,

ವಿದ್ಯಾರ್ಥಿನಿಲಯಗಳು ನಿಗದಿತ ಸಂಖ್ಯೆಯ ವಿದ್ಯಾರ್ಥಿಗಳಿಲ್ಲದೇ ಸೊರಗುತ್ತಿದೆ. ಹಸಲರು ಮಕ್ಕಳನ್ನು ಮನೆಯಿಂದ ದೂರದಲ್ಲಿರುವ ಆಶ್ರಮಶಾಲೆಗಳಲ್ಲಿ ಮತ್ತು ವಿದ್ಯಾರ್ಥಿನಿಲಯಗಳಲ್ಲಿ ಬಿಡಲು ತಯಾರಿಲ್ಲ. ಆಶ್ರಮ ಶಾಲೆ ಮತ್ತು ಇಲಾಖೆಯ ಶಾಲೆಗಳಲ್ಲಿ ಓದಿದ ನೂರಾರು ಯುವಕ ಯುವತಿಯರು ಸರ್ಕಾರಿ ಸೇವೆಯಲ್ಲಿದ್ದಾರೆ. ಅಂಚೆ ಮತ್ತು ತಂತಿ ಇಲಾಖೆಯಲ್ಲಿ ದ್ವಿತೀಯ ದರ್ಜೆ ಅಧಿಕಾರಿಯಾಗಿ ನಿವೃತ್ತರಾಗಿ ಬೆಂಗಳೂರಿನಲ್ಲಿ ನೆಲೆಸಿದ್ದಾರೆ. ಕೃಷಿ ಇಲಾಖೆಯಲ್ಲಿ ಮೇಲ್ವಿಚಾರಕರಾಗಿ, ಪ್ರಥಮ ದರ್ಜೆ ಸಹಾಯಕರಾಗಿ, ದ್ವಿತೀಯ ದರ್ಜೆ ಸಹಾಯಕರಾಗಿ, ಡಿ–ವರ್ಗದ ಉದ್ಯೋಗಿಗಳಾಗಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ವಿವಿಧ ಇಲಾಖೆಗಳಲ್ಲಿ ಉದ್ಯೋಗಿಗಳಾಗಿದ್ದಾರೆ. ರಾಜಕೀಯವಾಗಿ ಉನ್ನತ ಸ್ಥಾನಕ್ಕೆ ಏರದಿದ್ದರೂ ಪಂಚಾಯಿತಿ ಅಧ್ಯಕ್ಷ, ಉಪಾಧ್ಯಕ್ಷ ಮತ್ತು ಸದಸ್ಯರಾಗಿದ್ದಾರೆ. ತಾಲ್ಲೂಕು ಪಂಚಾಯಿತಿಯಲ್ಲೂ ಕೆಲವರು ಸದಸ್ಯರಾಗಿದ್ದಾರೆ. ಭೂ ನ್ಯಾಯಮಂಡಳಿ, ದರಖಾಸ್ತು ಸಮಿತಿಯ ಸದಸ್ಯರಾಗಿ ಸ್ಥಳೀಯ ರಾಜಕೀಯ ಮುಖಂಡರಿಗೆ ನಿಷ್ಠರಾಗಿ ಸೇವೆ ಸಲ್ಲಿಸುತ್ತಾದ್ದಾರೆ. ಹಸಲರಲ್ಲಿ ಅವರವೇ ಆದ ಮದುವೆ ಹಾಡುಗಳು ಇವೆ. ಉತ್ತಮವಾಗಿ ಹಾಡುವ ಕಲಾವಿದೆಯರು ಇದ್ದಾರೆ. ಈಗ ಹಾಡುವವರೂ ಇಲ್ಲ. ಹಾಡುಗಳು ಕೂಡ ಹಾಡುವ ಕಲಾವಿದೆಯರ ಹಿಂದೆಯೇ ಹೋಗಿವೆ. ಈಗಿನ ಪೀಳಿಗೆಯವರು ಕಲಿಯಲೇ ಇಲ್ಲ. ಬಹಳ ಕಡೆ ಅವ್ಯಕರ ಮದುವೆ ಹಾಡುಗಳನ್ನು ಅನುಕರಿಸುತ್ತಾರೆ. ಅವೂ ಪೂರ್ಣ ಬರುವುದಿಲ್ಲ. ಗಂಡಸರಲ್ಲಿ ಹಬ್ಬ ಹಾಡುವ ಹಾಡುಗಳು, ಬಿಂಗಿಪದ್ಯಗಳು, ಬಲ್ಲಾಳಿ ಪದಗಳು ಸ್ವಲ್ಪ ಸ್ವಲ್ಪ ಉಳಿದುಕೊಂಡಿದೆ ಇವುಗಳು ಕಣ್ಮರೆ ಯಾಗುವುದರೊಳಗೆ ಸಂಪಾದಿಸುವ ಕೆಲಸ ಮಾಡಬೇಕು. ಇವರಲ್ಲಿ ಜನಪದ ಕತೆಗಳು, ಗಾದೆಗಳು, ಒಡಪುಗಳು ಇವೆ, ಇವುಗಳೆಲ್ಲ ಇವರ ಪರಿಸರದಲ್ಲಿ ಇರುವ ಇತರೆ ಜನಾಂಗದವೇ ಆಗಿವೆ. ಇವರವೇ ಆದ ಗಾದೆಗಳು, ಒಡಪುಗಳು, ಕಥೆಗಳಾಗಲಿ ಇಲ್ಲವೆನ್ನಬಹುದು. ಹಸಲರು ಡೊಳ್ಳು ಬಡಿಯುತ್ತಾರೆ. ಕೆಲವರ ತಂಡಗಳು ಅಲ್ಲಲ್ಲಿ ಇವೆ. ಈಗಿನ ಯುವಕರು ಅದನ್ನು ಮಾಡುವುದಿಲ್ಲ. ಹವ್ಯಕ ಬ್ರಾಹ್ಮಣ ಕಲಾವಿದರ ನೆರವು ಪಡೆದು ಯಕ್ಷಗಾನವನ್ನು ಕಲಿಯುತ್ತಿದ್ದಾರೆ. ಯಕ್ಷಗಾನ ಭಾಗವತರು, ಪಾತ್ರಧಾರಿಗಳು, ತಾಳಮದ್ದಲೆ ಅರ್ಥಧಾರಿಗಳು ಕೆಲವು ಕಡೆಯಿದ್ದಾರೆ. ಇವರಲ್ಲಿ ಒಂದು ಅಪರೂಪದ ಧರ್ಮವಾದ್ಯ ಇತ್ತು. ಅದನ್ನು 'ರಾಮಾಸ'ಎನ್ನುತ್ತಿದ್ದರು. ಇದು ಪಿಟೀಲು ರೀತಿಯ ಚಿಕ್ಕವಾದ್ಯ, ಒಂದೂವರೆ ಅಡಿ ಉದ್ದದ ಬಿದಿರು ಕೋಲಿಗೆ ಗೆರಟೆ ಚಿಪ್ಪು ತೂತು ಮಾಡಿ ಸೇರಿಸಿ, ಚಿಪ್ಪಿನ ಬಾಯನ್ನು ಉಡುವಿನ ಧರ್ಮದಿಂದ ಮುಚ್ಚುತ್ತಿದ್ದರು. ಅದರ ಮೇಲೆ ನಯವಾದ ತಂತಿಯನ್ನು  ಕಟ್ಟುವರು. ಬಿದರಿನ ಕಡ್ಡಿಯನ್ನು ಬಿಲ್ಲಿನಂತೆ ಬಾಗಿಸಿ ದಾರ ಕಟ್ಟುತ್ತಾರೆ. ಇದರಿಂದ ಬಾರಿಸುವರು. ಈಗ ೩೫ ವರ್ಷಗಳ ಹಿಂದೆ ಒಬ್ಬ ಹಸಲ ಬಾರಿಸುತ್ತಿದ್ದ. ಅದೂ ಕೂಡ ಮರೆತುಬಿಟ್ಟಿದ್ದಾರೆ. ಹಸಲರು ಬುಡಕಟ್ಟು ಲಕ್ಷಣಗಳನ್ನು ಹೊಂದಿದ್ದಾರೆ. ಅವರವೇ ಆದ ಆಚಾರ, ಸಂಪ್ರದಾಯ, ನಂಬಿಕೆಗಳನ್ನು ಹೊಂದಿದ್ದಾರೆ. ಪ್ರಾದೇಶಿಕ ಜನಾಂಗಗಳ ಸಂಪ್ರದಾಯ, ಆಚಾರ, ನಂಬಿಕೆಗಳನ್ನು ತಮ್ಮದನಾಗಿಸಿ ಮಾಡಿಕೊಂಡಿದ್ದಾರೆ. ಮಲೆನಾಡಿನ ಹಸಲರಿಗೆ ತಾವು ದಕ್ಷಿಣಕನ್ನಡದಿಂದ ಬಂದವರು, ತಮ್ಮ  ಮೂಲ ಭಾಷೆ ತುಳು,

ತಮ್ಮಲ್ಲಿ ಅನೇಕ ಪಂಗಡಗಳಿವೆ ಎಂಬ ಅರಿವು ಇಲ್ಲ. 'ಹಸಲ' ಎಂಬ ಶಬ್ದ ಅವಮಾನಕರವಾದುದು, ನಮ್ಮ ಜಾತಿಯಿಂದ ಆ ಹೆಸರನ್ನು ತೆಗೆದು ಹಾಕಬೇಕೆಂದು ಓದಿದವರೆಲ್ಲ ಸೇರಿ ಬಿಲ್ಲು ಕ್ಷತ್ರಿಯ ಸಂಘವನ್ನು ಮಾಡಿಕೊಂಡು'ಹಸಲ' ಹೆಸರಿನ ಬದಲಾಗಿ 'ಬಿಲ್ಲುಕ್ಷತ್ರಿಯ'ಆಗಬೇಕು ಎಂದು ಹೆಸರು ಬದಲಾವಣೆಗಾಗಿ ಪ್ರಯತ್ನಿಸುತ್ತಿದ್ದಾರೆ. ೧೯೮೯ರಲ್ಲಿ ನವಸಾಕ್ಷರರಿಗಾಗಿ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯವರು ಪ್ರಕಟಿಸಿದ 'ಹಸಲರು'ಎಂಬ ಪುಸ್ತಕದಲ್ಲಿ ಬಗ್ಗಾಲಿನ ಹಸಲರು ಮತ್ತು ಅಹಾರ ಕ್ರಮದಲ್ಲಿ ಏಡಿ ತಿನ್ನವವರು ಎಂದು ಬರೆದಿದ್ದಕ್ಕೆ ಸಾಗರದ ಹಸಲರು ಪ್ರತಿಭಟನೆ ಮಾಡಿದರು. ಹಸಲರ ಸಂಘಟನೆಗಳು ಇತ್ತೀಚೆಗೆ ಅಸ್ತಿತ್ವವನ್ನು ಪಡೆದುಕೊಳ್ಳುತ್ತಿವೆ. ಡಾ. ಬಿ.ಆರ್. ಅಂಬೇಡ್ಕರ್ ಹೇಳುವಂತೆ ಒಮದು ಸಮುದಾಯ ಜೀವನದಲ್ಲಿ ಮುಂದೆ ಬರಬೇಕಾದರೆ ಶಿಕ್ಷಣ, ಹೋರಾಟ ಮತ್ತು ಸಂಘಟನೆ ಬಹುಮುಖ್ಯವೆಂದು ಹೇಳಿದ್ದಾರೆ. ಇದು ಅಕ್ಷರ ಸಹ ನಿಜ. ಹಸಲ ಸಮುದಾಯವು ಇತ್ತೀಚಿನ ದಿನಗಳಲ್ಲಿ ಸಂಘಟನೆಯಲ್ಲಿ ತೊಡಗಿದೆ. ಶಿವಮೊಗ್ಗ ಜಿಲ್ಲೆ ಕರ್ನಾಟಕ ಹಸಲ ಅರಣ್ಯ ಮೂಲ ಬುಡಕಟ್ಟು ಒಕ್ಕೂಟ, ಶ್ರೀ ಕ್ಷೇಮಾಭಿವೃದ್ಧಿ ಹಸಲ ಸಂಘ ಸೊರಬ. ಶ್ರೀ ಧರ್ಮಸ್ಥಳ ಮಹಿಳಾ ಸ್ವಸಹಾಯ ಸಂಘ, ಶ್ರೀ ಶಕ್ತಿ ಮಹಿಳಾ ಸ್ವಸಹಾಯ ಸಂಘ ಈ ರೀತಿಯ ಸಂಘಗಲು ಶಿವಮೊಗ್ಗ ಜಿಲ್ಲೆಯ ಎಲ್ಲಾ ತಾಲ್ಲೂಕಿನಲ್ಲಿ ಕಾಣುತ್ತಿವೆ. ಪುಸ್ತಕದ ಬಗ್ಗೆ ಶಿವಮೊಗ್ಗ ಜಿಲ್ಲೆಯಲ್ಲಿ ಹಸಲರು ಇರುವ ಕಡೆ ಅಪಪ್ರಚಾರವನ್ನು ಮಾಡಿದರು. ಇದರ ಪರಿಣಾಮವನ್ನು ಈ ಸಾರಿ ಕ್ಷೇತ್ರಕಾರ್ಯಕ್ಕೆ ಹೋದಾಗ ಎದುರಿಸಬೇಕಾಯಿತು. ಹಸಲರಲ್ಲಿ ರಾಜಕೀಯ ಪ್ರಜ್ಞೆ ಇತ್ತೀಚಿಗೆ ಮೂಡಿ ಬರುತ್ತಿದೆ. ಸ್ವಾಭೀಮಾನಕ್ಕೆ ಧಕ್ಕೆಯಾದಾಗ ತಾವುಗಳು ಅಂದುಕೊಂಡ ಕೆಲಸ ಕಾರ್ಯಗಳು ಆಗದೆ ಇದ್ದಾಗ ರಾಜಕೀಯವಾಗಿ ಬೆಳೆಯಬೇಕೆಂಬ ಅಭಿಲಾಷೆ ಅವರಲ್ಲಿದೆ. ಇಂದಿಗೂ, ಹಸಲ ಸಮುದಾಯವು ರಾಜಕೀಯದಿಂದ ವಂಚಿತ ಸಮುದಾಯವಾಗಿದೆ. ಇದಕ್ಕೆ ಕಾರಣ ಬಡತನ ಮತ್ತು ಅನಕ್ಷರತೆ ಇತ್ತಿಚಿಗೆ ಈ ಸಮುದಾಯ ರಾಜಕೀಯದತ್ತಾ ಮುಖ ಮಾಡಿದೆ. ಸಾಗರ ತಾಲೂಕಿನ ಕಾರ್ಗಿಲ್ ಪಟ್ಟಣ ಪಂಚಾಯಿತಿ ಸದಸ್ಯರಾಗಿ ಶೈಲಜಾ ಮತ್ತು ಗಣಪಿ ರಾಮಣ್ಣ ಮತ್ತು ಮಂಡಲ ಪಂಚಾಯಿತಿ ಸದಸ್ಯರಾಗಿ ರಾಮಣ್ಣ ಅರಲಗೋಡು ಗ್ರಾಮ ಪಂಚಾಯಿತಿ ಸದಸ್ಯರಾಗಿ ಸವಿತಾ, ಸತ್ಯಮ್ಮ ಇನ್ನಿತರರು ಕೆಲಸ ನಿರ್ವಹಿಸುತ್ತಿದ್ದಾರೆ. ಹಸಲರು, ಸಾಮಾಜಿಕವಾಗಿ ತಮಗೆ ಗೌರವ ಸಿಗಬೇಕು. ನಮ್ಮ ಜಾತಿಯ ವಿವರಗಳು ಪುಸ್ತಕರೂಪದಲ್ಲಿ ಪ್ರಕಟವಾದರೆ ತಮ್ಮ ಜನಾಂಗಕ್ಕೆ ಅವಮಾನ ಎಂದು ಭಾವಿಸುತ್ತಾರೆ. ಬ್ರಾಹ್ಮಣೇತರ ಜನಾಂಗಗಳ ಪರಿಸರದಲ್ಲಿರುವ ಸೊರಬ, ಹೊಸನಗರ, ಶಿಕಾರಿಪುರ ಹಸಲರು ಶ್ರಮಜೀವಿಗಳು, ಕಷ್ಟಪಟ್ಟು ದುಡಿದು ಸ್ವಾವಲಂಬಿಜೀವನಕ್ಕೆ ಹಂಬಲಿಸುತ್ತಾರೆ. ಬ್ರಾಹ್ಮಣರ ಪರಿಸರಲದಲ್ಲಿ ಬೆಳೆದ ಹಸಲರಿಗೆ ಹುಟ್ಟಾಳು ಪದ್ಧತಿಯ ಹಳೆಯ ನೆನೆಪು ಮಾಸಿಲ್ಲ. ಹಿರೇಮನೆಯ ಹಸಲರಿಗೆ ಸರ್ಕಾರದಿಂದ ಸಮಸ್ತ ಅನುಕೂಲತೆಗಳನ್ನು ಕಲ್ಪಿಸಿದರೂ ಪರೋಕ್ಷವಾಗಿ ಬ್ರಾಹ್ಮಣರ ಮನೆಯ ಜೀತದಾಳುಗಳಾಗಿಯೇ ಇದ್ದಾರೆ. ದಾಸ್ಯ ಪ್ರವೃತ್ತಿ ಅವರಿಗೆ ಮೈಯುಂಡು ಹೋಗಿದೆ. ಬದಲಾವಣೆಗೆ ಕೆಲವು ತಲೆಮಾರುಗಳು ಕಳೆಯಬೇಕಾಗಿದೆ.

**ಕೊನೆ ಟಿಪ್ಪಣಿ**

೧. ಭಟ್.ಜಿ.ಎಸ್, ಹಸಲರ ಸಂಸ್ಕೃತಿ, ೧೯೯೩, ಪು.೧೨೯

೨. ಚಂದ್ರಶೇಖರ ಕಂಬಾರ, ಕನ್ನಡ ಜಾನಪದ ವಿಶ್ವಕೋಶ, ಸಂಪುಟ-೨, ೧೯೮೫, ಪು.೧೪೮

೩. ಹುಚ್ಚಪ್ಪ ಮಾಸ್ತ್ರ ಎನ್, ಹಸಲರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪, ಪು.೧೨೩

೪. ಬೋರಲಿಂಗಯ್ಯ ಹಿ.ಚಿ., ಕರ್ನಾಟಕ ಜನಪದ ಕಲೆಗಳ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬, ಪು.೧೧೭

ಅಧ್ಯಾಯ ಐದು

# ಬೇಡ ಬುಡಕಟ್ಟು ಮತ್ತು ಹಸಲರು: ಆದಿವಾಸಿ ಆಚರಣೆಗಳ ತೌಲನಿಕ ವಿವೇಚನೆ

ಅಧ್ಯಾಯ ೫

# ಬೇಡ ಬುಡಕಟ್ಟು ಮತ್ತು ಹಸಲರು: ಆದಿವಾಸಿ ಆಚರಣೆಗಳ ತೌಲನಿಕ ವಿವೇಚನೆ

ಶಿವಮೊಗ್ಗ ಜಿಲ್ಲೆಯಾದ್ಯಂತ ನಗರ ಮತ್ತು ಗ್ರಾಮೀಣ ಭಾಗದಲ್ಲಿ ನೆಲೆಸಿರುವ ಬೇಡ ಬುಡಕಟ್ಟು ಮತ್ತು ಹಸಲರು ಸಮುದಾಯವನ್ನು ಗಮನಿಸಿದಾಗ ಈ ಎರಡು ಸಮುದಾಯಗಳಲ್ಲಿ ಸಾಕಷ್ಟು ಬದಲಾವಣೆಗಳು ಭಿನ್ನತೆ ಕಂಡು ಬರುತ್ತವೆ. ಹಸಲರು ವಾಸಿಸುವ ಪ್ರದೇಶಗಳಿಗೆ ಹಾಡಿಗಳೆಂದು ಕರೆದರೆ, ಬೇಡರು ವಾಸಿಸುವ ಪ್ರದೇಶಗಳಿಗೆ ಗ್ರಾಮ ಅಥವಾ ಹಳ್ಳಿಗಳೆಂದು ಕರೆಯುತ್ತಾರೆ. ಈ ಎರಡು ಸಮುದಾಯದಲ್ಲಿ ಆದಿವಾಸಿ ಆಚರಣೆಗಳಲ್ಲಿ ವ್ಯತ್ಯಾಸವಿರುವುದನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ. ದಸರಾ ಹಬ್ಬದಲ್ಲಿ ಆಯುಧ ಪೂಜೆ ದಿನ ಬೇಡರು ಮಡಿದಂತ ಹಿರಿಯರಿಗೆ ಹೋಳಿಗೆ ಕಡುಬು ಸಿಹಿ ಊಟದ ಎಡೆಯನ್ನು ಹಾಕುತ್ತಾರೆ. ಆದರೆ ಹಸಲರು ಬುಡಕಟ್ಟು ದೀಪಾವಳಿ ಹಬ್ಬದ ದಿನ ಹಿರಿಯರಿಗೆ ಎಡೆಯನ್ನು ಹಾಕುತ್ತಾರೆ. ಯಾವುದೇ ಕಾರಣಕ್ಕೂ ಹಸಲರು ಎಡೆ ಹಾಕುವ ತನಕ ಯಾವುದೇ ಪದಾರ್ಥವನ್ನು, ಆಹಾರವನ್ನು ಸೇವಿಸುವುದಿಲ್ಲ. ಹಿರಿಯರಿಗೆ ಎಡೆ ಹಾಕಿದ ನಂತರವೇ ಅವರು ಊಟವನ್ನು ಮಾಡುತ್ತಾರೆ. ಬೇಡರಲ್ಲಿ ಮಗುವಿನ ಜನನವಾದರೆ, ಆ ಮಗುವಿನ ತಾಯಿಯ ಮನೆಯಲ್ಲಿಯೇ ನಾಮಕರಣಶಾಸ್ತ್ರ ನಡೆಯುತ್ತದೆ. ಆದರೆ ಹಸಲರಲ್ಲಿ ಈ ಕ್ರಿಯೆ ಭಿನ್ನವಾಗಿದೆ. ಬೇಡ ಮತ್ತು ಹಸಲರು ಸಮುದಾಯವನ್ನು ಈ ಅಧ್ಯಯನದಲ್ಲಿ ಅವರ ಆಚರಣೆಗಳನ್ನು ತೌಲನಿಕವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಸಂದರ್ಭದಲ್ಲಿ ತೌಲನಿಕ ಅಧ್ಯಯನವು ಬಹುಮುಖ್ಯ ಪಾತ್ರವನ್ನು ವಹಿಸುತ್ತದೆ. ತೌಲನಿಕ ವಿಧಾನವು ಬಹುಕಾಲದಿಂದಲೂ ಸಮಾಜ ವಿಜ್ಞಾನಗಳಲ್ಲಿ ಪ್ರಚಲಿತದಲ್ಲಿದೆ. ಸಮಾಜಶಾಸ್ತ್ರದ ಅಧ್ಯಯನದಲ್ಲಿ ಪ್ರಯೋಗಕ್ಕೆ ಹೆಚ್ಚು ಅವಕಾಶವಿಲ್ಲದೇ ಅವಲೋಕನದಿಂದಲೇ ಅನೇಕ ಮಾಹಿತಿಯನ್ನು ಸಂಗ್ರಹಿಸಲು ಸಾಧ್ಯವಾಗುತ್ತದೆ. ಸಮಾಜದ ಪ್ರಕ್ರಿಯೆಗಳು ಹಲವು ಬಾರಿ ಹತ್ತಾರು ವರ್ಷಗಳ ಅಂತರಕ್ಕೆ ಪಸರಿಸುತ್ತವೆ. ಹತ್ತಾರು ವರ್ಷಗಳವರೆಗೆ ಕಾದು ಕುಳಿತು, ಸಾಮಾಜಿಕ ಘಟನೆಗಳನ್ನು ಅವಲೋಕಿಸಲು ಸಾಧ್ಯವಿಲ್ಲ. ಆದ್ದರಿಂದ ವಿವಿಧ ಸಂದರ್ಭಗಳನ್ನೊಳಗೊಂಡ ಸಮಾಜಗಳನ್ನು ಹೋಲಿಸಿ ಆ ಸಂದರ್ಭಗಳ ವ್ಯತ್ಯಾಸಕ್ಕೆ ಕಾರಣಗಳನ್ನು ನಿರ್ಣಯಿಸಲಾಗಿದೆ. ಅಧ್ಯಯನ ಕ್ಷೇತ್ರ ಶಿವಮೊಗ್ಗ ಜಿಲ್ಲೆಯ ಬೇಡರು ಮತ್ತು ಹಸಲರು ಬುಡಕಟ್ಟು ಸಮುದಾಯಗಳನ್ನು ಕುರಿತು ಅವರ ಆದಿವಾಸಿ ಆಚರಣೆಗಳನ್ನು ಕುರಿತು

ತೌಲನಿಕ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಜೊತೆಗೆ ಈ ಎರಡು ಸಮುದಾಯಗಳ ನಡುವಿನ ಸಾಮ್ಯತೆ ಮತ್ತು ವ್ಯತ್ಯಾಸವನ್ನು ಅರಿತುಕೊಳ್ಳುವ ಪ್ರಮಾಣಿಕ ಕೆಲಸವನ್ನು ಮಾಡಲಾಗಿದೆ. ಶಿವಮೊಗ್ಗ ಜಿಲ್ಲೆಯ ನಗರ ಮತ್ತು ನಗರಕ್ಕೆ ಹತ್ತಿರುವ ಗ್ರಾಮಗಳಲ್ಲಿನ ಬೇಡರು ನಾಗರಪಂಚಮಿ, ಸಂಕ್ರಾಂತಿ ಮತ್ತು ಕಾರಹುಣ್ಣಿಮೆ ಹಬ್ಬಗಳನ್ನು ನಾಮಕಾವಸ್ಥೆಗಾಗಿ ಆಚರಿಸುತ್ತಾರೆ. ಯಾವುದೇ ಭಕ್ತಿಪೂರ್ವಕ, ಮಡಿ-ಮೈಲಿಗೆಯನ್ನು ಅನುಸರಿಸುವುದಿಲ್ಲ. ನಗರೀಕರಣದ ಪ್ರಭಾವಕ್ಕೆ ಒಳಗಾಗಿರುತ್ತಾರೆ. ಆದರೆ ಹಸಲ ಸಮುದಾಯ ನಾಗರಪಂಚಮಿ, ಸಂಕ್ರಾಂತಿ ಮತ್ತು ಕಾರಹುಣ್ಣಿಮೆ ಹಬ್ಬಗಳನ್ನು ತಮ್ಮ ಹಾಡಿಗಳಲ್ಲಿ ಸಂತೋಷ ಸಂಭ್ರಮದಿಂದ ಈ ಹಬ್ಬಗಳನ್ನು ಆಚರಿಸುತ್ತಾರೆ. ಸಾಕಷ್ಟು ಮಡಿ-ಮೈಲಿಗೆ ಅವರು ಕಂಡು ಬರುತ್ತದೆ. ಋತುಮತಿಶಾಸ್ತ್ರ, ಪ್ರೌಢಸಂಸ್ಕಾರಗಳು ಹಸಲರು ಮತ್ತು ಬೇಡ ಬುಡಕಟ್ಟುಗಳು ಸಣ್ಣ ಪುಟ್ಟ ವ್ಯತ್ಯಾಸಗಳಿದ್ದರೂ ಆಚರಣೆಗಳು ಮಾತ್ರ ಸಂಭ್ರಮದ ಸಂತೋಷದ ಪ್ರತೀಕಗಳಾಗಿರುತ್ತವೆ. ಬೇಡರು ಮತ್ತು ಹಸಲರು ಯಾವುದೇ ಕಾರಣಕ್ಕೂ ಬಾಲ್ಯವಿವಾಹಕ್ಕೆ ಆಸ್ಪದ ನೀಡಿದ ಸಂಗತಿಗಳು ಇಲ್ಲ. ಬಾಲ್ಯ ವಿವಾಹ ವ್ಯವಸ್ಥೆಗೆ ಈ ಎರಡು ಸಮುದಾಯದಲ್ಲಿ ವಿರೋಧವಿದೆ. ಬೇಡ ಸಮುದಾಯ ಮತ್ತು ಹಸಲರು ಸಮುದಾಯದಲ್ಲಿ ಹೆಣ್ಣು ಮಗುವಾಗಲಿ ಅಥವಾ ಗಂಡು ಮಗುವಾಗಲಿ ಸಂತೋಷ ಪಡುತ್ತಾರೆ. ಉದಾ : ಒಬ್ಬ ವ್ಯಕ್ತಿಗೆ ಎರಡರಿಂದ ಮೂರು ಹೆಣ್ಣು ಮಕ್ಕಳ ಜನನವಾದರೂ ಸಂತಸದಿಂದ ಸ್ವೀಕರಿಸುತ್ತಾರೆ. ಯಾವುದೇ ಕಾರಣಕ್ಕೂ ತಾವು ಮದುವೆಯಾದ ಮಹಿಳೆಯನ್ನು ಹೆಣ್ಣು ಮಕ್ಕಳನ್ನು ಹಡೆದ ಕಾರಣಕ್ಕಾಗಿ ನಿಂದಿಸುವುದಿಲ್ಲ. ಗಂಡು ಸಂತನಕ್ಕಾಗಿ ಇನ್ನೊಂದು ಮದುವೆಯಾಗುವುದಿಲ್ಲ. ಹಾಗೆಯೇ ಮುಂದುವರಿದು, ಶಿವಮೊಗ್ಗ ಜಿಲ್ಲೆಯಾದ್ಯಂತ ಬೇಡರು ಕುಮಾರರಾಮನ ಮೂರ್ತಿಗಳನ್ನು ಪುಟ್ಟಿಯಲ್ಲಿ ಕೂಡಿಸಿಕೊಂಡು ರಾತ್ರಿಯಿಂದ ಬೆಳತನಕ ಡೊಳ್ಳುಕುಣಿತ, ಕೋಲಾಟ, ಭಜನೆ ಮೂಲಕ ಸಂಭ್ರಮದಿಂದ ಹಬ್ಬವನ್ನು ಮಾಡಿದರೆ ಹಸಲರು ಕುಮಾರರಾಮನ ಹಬ್ಬವನ್ನು ಯಾವುದೇ ಕಾರಣಕ್ಕೂ ಮಾಡುವುದಿಲ್ಲ. ಈ ಹಬ್ಬಕ್ಕೂ ನಮಗೂ ಯಾವುದೇ ಸಂಬಂಧವಿಲ್ಲವೆಂಬ ಭಾವನೆ ಅವರಲ್ಲಿದೆ. ಬೇಡರು ವಾಸಿಸುವ ಹಳ್ಳಿಗಳಲ್ಲಿ ಜೋಕುಮಾರನ ಹಬ್ಬವನ್ನು ಆಚರಿಸಿದರೆ, ಹಾಡಿಗಳಲ್ಲಿ ಹಸಲರು ಜೋಕುಮಾರನ ಹಬ್ಬವನ್ನು ಆಚರಿಸುವುದಿಲ್ಲ. ಶಿವಮೊಗ್ಗ ಜಿಲ್ಲೆಯಾದ್ಯಂತ ಪಸರಿಸಿರುವ ಹಸಲರು ಅಂಟಿಗೆ-ಪಂಟಿಗೆ ಜನಪದ ಕಲೆಯನ್ನು ದೀಪಾವಳಿ ಹಬ್ಬದಂದು ಪ್ರದರ್ಶಿಸುತ್ತಾರೆ. ಆದರೆ ಬೇಡರು ಡೊಳ್ಳು ಕುಣಿತ, ಕೋಲಾಟ ಮತ್ತು ಭಜನೆಯಂತ ಕಲೆಯನ್ನು ಕರಗತ ಮಾಡಿಕೊಂಡು ಹಬ್ಬ ಹರಿದಿನಗಳನ್ನು ಮಾಡುತ್ತಾರೆ.

ಬೇಡರು ಮಾಟ-ಮಂತ್ರವನ್ನು ಯಾವುದೇ ಕಾರಣಕ್ಕೂ ನಂಬುವುದಿಲ್ಲ ಜೊತೆಗೆ ಈ ಕುರಿತು ಯಾವುದೇ ಆಚರಣೆಯನ್ನು ಮಾಡುವುದಿಲ್ಲ. ಆದರೆ ಹಸಲರು ಸಮುದಾಯದವರು ಮಾಟ-ಮಂತ್ರವನ್ನು ನಂಬುತ್ತಾರೆ. ಮಂತ್ರವಾದಿಯಿಂದ ಬಗೆ ಬಗೆಯ ಆಚರಣೆಗಳನ್ನು ಮಾಡಿ ಅದರಿಂದ ಪಾರಾಗಿದ್ದೇವೆ ಎಂದು ಭಾವಿಸುತ್ತಾರೆ. ಬೇಡರು ಹೊಲಗದ್ದೆಗಳಿಗೆ ಪ್ರತಿವರ್ಷವೂ ಪೂಜೆಯನ್ನು ಮಾಡಿ ಎಡೆಹಾಕಿ ಭೂದೇವಿಯ ಮೊರೆ ಹೋಗಿ ಬಡತನವನ್ನು ಮತ್ತು ಬರಗಾಲವನ್ನು ನೀಗಿಸು

ಎಂದು ಭಯಭಕ್ತಿಯಿಂದ ಬೇಡಿಕೊಳ್ಳುತ್ತಾರೆ. ಅಲ್ಲದೇ, ಬೇಡರು ಮಹಿಳೆಯರ ಹೆರಿಗೆಗಳನ್ನು ಸರಕಾರಿ ಆಸ್ಪತ್ರೆ ಅಥವಾ ಖಾಸಗೀ ಆಸ್ಪತ್ರೆಗಳಲ್ಲಿ ಮಾಡಿಸುವುದು ಹೆಚ್ಚು. ಒಂದು ವೇಳೆ ಹೆರಿಗೆ ಸಮಯದಲ್ಲಿ ತಾಯಿ ಅಥವಾ ಮಗು ಸಾವನ್ನಪ್ಪಿದರೆ ಅದನ್ನು ಕೇಡು ಎಂದು ಬಗೆದು ಮೌನಕ್ಕೆ ಶರಣಾಗುತ್ತಾರೆ. ಆದರೆ ಹಸಲ ಸಮುದಾಯ ಮಹಿಳೆಯರ ಹೆರಿಗೆಗಳು ಮನೆಯಲ್ಲಿಯೇ ನಡೆಯುತ್ತವೆ. ಅದಕ್ಕಾಗಿ "ಸೂಲಗಿತ್ತಿ"ಯರು ಹೆರಿಗೆಯನ್ನು ಸಲಿಸಾಗಿ ಮಾಡುತ್ತಾರೆಂಬ ನಂಬಿಕೆ ಹಸಲರಲ್ಲಿದೆ. ಬೇಡ ಜನಾಂಗವು ರಾಶಿಪೂಜೆಯನ್ನು ಅತ್ಯಂತ ಸಡಗರ ಸಂಭ್ರಮದಿಂದ ಆಚರಿಸುತ್ತಾರೆ. ತಾವು ಬೆಳೆದ ಅಥವಾ ಅವರ ಮಾಲೀಕರಾದ ಜಮೀನ್ದಾರರು ಅಥವಾ ವಾರಸುದಾರರು ಬೆಳೆದ ಬೆಳೆಯನ್ನು ಕಣದಿಂದ ಕಣಜಕ್ಕೆ ಸಾಗಿಸುವ ಮೊದಲು ರಾಶಿಯನ್ನು ಸಂಪ್ರದಾಯಿಕವಾಗಿ ಪೂಜಿಸುವುದನ್ನು ರಾಶಿಪೂಜೆ ಎಂದು ಕರೆಯುತ್ತಾರೆ. ಒಕ್ಕಣೆ ಕೆಲಸ ಮುಗಿದ ಬಳಿಕ ಧಾನ್ಯಗಳನ್ನು ಕಣದಲ್ಲಿ ರಾಶಿ ಹಾಕುತ್ತಾರೆ. ಬೇಡರು ಬೆಳೆದ ಭತ್ತ, ಜೋಳ, ಮೆಕ್ಕೆಜೋಳ, ಬಾಳೆಗೊನೆ–ಇತ್ಯಾದಿಯಾಗಿ ಅವರ ಪದ್ಧತಿಯಂತೆ ಬೆಳೆದ ಬೆಳಯಲ್ಲಿ ಒಂದಷ್ಟು ಧಾನ್ಯಗಳನ್ನು ಪ್ರಕೃತಿ ಮಾತೆಗೆ ಅರ್ಪಿಸುವ ಆಚರಣೆ ಇಂದಿಗೂ ಬೇಡರಲ್ಲಿದೆ. ಪ್ರಕೃತಿ ಜೊತೆಗೆ ಅರ್ಪಿಸಿದ ಧಾನ್ಯವನ್ನು ಅರ್ಚಕರು ಪಡೆದುಕೊಳ್ಳುತ್ತಾರೆ. ಸಗಣಿಯಿಂದ ಸಾರಿಸಿ ರಂಗೋಲಿಯಿಂದ ಅಲಂಕರಿಸಿದ ಕಣದಲ್ಲಿ ರಾಶಿಯನ್ನು ದೊಡ್ಡರಾಶಿ, ದೇವರರಾಶಿ ಅಥವಾ ಗೌರಮ್ಮನರಾಶಿ–ಎಂದು ರಾಶಿಯನ್ನು ವಿಂಗಡಿಸುತ್ತಾರೆ. ಅಲ್ಲದೇ ಬೇಸಾಯದಲ್ಲಿ ಉಪಯೋಗಿಸಿದ ಎಲ್ಲ ಕೃಷಿ ಉಪಕರಣಗಳನ್ನು ಸಹ ಪೂಜಿಸುತ್ತಾರೆ. ರಾಶಿಯನ್ನು ಮಾವಿನ ಎಲೆ, ತುಂಬೆಹೂವು, ಕಣಗಲಿ ಹೂ ಇತ್ಯಾದಿಗಳಿಂದ ಶೃಂಗರಿಸುತ್ತಾರೆ. ಹಾಲು, ತುಪ್ಪ, ಊದುಬತ್ತಿ, ಕರ್ಪೂರ, ಅಡಿಕೆ ಎಲೆ, ಹಣ್ಣುಗಳು, ಬಾಳೆಹಣ್ಣು ಮತ್ತು ಕಾಯಿ ಇತ್ಯಾದಿ ಪೂಜಾ ಸಾಮಾಗ್ರಿಗಳನ್ನು ಪುಟ್ಟಿಯಲ್ಲಿ ಇಟ್ಟುಕೊಂಡು ರಾಶಿಯನ್ನು ಮೂರು ಬಾರಿ ಸುತ್ತುತ್ತಾರೆ. ಊಟವನ್ನು ಕವಳವೆಂದು, ಪೊರಕೆಯನ್ನು ಬುದ್ಧಿವಂತನೆಂದು, ಬೂದಿಗೆ ವಿಭೂತಿ ಎಂದು, ಗುಡಿಸುವುದಕ್ಕೆ ಬೆಳಗು ಎಂದು, ಎತ್ತುಗಳಿಗೆ ಬಸ್ವನೆಂದು, ಕುಡುಗೋಲಿಗೆ ಆಯುಧವೆಂದು ಶಿವಮೊಗ್ಗ ಜಿಲ್ಲೆಯಲ್ಲಿರುವ ನಗರ ಮತ್ತು ಗ್ರಾಮೀಣ ಭಾಗದಲ್ಲಿರುವ ಬೇಡರು ಇವುಗಳನ್ನು ಪೂಜಿಸುವ ವಿಶಿಷ್ಟ ಆಚರಣೆಯನ್ನು ನಾವು ನೋಡಬಹುದಾಗಿದೆ. ಆದರೆ ಹಸಲರು ಸಮುದಾಯದ ಪುರುಷರು ಭತ್ತವನ್ನು ರಾಶಿ ಮಾಡುವುದಿಲ್ಲ. ಅವರಿಗೆ ಮೂಲದಿಂದ ಬಂದ ವೃತ್ತಿಯೆಂದರೆ ಅಡಕೆ ಮರವನ್ನು ಏರುವುದು, ಅಡಿಕೆ ಬಿಡಿಸುವುದು, ಮರದಿಂದ ಮರಕ್ಕೆ ಜಿಗಿಯುವುದು ಇವರ ವೃತ್ತಿಯಾಗಿದೆ. ಶಿವಮೊಗ್ಗ ಜಿಲ್ಲೆಯ ಸಾಗರ ನಗರದಲ್ಲಿ ನಡೆಯುವ ಮಾರಿಕಾಂಬೆ ಜಾತ್ರೆಯನ್ನು ಸಾಗರ ಮತ್ತು ಸಾಗರ ತಾಲೂಕಿನ ಗ್ರಾಮಗಳಲ್ಲಿರುವ ಬೇಡರು ವಿಜೃಂಭಣೆಯಿಂದ ಈ ದೇವಿಯ ಆಚರಣೆಯನ್ನು ಮಾಡುತ್ತಾರೆ. ಈ ದೇವತೆ ಉಗ್ರದೇವತೆಯಾಗಿರುವುದನ್ನು ಕುರಿ, ಕೋಳಿಯನ್ನು ಬಲಿಕೊಡುತ್ತಾರೆ. ಆದರೆ ಹಸಲ ಸಮುದಾಯದವರು ಈ ದೇವಿಯ ಜಾತ್ರೆಯಲ್ಲಿ ಪಾಲ್ಗೋಳ್ಳುವುದು ವಿರಳ. ಕುರಿ ಮತ್ತು ಕೋಳಿಯನ್ನು ಇವರು ಬಲಿಕೊಡುವುದಿಲ್ಲ ಈ ಆಚರಣೆ ಅವರಲ್ಲಿ ಇಲ್ಲ. ಗ್ರಾಮ ಮತ್ತು ನಗರಗಳಲ್ಲಿ ಮಾಂಸಾಹಾರಿ

ಊಟಕ್ಕೆ ಕರೆದರೆ, ಮಾತ್ರ ಹಸಲ ಸಮುದಾಯದವರು ಊಟಕ್ಕೆ ಹೋಗುತ್ತಾರೆ. ಭೂದೇವಿಯ ತೃಪ್ತಿ ಪಡಿಸಲು, ಬೆಳೆದ ಫಸಲನ್ನು ಪೂಜಿಸಲು ಬೇಡರು ಚರಗ ಆಚರಣೆಯನ್ನು ಪ್ರತಿವರ್ಷ ತಪ್ಪದೇ ಆಚರಿಸುತ್ತಾರೆ. ಆದರೆ ಹಸಲರು ಸಮುದಾಯದವರು ಚರಗ ಆಚರಣೆಯನ್ನು ಮಾಡುವುದಿಲ್ಲ. ಚರಗವೆಂದರೆ, ಬೇಡರು ಮೊದಲು ತಮ್ಮ ತಮ್ಮ ಮನೆಗಳನ್ನು ಆಕಳು ಗೋಮೂತ್ರದಿಂದ ಶುದ್ಧಗೊಳಿಸುತ್ತಾರೆ. ಚರಗ ಮಾಡುವ ಸಲುವಾಗಿ ಹೋಳಿಗೆ, ಕಡುಬು, ಪಾಯಸ, ಅನ್ನ ಸಾಂಬಾರು ಮತ್ತು ಬದನೆಕಾಯಿ ಪಲ್ಯವನ್ನು ಮಾಡಿಕೊಂಡು ಹೊಸ ಬಿದಿರಿನ ಬುಟ್ಟಿಯಲ್ಲಿ ಇಟ್ಟುಕೊಂಡು ಮೊದಲು ಭೂದೇವಿಗೆ ಎಡೆ ಹಾಕಿ ಹೋಳಿಗೆ, ಹುಗ್ಗಿ, ಕಡುಬನ್ನು ಹೊಲಗದ್ದೆಯ ಮಣ್ಣನ್ನು ಬೆರೆಸಿ ಗದ್ದೆಯ ತುಂಬಾ ಹೂಲಿಗ್ಯ ಹೂಲಿಗ್ಯೊವೆಂದು ಉಗ್ಗುವುದುಂಟು. ಒಬ್ಬ ರೈತ ಈ ಎಡೆಯನ್ನು ಉಗ್ಗಿದರೆ ಇನ್ನೊಬ್ಬ ರೈತ ಒಂದು ತಾಮ್ರದ ಚರಗಿಯಲ್ಲಿ ನೀರನ್ನು ಚಿಮುಕಿಸುತ್ತಾ ಸಾಗುತ್ತಾರೆ. ಚರಗ ಚಲ್ಲುವವರೆಗೆ ಕುಟುಂಬದ ಯಾವುದೇ ವ್ಯಕ್ತಿಗಳು ಮಾತನಾಡುವಂತಿಲ್ಲ. ಚರಗ ಚೆಲ್ಲಿದ ಮೇಲಿ ಭೂದೇವಿಯ ಪ್ರಸಾದವೆಂದು ಊಟ ಮಾಡುತ್ತಾರೆ. ಇನ್ನೂ ಕೆಲವು ಬೇಡ ರೈತ ಚರಗವೆಂದು ಕುರಿ ಬಲಿ ನೀಡಿ ಆ ಮೂಲಕ ಭೂದೇವಿಗೆ ಎಡೆಯನ್ನು ಹಾಕುತ್ತಾರೆ. ಆದರೆ ಶಿವಮೊಗ್ಗ ಜಿಲ್ಲೆಯಲ್ಲಿರುವ ಹಸಲರು ಬುಡಕಟ್ಟು ಸಮುದಾಯದವರು ಚರಗ ಚೆಲ್ಲುವ ಆಚರಣೆ ಅಥವಾ ಚರಗದ ಆಚರಣೆಯಿಂದ ದೂರವಿರುತ್ತಾರೆ. ಚರಗದ ವಿಶಿಷ್ಟ ಆಚರಣೆ ಇಂದಿಗೂ– ಶಿವಮೊಗ್ಗ ಜಿಲ್ಲೆಯ ಬೇಡರಲ್ಲಿ ಕಾಣಬಹುದಾಗಿದೆ.

ಬದುಕಿನ ರೀತಿ ನೀತಿಗಳ ಆಧಾರದ ಮೇಲೆ ಸಂಸ್ಕೃತಿ ರೂಪುಗೊಳ್ಳುತ್ತದೆ. ಆ ಸಂಸ್ಕೃತಿ ಇರುವ ಭೌಗೋಳಿಕತೆ, ಚಾರಿತ್ರಿಕತೆ, ಸಾಮಾಜಿಕತೆ, ಸಾಂಸ್ಕೃತಿಕತೆ, ಭಾಷಿಕ ಕಾರಣಗಳು, ಅವಲಂಬಿತ ಮೌಲ್ಯಗಳು–ಹೀಗೆ ಹತ್ತು ಹಲವಾರು ಅಂಶಗಳು ಸಾಂಸ್ಕೃತಿಕ ಚಹರೆಗೆ ಕಾರಣವಾಗಿರುತ್ತವೆ. ಉದಾ: ಬೇಡ ಬುಡಕಟ್ಟು ಕರ್ನಾಟಕ ಉದ್ದಗಲಕ್ಕೂ ಹರಡಿದ್ದು, ರಾಯಚೂರು, ಶಿವಮೊಗ್ಗ, ಬಳ್ಳಾರಿ, ಕೊಪ್ಪಳ, ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ಮತ್ತು ಮೊಳಕಾಲ್ಮೂರು ತಾಲೂಕುಗಳಲ್ಲಿ ಅತಿ ದಟ್ಟವಾಗಿ ನೆಲೆಸಿರುವುದು ಕಂಡು ಬರುತ್ತದೆ. ಇವರ ಮನೆಯ ಮಾತು ತೆಲುಗು ಆದರೆ ಶಿವಮೊಗ್ಗ ಜಿಲ್ಲೆಯಾದ್ಯಂತ ಕಂಡು ಬರುವ ಬೇಡರ ಮನೆಯ ಮಾತು ಕನ್ನಡ. ಭೌಗೋಳಿಕತೆಯನ್ನು ಮೀರಿ ಸಾಮಾಜಿಕ, ಸಾಂಸ್ಕೃತಿಕ ಬದಲಾವಣೆಯನ್ನು ಹೊಂದಿರುವ ಬುಡಕಟ್ಟಾಗಿದೆ. ಬದುಕಿನ ವಿಧಾನಗಳು, ನಂಬಿಕೆಗಳನ್ನು ವಿಶ್ಲೇಷಿಸಲು ಅನುಕೂಲವಾಗುವಂತಿದೆ. ಒಂದು ಸನ್ನಿವೇಶದಲ್ಲಿ ವಾಸಿಸುವ ಸಮುದಾಯಗಳು ಹಲವಾರಿದ್ದು, ಅವುಗಳಲ್ಲಿ ಬೇಡ ಸಮುದಾಯ ತನ್ನ ಚಹರೆಯನ್ನು ವಿಲೀನಗೊಳಿಸಿಕೊಂಡು ಪ್ರಧಾನವಾಗಿ ಈ ಬುಡಕಟ್ಟು ಸಮಾಜದ ಮುಖ್ಯವಾಹಿನಿಗೆ ಬರಲು ಪ್ರಯತ್ನಿಸುತ್ತದೆ. ಡಾ. ವೆರಿಯರ್ ಎಲ್ವಿನ್ ಅವರು ವೊಂಗೆ, ಜರ್‍ವಾ ಬುಡಕಟ್ಟು ಕುರಿತು ಈ ರೀತಿ ಹೇಳುತ್ತಾರೆ. ಆಧುನಿಕತೆಯ ಪ್ರಭಾವಕ್ಕೆ ಸಿಲುಕದೆ ತಮ್ಮ ಮೂಲದ ಸಂಸ್ಕೃತಿಯನ್ನು ಕಾಯ್ದುಕೊಂಡು ಬಂದವರು. ಇವರಿಗೆ ತಮ್ಮ ಆದಿಮ ಬದುಕಿನ ಬಗೆಗೆ ಅಪಾರ ಅಭಿಮಾನವಿದೆ. ಸಾಂಘಿಕ ಜೀವನ

ಶೈಲಿ ಇವರದು. ಕಲೆ, ಸಂಗೀತ, ಸಾಹಿತ್ಯ ಪರಂಪರೆಯನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ಬಂದವರು. ಅವರು ವಾಸಿಸುತ್ತಿರುವ ಸುತ್ತಲಿನ ಭೌಗೋಳಿಕ ಪರಿಸರ ಅವರ ಮೂಲ ಸಂಸ್ಕೃತಿಯನ್ನು ಕಾಯ್ದುಕೊಳ್ಳುವುದಕ್ಕೆ ಸಹಕಾರಿಯಾಗಿದೆ. ಶಿವಮೊಗ್ಗ ಜಿಲ್ಲೆಯಲ್ಲಿ ಬೇಡರು ಅರಣ್ಯವಾಸ, ಬೆಟ್ಟ ಗುಡ್ಡವಾಸ ಅಥವಾ ಊರಿನ ಬಳಿಯಿದ್ದಾಗಲೂ ಪ್ರತ್ಯೇಕ ಕೇರಿ ಅಥವಾ ಹಟ್ಟಿಗಳಲ್ಲಿ ವಾಸ ಮಾಡುತ್ತಿದ್ದಾರೆ. ಅವರ ಬದುಕಿನ ಪರಿಸ್ಥಿತಿಯ ವಾಸ್ತವಾಂಶವೂ ಕೂಡ ಇದೇ ಆಗಿರುತ್ತದೆ. ಶಿವಮೊಗ್ಗ ಜಿಲ್ಲೆಯಲ್ಲಿ ನೆಲೆಸಿರುವ ಹಸಲರು ಬುಡಕಟ್ಟು ಸಮುದಾಯವು ಯತೇಚ್ಚವಾಗಿ ಹಾಡಿಗಳಲ್ಲಿ ವಾಸ ಮಾಡುವುದನ್ನು ಕಾಣಬಹುದಾಗಿದೆ. ಈ ಮೊದಲೇ ಶಿವಮೊಗ್ಗ ಜಿಲ್ಲೆ ಮಲೆನಾಡು ಎಂದು ಪ್ರಸಿದ್ಧಿ ಪಡೆದಿದೆ. ಈ ಮಲೆನಾಡಿನ ಸೊಬಗಿನಲ್ಲಿ ಹಸಲರು ಹಾಡಿಗಳಲ್ಲಿ ವಾಸ ಮಾಡುವುದರ ಮೂಲಕ ಪ್ರಕೃತಿಯ ಸೊಬಗನ್ನು ನೋಡಿ ಆನಂದಿಸಿ, ಜೀವನವನ್ನು ಮಾಡುತ್ತಿರುವುದನ್ನು ನಾವಿಂದು ಕಾಣಬಹುದಾಗಿದೆ. ಬೇಡ ಮತ್ತು ಹಸಲ ಸಮುದಾಯವು ತಮ್ಮ ತಮ್ಮ ಸಂಸ್ಕೃತಿಯ ಚಹರೆಗಳನ್ನು ಕಾಪಾಡಿಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ಉತ್ಪಾದನಾ ಕ್ರಿಯೆಗಳಲ್ಲಿ ಇರುವ ಸಾಪೇಕ್ಷ ಪ್ರತ್ಯೇಕತೆಯೂ ಬುಡಕಟ್ಟು ಚಹರೆ ಉಳಿದುಕೊಂಡು ಬರಲು ಕಾರಣವಾಗಿದೆ. ಉದಾ : ಪಶುಪಾಲನೆ, ಬೇಟೆಗಾರಿಕೆ, ಅರಣ್ಯ ಉತ್ಪನ್ನ ಸಂಗ್ರಹ–ಮುಂತಾದವು. ಬೇಡ ಬುಡಕಟ್ಟು ತನ್ನ ಸಾಮಸ್ಕೃತಿಕ ಚಹರೆಗಳನ್ನು ಬಿಟ್ಟುಕೊಡದೇ ಉಳಿಸಿಕೊಂಡಿರುವುದು, ಗಮನೀಯ ಸಂಗತಿ. ಪರಂಪರಾಗತ ಕುಲ ಕಸುಬು ಹಾಗೂ ಕುಲ ಲಾಂಛನಕ್ಕೆ ಪರಸ್ಪರ ಸಂಬಂಧವಿರುತ್ತದೆ. ಒಂದಕ್ಕೊಂದು ಪೂರಕವಾಗಿರುತ್ತವೆ. ಆದ್ದರಿಂದ ಕುಲ ಲಾಂಛನವು ದೈವತ್ವದ ಮಟ್ಟಕ್ಕೇರಿ ಪೂಜೆಗೆ ಒಳಗಾಗಿರುತ್ತದೆ. ಬೇಡರು ಪೂಜಿಸುವ ಬಿಲ್ಲು–ಬಾಣಗಳು ಸಾಂಸ್ಕೃತಿವಾಗಿ ದೈವತ್ವದ ಸ್ಥಾನವನ್ನು ಪಡೆದು ಪೂಜೆಗಳಿಗೆ ಪ್ರಾಶಸ್ತ್ಯ ಪಡೆಯುತ್ತವೆ. ಏಕೆಂದರೆ, ಬೇಡರು ತಮ್ಮ ಮೂಲ ಕಸುಬು ಎನಿಸಿದ ಬೇಟೆಗಾರಿಕೆಗೆಂದು ವಿಶೇಷ ಆಯುಧಗಳಾಗಿರುತ್ತವೆ. ಹಾಗಾಗಿ ಇವು ಪೂಜ್ಯನೀಯ ಆಚರಣೆಗೆ ಒಳಪಡುತ್ತವೆ. ಈಗಲೂ ಶಿವಮೊಗ್ಗ ಬೇಡರ ಮನೆಯಲ್ಲಿ ಕತ್ತಿ, ಭರ್ಜಿ, ಈಟಿ, ಗಂಡು ಗೊಡಲಿ, ಚಿಪ್ಪುಗೊಡಲಿ, ಕೊಡಲಿ, ಕುಡುಗೋಲು, ಮಚ್ಚು, ಕೋವಿ, ಮುಂತಾದ ಆಯುಧಗಳು ಬೇಡರ ಮನೆಗಳಲ್ಲಿ ಇವೆ. ಈ ಎಲ್ಲ ಆಯುಧಗಳನ್ನು ದಸರಾದ ಆಯುಧ ಪೂಜೆ ದಿನ ಮತ್ತು ದೀಪಾವಳಿಯಲ್ಲಿ ಆಯುಧಗಳನ್ನು ಪೂಜೆಯನ್ನು ಮಾಡುತ್ತಾರೆ. ಹಸಲ ಸಮುದಾಯ ಈ ಆಚರಣೆಯನ್ನು ಮಾಡುವುದಿಲ್ಲ. ಬೇಡರಲ್ಲಿ ಇಂದಿಗೂ ಈ ಆಚರಣೆ ಪ್ರಚಲಿತದಲ್ಲಿದೆ. ಬೇಡರಲ್ಲಿ ಆಹಾರ ಪದಾರ್ಥಗಳು ಅವರ ನಂಬಿಕೆ ಆಚರಣೆಗಳ ಹಿನ್ನೆಲೆಯಲ್ಲಿ ಬಂದವುಗಳಾಗಿರುತ್ತವೆ. ಅವರು ಜೀವಿಸುವ ಪರಿಸರದಲ್ಲಿ ಸಿಗುವ ಪದಾರ್ಥಗಳು ಮುಖ್ಯವಾಗಿರುತ್ತವೆ. ಅವರ ಆಹಾರ ಪದ್ಧತಿಯಲ್ಲಿ ತಮ್ಮದೇ ಆದ ವೈಶಿಷ್ಟ್ಯತೆ ಮತ್ತು ನಿಷೇಧಗಳೇ ಆ ಬುಡಕಟ್ಟು ಸಮುದಾಯದ ಚಹರೆಯಾಗಿರುತ್ತದೆ. ಇಂದಿಗೂ ಬೇಡರು ಕುರಿ, ಕೋಳಿ ಮಾಂಸ, ಮೀನು, ರಾಗಿಮುದ್ದೆ, ಗೊಜ್ಜು ಅನ್ನ, ಕೆಂಪು ಚಟ್ನಿ, ತಂಬ್ಳಿ, (ಸುಟ್ಟ ಬದನೆಕಾಯಿಯಿಂದ ಮಾಡುತ್ತಾರೆ) ಅನ್ನ, ಬದನೆಕಾಯಿ, ಪಲ್ಯೆ, ಬೇಳೆ ಸಾರು, ಉಚ್ಚಿಕಾಯಿ ಚಟ್ನಿ,

ಮೊಸರು, ಮಜ್ಜಿಗೆ, ಬೆಣ್ಣೆ, ತುಪ್ಪ- ಇನ್ನಿತರ ಆಹಾರವನ್ನು ಸೇವಿಸುತ್ತಾರೆ. ಆದರೆ ಹಸಲರು ಯತೇಚ್ಛವಾಗಿ ಅಕ್ಕಿ ಮುದ್ದೆ, ಅಕ್ಕಿರೊಟ್ಟಿ, ಕೋಳಿಕಾಜ್ಜಯ,ಕೋಟೆಕಡಬು, ತಿಂಗಳಿಗೊಮ್ಮೆ ಕುರಿ ಮಾಂಸ, ಕೋಳಿ ಮಾಂಸ ಊಟ ಮಾಡುತ್ತಾರೆ. ಬೇಡರು ಹಬ್ಬ ಹರಿದಿನ ಮತ್ತು ಜಾತ್ರೆ ಉತ್ಸವಗಳಲ್ಲಿ ಹೋಳಿಗೆ, ಕಡುಬು, ಪಾಯಸ, ಹುಗ್ಗಿ, ಕೇಸರಿ ಬಾತ್, ಗಸಗಸಿ ಇನ್ನಿತರ ಆಹಾರಗಳನ್ನು ದೇವರಿಗೆ ಎಡೆ ಹಾಕಿ ಊಟ ಮಾಡುತ್ತಾರೆ. ಪ್ರತಿಯೊಂದು ಹಬ್ಬ, ಜಾತ್ರೆ ಬೇಡ ನಾಯಕರಿಗೆ ಸಂಭ್ರಮದ ಆಚರಣೆಗಳಾಗಿರುತ್ತವೆ. ಆದರೆ ಹಸಲರು ವರ್ಷಕ್ಕೊಮ್ಮೆ ದೀಪಾವಳಿ, ಸಂಕ್ರಾತಿ, ನಾಗರ ಪಂಚಮಿ ಇನ್ನಿತರ ಹಬ್ಬಗಳನ್ನು ಮಾಡುತ್ತಾರೆ. ಆ ಮೂಲಕ ದೇವರಿಗೆ ಕಡುಬು, ಅಕ್ಕಿ ರೊಟ್ಟಿ ಮತ್ತು ಅಕ್ಕಿ ಮೊದ್ದೆ ಇನ್ನಿತರ ಆಹಾರವನ್ನು ದೇವರಿಗೆ ಎಡೆ ಹಾಕುತ್ತಾರೆ. ಹಸಲರಿಗೆ ದೊಡ್ಡ ಹಬ್ಬವೆಂದರೆ ದೀಪಾವಳಿ. ಮಳೆಯ ಅತಂತ್ರ ಸ್ಥಿತಿಯಿಂದಾಗಿ ವ್ಯವಸಾಯ ಹೆಸರಿಗೆ ಮಾತ್ರ ಇದೆ. ಸತತ ಬರಗಾಲದಿಂದ ಬೇಡರ ಮೂಲ ಕಸುಬು, ಕೃಷಿ ಮತ್ತು ಪಶುಪಾಲನೆಯೂ ಇಲ್ಲವಾಗಿದೆ. ಪಶುಪಾಲನೆ, ವ್ಯವಸಾಯದ ಜೊತೆಗೆ, ಪ್ರಾಚೀನ ವೃತ್ತಿಯಾದ ಬೇಟೆಯೂ ಆಗಾಗ ಹಬ್ಬ-ಹರಿದಿನದ ಮಾರನೆಯ ದಿನಗಳಲ್ಲಿ ನಡೆಯುತ್ತಿತ್ತು. ಈಗ ಕಾಡುಗಳು ಉಳಿದಿಲ್ಲ. ಅದರಿಂದ ಬೇಟಯೂ ಇಲ್ಲ. ಬೇಟೆ, ಪಶುಪಾಲನೆ, ವ್ಯವಸಾಯ ಮೂರು ವೃತ್ತಿಗಳು ನಿಲ್ಲುವ ಹಂತಕ್ಕೆ ಬಂದು ನಿಂತಿವೆ. ಇವುಗಳ ಸಮೃದ್ಧಿ ಕುಗ್ಗಿದ ಮೇಲೆ ಸಹಜವಾಗಿಯೇ ಗ್ರಾಮ ದೇವತೆಗಳ ಆರಾಧನೆಯು, ಆಚರಣೆಗಳು ಆ ಸಂಬಂಧದ ಸಂಪ್ರದಾಯಗಳೂ ಕಡಿಮೆಯಾಗಿವೆ. ಈ ಸ್ಥಿತಿ ಶಿವಮೊಗ್ಗ ಜಿಲ್ಲೆಯ ನಗರ ಮತ್ತು ಗ್ರಾಮೀಣ ಭಾಗದ ಬೇಡ ಜನಾಂಗದಲಗದಲ್ಲಿದೆ. ಇಂತಹ ಸಂದರ್ಭದಲ್ಲಿ ಮೊದಲಿನ ಚಹರೆಗಳು ಉಳಿಯಲು ಸಾಧ್ಯವೇ? ಅದೇ ರೀತಿ ಹಸಲ ಸಮುದಾಯವು ಕೂಡ ಹಣವಿಲ್ಲದ ಕಾರಣ ಮತ್ತು ಸತತವಾದ ಬರಗಾಲದಿಂದಾಗಿ ಹಬ್ಬ ಹರಿದಿನ, ಜಾತ್ರೆಗಳನ್ನು ನಾಮಾಕವಸ್ಥೆಗಾಗಿ ಮಾಡುವಂತಹ ಪರಿಸ್ಥಿತಿ ಅವರಲ್ಲಿದೆ. ಈ ಆಚರಣೆಗಳು ಮುಂದೊಂದು ದಿನ ಏನಾಗುತ್ತವೆಯೋ ಎಂಬ ಚಿಂತೆ ಶಿವಮೊಗ್ಗ ಜಿಲ್ಲೆಯ ಬೇಡ ಮತ್ತು ಹಸಲರು ಬುಡಕಟ್ಟಿನಲ್ಲಿದೆ. ಪ್ರಕೃತಿಯ ಆರಾಧಕರಾದ ಶಿವಮೊಗ್ಗ ಜಿಲ್ಲೆಯ ಬೇಡರು ಕಾಲ ಕಾಲಕ್ಕೆ ಉಂಟಾದ ಧಾರ್ಮಿಕ ಪ್ರಭಾವಗಳಿಗೂ ಒಳಪಟ್ಟಿರುವುದುಂಟು ಸೂರ್ಯ, ಚಂದ್ರ, ಅಗ್ನಿ, ವಾಯು, ವರುಣ, ಭೂಮಿ, ಜಲ-ಪ್ರಕೃತಿಯ ಈ ಚೇತನಗಳೇ ಅವರ ಬದುಕಿಗೆ ನಾಂದಿಗಳಾಗಿದ್ದವು. ಆದರೆ ಸತತವಾಗಿ ಕಾಡುತ್ತಿರುವ ಬರಗಾಲ ನಾಯಕ ಮತ್ತು ಹಸಲರ ಸಮುದಾಯದ ನಿದ್ದೆಗೆಡಿಸಿದೆ. ಬೇಡ ನಾಯಕರು ತಮ್ಮ ಬುಡಕಟ್ಟು ಜೀವನಕ್ಕೆ ಅನೇಕ ರೀತಿಯ ಧಾರ್ಮಿಕ ಗುಣಗಳನ್ನು ಅಂಟಿಸಿಕೊಂಡಿದ್ದರು. ಪ್ರಕೃತಿಯನ್ನು ಆರಾಧಿಸುತ್ತಿದ್ದರು. ಆದರೆ ಕಾಲಕಾಲಕ್ಕೆ ಉಂಟಾದ ಧಾರ್ಮಿಕ ಪ್ರಭಾವಗಳಿಗೂ ಒಳಪಟ್ಟರು. ಹಾಗಾಗಿ ಅವರ ಕುಲಗೋತ್ರ ವಿಚಾರಗಳಲ್ಲಿ ಮತ್ತು ಸಾಂಪ್ರದಾಯಿಕ ಆಚರಣೆಗಳಲ್ಲಿ ವೈರುದ್ಯವನ್ನು ಕಾಣಬಹುದಾಗಿದೆ. ಅದರಂತೆ ಹಸಲ ಸಮುದಾಯವು ಕೂಡ ತನ್ನ ಮೂಲ ಆಚರಣೆಗಳನ್ನು ಮತ್ತು ಸಂಪ್ರದಾಯಗಳನ್ನು ಉಳಿಸಿಕೊಳ್ಳಲು ಪರದಾಡುತ್ತಿದೆ. ಶಿವಮೊಗ್ಗದ ಬೇಡರು ತಮ್ಮ ಗ್ರಾಮದಲ್ಲಿ

ನಡೆಯುವ ಹೆಣ್ಣು ದೇವತೆಯ ಜಾತ್ರೆಯ ದಿನದಂದು ಉದಾ : ಮಂಗಳವಾರ ನಡೆದರೆ ಅಂದು ಆ ದೇವತೆಗೆ ಹೋಳಿಗೆ, ಪಾಯಸ ಮತ್ತು ಕಡುಬು ಅಂದರೆ ಸಿಹಿ ಆಹಾರವನ್ನು ಎಡೆ ಹಾಕುತ್ತಾರೆ. ಮೂರನೇಯ ದಿನ ಕುರಿ ಕೋಳಿ ಕಡಿದು ದೇವತೆಗೆ ಎಡೆ ಹಾಕುತ್ತಾರೆ. ಅಂದು ಸಂಜೆ ಅಥವಾ ರಾತ್ರಿ ಎತ್ತುಗಳನ್ನು ಹೊಡೆದುಕೊಂಡು ಬಂದು ದೇವತೆಯ ಗುಡಿ ಸುತ್ತಲು ಅಥವಾ ಐದು ಸುತ್ತು ಗುಡಿಯನ್ನು ಸುತ್ತುತ್ತಾರೆ. ಅಂದರೆ ಈ ಆಚರಣೆಯ ಉದ್ದೇಶ ಎತ್ತುಗಳಿಗೆ, ಜಾನುವಾರುಗಳಿಗೆ ಯಾವುದೇ ಖಾಯಿಲೆ, ರೋಗಗಳು ಬಾರದಿರಲೆಂದು ಎತ್ತುಗಳ ಜೊತೆಗೆ ಹೋಗಿ ದೇವರ ಸುತ್ತಲು ಪ್ರದಕ್ಷಣೆಯನ್ನು ಹಾಕುತ್ತಾರೆ. ಉತ್ತಮ ಮಳೆ, ಬೆಳೆ ಬರಲೆಂದು ದೇವತೆಯ ಮೊರೆ ಹೋಗುತ್ತಾರೆ. ಆದರೆ ಹಸಲರು–ಎತ್ತುಗಳನ್ನು ಬಳಸುವುದು ಅತ್ಯಂತ ವಿರಳ ಹಾಗಾಗಿ ಈ ಪದ್ಧತಿ ಅಥಾವ ಆಚರಣೆಯಿಂದ ದೂರವಿರುತ್ತಾರೆ. ಬೇಡ ಬುಡಕಟ್ಟು ಸಮುದಾಯ ಮುಖ್ಯವಾಗಿ ತಮ್ಮ ಕುಲದ ಲಾಂಛನ ಹಾಗೂ ಕುಲ ಹಿರಿಯರನ್ನು ಅತ್ಯಂತ ಗೌರವದಿಂದ ಕಾಣುವುದಾಗಿದೆ. ಹಿರಿಯರು ಹೇಳಿದ ಯಾವುದೇ ತೀರ್ಮಾನವನ್ನು ಒಪ್ಪಿ ತಲೆ ಬಾಗುವುದು. ಕುಲ ಪದ್ಧತಿ, ಕುಲ ಕಸುಬನ್ನು ಅತ್ಯಂತ ನಿಷ್ಠೆಯಿಂದ ಮುಂದುವರಿಸಿಕೊಂಡು ಬರುವುದು ಮುಖ್ಯ ಸಂಗತಿ. ತಮ್ಮ ಕುಲ ಲಾಂಛನವನ್ನು ಪವಿತ್ರವೆಂದು ಭಾವಿಸಿ ಅದನ್ನು ದೈವದ ಸಂಕೇತವಾಗಿ ಪೂಜೆಗೈಯುದುಂಟು. ಬೇಡರು ತಮ್ಮ ಕುಲ ಲಾಂಛನವನ್ನು ಗೌರವಿಸುವುದನ್ನು ಈಗಲೂ ಕಾಣಬಹುದು. ಜೊತೆಗೆ ತಮ್ಮಲ್ಲಿನ ಆಗಿ ಹೋದ ವೀರರನ್ನು ಆರಾಧ್ಯ ದೈವವನ್ನಾಗಿಸಿಕೊಂಡು ಆರಾಧಿಸಿಸುವುದು ಉಂಟು. ಇದರೊಂದಿಗೆ ಅವರ ಆಹಾರ ಉಡಿಗೆ ತೊಡಗೆಗಳಲ್ಲಿ ವಿಶೇಷವು ಇರುತ್ತದೆ. ಅದು ಹೇಗೆಂದರೆ ಇವರ ಆಹಾರ ಪದ್ಧತಿಯಲ್ಲಿ ಮಾಂಸ ಆಹಾರಕ್ಕೆ ಆದ್ಯತೆ ಇದೆಯಾದರೂ ಕುರಿ ಮತ್ತು ಕೋಳಿ ಮಾಂಸವನ್ನು ಸೇವಿಸುತ್ತಾರೆ. ಹಾಗೆಯೇ ಆಚರಣೆಗಳ ಸಂದರ್ಭದಲ್ಲಿ 'ಕಂಬಳಿ'ಗೆ ಪ್ರಾಶಸ್ತ್ಯವಿದೆ. ಆದರೆ ಕಪ್ಪು ಬಣ್ಣದ ಉಡುಪನ್ನು ಧರಿಸಲೇಬಾರದೆಂಬ ನಿಷೇಧವಿದೆ. ಬುಡಕಟ್ಟು ಸಮುದಾಯದ ಕುಲ ಲಾಂಛನವು ತಮ್ಮ ಸಂಸ್ಕೃತಿ ತಮ್ಮ ಬುಡಕಟ್ಟು ಸಮುದಾಯಕ್ಕೆ ಯಾವುದೋ ಒಂದು ಕಾಲದಲ್ಲಿ ನೀಡಿದ ಕೊಡುಗೆಯಾಗಿರುತ್ತದೆ. ಆದರೆ ಈ ಆಚರಣೆಗಳು ಹಸಲರು ಬುಡಕಟ್ಟುಗಳಲ್ಲಿ ಇಲ್ಲ. ಬೇಡ ಬುಡಕಟ್ಟು ಸಮುದಾಯವು ತಮ್ಮದೇ ಆದ ವಿಶಿಷ್ಟವಾದ ಉಡುಪು ಮತ್ತು ಆಭರಣಗಳನ್ನು ಹೊಂದಿರುತ್ತಾರೆ. ಅಂತಹ ಉಡುಪು ಆಭರಣಗಳನ್ನು ಪ್ರತಿದಿನ ಬೇಡರ ಕೆಲವರು ವಿಶಿಷ್ಟವಾದ ಹಬ್ಬ– ಹರಿದಿನ, ಮದುವೆ ಮುಂತಾದ ಸಂದರ್ಭಗಳಲ್ಲಿ ರೇಷ್ಮೆ ಸೀರೆ, ಲಂಗ, ಬಳೆ, ಬಂಗಾರದ ಆಭರಣಗಳನ್ನು ಧರಿಸುತ್ತಾರೆ. ಈ ವಿಶಿಷ್ಟವಾದ ಉಡುಪು ಮತ್ತು ಆಭರಣಗಳೇ ಅವರ ಸಾಂಸ್ಕೃತಿಕ ಚಹರೆಗಳಾಗಿರುತ್ತವೆ. ಆದರೆ ಹಸಲರು ಬುಡಕಟ್ಟು ಸಮುದಾಯ ದೀಪಾವಳಿಯ ದಿನದಂದು ಹೊಸ ಬಟ್ಟೆಗಳನ್ನು ಖರೀದಿಸಿ ಹಬ್ಬವನ್ನು ಆಚರಿಸುತ್ತಾರೆ. ಬೇಡ ಸಮುದಾಯದ ಮನೆಯೊಳಗೆ ಹಂದಿ ಮರಿ ಬಂದರೆ ಅದನ್ನು ಹೊಡೆದು ಸಾಯಿಸಿ ಮನೆಯೊಳಗೆ ಮಣ್ಣು ತೆಗೆದು ಉಗಿಯುತ್ತಾರೆ. ಆ ಮನೆಯಿಂದ ಹೊರಕ್ಕೆ ಹೋದರೆ. ಬಡತನ ಬರುತ್ತದೆ. ದಾರಿದ್ರ್ಯ ಕಟ್ಟಿಟ್ಟ ಬುತ್ತಿ, ಲಕ್ಷ್ಮಿ

ಮನೆಯಿಂದ ಹೊರಟು ಹೋಗುತ್ತಾಳೆ ಎಂಬ ನಂಬಿಕೆಯಿದೆ. ಆಚರಣೆಗಳಲ್ಲಿ, ಆಹಾರ ಪದ್ಧತಿಯಲ್ಲಿ, ಉಡುಗೆ-ತೊಡುಗೆಗಳಲ್ಲಿ, ಮದುವೆಗಳಲ್ಲಿ, ಸಂಪ್ರದಾಯಗಳಲ್ಲಿ ಬೇಡರ ಬೀದಿಗಳಲ್ಲಿ, ಬೇಡರು ವಾಸಿಸುವ ಗ್ರಾಮಗಳಲ್ಲಿ ಹೋಬಳಿಗಳಲ್ಲಿ ಬದಲಾವಣೆಯ ಗಾಳಿ ಬೀಸಿ ಅಂತರಂಗದಲ್ಲಿ, ಆಲೋಚನೆಗಳಲ್ಲಿ, ಆಚರಣೆಗಳಲ್ಲಿ, ನೀತಿ ಪ್ರಜ್ಞೆಗಳಲ್ಲಿ ಭಾರೀ ಪ್ರಮಾಣದ ಬದಲಾವಣೆ ನಿರಂತರವಾಗಿ ನಡೆಯುತ್ತಾ ಇರುತ್ತದೆ. ಇದು ಆಚರಣೆಗಳಿಗೂ ಕೂಡ ಸಂಬಂಧಪಟ್ಟಿರುವುದೇ ಆಗಿರುತ್ತದೆ. ವಳ್ಳು, ಒನಕೆ, ಬಾಸಿಂಗ, ದಂಡೆ ಮತ್ತು ಕಂಕಣ ಈ ಎಲ್ಲಾ ವಿಷಯಗಳ ಆಚರಣೆಗಳಲ್ಲಿ ಬೇಡರು ಶ್ರದ್ಧೆ ವಹಿಸಿ, ಪೂಜ್ಯ ಭಾವನೆಯಿಂದ ಪಾಲ್ಗೊಳ್ಳುತ್ತಾರೆ. ಆದರೆ, ಹಸಲರು ಸಮುದಾಯ ಈ ಆಚರಣೆಗಳಲ್ಲಿ ಸ್ವ-ಪ್ರಯತ್ನದಿಂದ ನಾಮಕಾ ಅವಸ್ಥೆಗಾಗಿ ಬಳಸುವುದು ಕಂಡು ಬರುತ್ತದೆ. ಬೇಡರು ಯುಗಾದಿ ಹಬ್ಬದ, ಯುಗಾದಿ ಪಾಡ್ಯಕ್ಕೆಂದು, ಶ್ಯಾವಿಗೆಯ ಸಿಹಿ ಅಡುಗೆಯನ್ನು ತಪ್ಪದೇ ಊಟ ಮಾಡುತ್ತಾರೆ. ಶ್ಯಾವಿಗೆ ನೇಯುವಾಗ ಸೋಬಾನ ಪದವನ್ನು ಹಾಡುವುದರ ಮೂಲಕ ಈ ಆಚರಣೆ ಸಂಭ್ರಮದಿಂದ ನಡೆಯುತ್ತದೆ. ಆದರೆ ಹಸಲರು ಸಮುದಾಯ ಶ್ಯಾವಿಗೆ ಊಟಕ್ಕೆ, ಸೋಭಾನ ಪದಗಳಂತಹ ಆಚರಣೆಗಳು ಒಗ್ಗಿಕೊಳ್ಳುವುದಿಲ್ಲ. ಹಸಲರು ದೀಪಾವಳಿ ಹಬ್ಬದ ದಿನದಂದು ಮಾತ್ರ ಅಂಟಿಗೆ-ಪಂಟಿಗೆ ಕಲೆಯನ್ನು ಮಾತ್ರ ಪ್ರದರ್ಶಿಸುತ್ತಾರೆ. ಈ ಆಚರಣೆಯನ್ನು ಮಾತ್ರ ಅವರು ಮಾಡುತ್ತಾರೆ. ಆದರೆ ಬೇಡರು ಡೊಳ್ಳು ಕುಣಿತ, ಕೋಲಾಟ, ಭಜನೆ, ಗಾಡಿಯನ್ನು ಬಿಚ್ಚುವುದು ಮತ್ತು ಗಾಡಿಯನ್ನು ಜೋಡಿಸುವುದು, ನಾಗರ ಪಂಚಮಿಯಂದು ಜೋಕಾಲಿಯಾಡುವುದು, ಗುಂಡು ಉರುಳಿಸುವುದು, ತೆಂಗಿನಕಾಯಿಯನ್ನು ಕೈಯಿಂದ ಜಜ್ಜಿ ಹೊಡೆಯುದು ಇತ್ಯಾದಿ ಜನಪದ ಕ್ರೀಡೆಯ ಆಚರಣೆಗಳನ್ನು ಮಾಡುತ್ತಾರೆ. ಶಿವಮೊಗ್ಗ ಜಿಲ್ಲೆಯ ನಗರಗಳಿಗೆ ಹತ್ತಿರವಿರುವ ಗ್ರಾಮಗಳಲ್ಲಿ ಬೇಡರು ತಮ್ಮ ಹೊಲ ಗದ್ದೆಗಳನ್ನು ಮಾರಾಟ ಮಾಡುತ್ತಿದ್ದಾರೆ. ಇದು ನಗರೀಕರಣದಿಂದ ನಡೆಯುವ ಪ್ರಕ್ರಿಯೆಯಾಗಿದೆ. ಹೊಲ ಗದ್ದೆಗಳನ್ನು ಮಾರಾಟ ಮಾಡಿರುವುದರಿಂದ ಸಂಕ್ರಾಂತಿ ಹಬ್ಬವನ್ನು ಹೊಲ-ಗದ್ದೆಗಳಲ್ಲಿ ಆಚರಿಸಿ ಸಂತೋಷ ಪಡುವ ಬದಲು ಮನೆಗಳಲ್ಲಿಯೇ ಸಂಕ್ರಾತಿಯ ಹಬ್ಬವನ್ನು ಮಾಡಿ ಮುಗಿಸುತ್ತಾರೆ. ಈ ಹಿಂದೆ ಮಧ್ಯಮ ವರ್ಗದ ಬೇಡ ರೈತರು ಮನೆಗೊಬ್ಬರಂತೆ ಎತ್ತು ಬಂಡಿಗಳನ್ನು ಹೊಂದಿದ್ದರು. ಕೃಷಿ ಜೀವನವೇ ಅವರ ಮೂಲ ವೃತ್ತಿಯಾಗಿದ್ದಿತ್ತು. ಆದರೆ, ಸತತವಾದ ಬರಗಾಲದಿಂದಾಗಿ, ಜಾನುವಾರುಗಳನ್ನು ಕಟುಗರ ಕಸಾಯಿಖಾನೆಗೆ ಮಾರಾಟ ಮಾಡಿರುವುದರಿಂದ ಬಂಡಿ ಪೂಜೆ ಜಾನುವಾರಗಳ ಪೂಜೆಯಂತಹ ಆಚರಣೆ ನಿಂತು ಹೋಗಿದೆ. ಇದು ಹಸಲರು ಸಮುದಾಯಕ್ಕು ಕೂಡ ಅನ್ವಯಿಸುವಂತ ಮಾತಾಗಿದೆ ಬೇಡ ಬುಡಕಟ್ಟು ಮತ್ತು ಹಸಲರು ಸಮುದಾಯ ಬುಡಕಟ್ಟುಗಳ ಯುವಕರ ಬರಗಾಲದಿಂದ ರೈತಾಪಿ ಜೀವನ ತೊಂದರೆಯಾದರೆ, ಅಮಾಲಿ ಕೆಲಸ, ಸೈಕಲ್ ಶಾಪ್, ತರಕಾರಿ ಮಾರಾಟ, ಮಹಿಳೆಯರು ತರಕಾರಿ ಪುಟ್ಟಿಯನ್ನು ಹೊತ್ತುಕೊಂಡು ಓಣಿ ಓಣಿ ತಿರುಗಿ ಮಾರಾಟ ಮಾಡಿ ಬರುತ್ತಾರೆ. ಯುವಕರು, ಬೀಡಿ ಅಂಗಡಿ, ಮನೆ ಕಟ್ಟುವ ಕೆಲಸ ಇಟ್ಟಿಗೆಗಳ ತಯಾರಿಕೆ, ಲಾರಿ ಕ್ಲೀನರ್, ಮನೆಗಳನ್ನು ಕಾಯುವ ಕೆಲಸ,

ಕಿರಾಣಿ ಅಂಗಡಿಗಳಲ್ಲಿ ಕೂಲಿ ನಾಲಿ ಮಾಡಿಕೊಂಡು ಜೀವನವನ್ನು ಸಾಗಿಸುವ ಪರಿಸ್ಥಿತಿ ಬಡವರ್ಗದ್ದಾಗಿದೆ. ಶಿವಮೊಗ್ಗ ಜಿಲ್ಲೆಯ ಬೇಡರಲ್ಲಿ ಮತ್ತು ಹಸಲರು ಬುಡಕಟ್ಟು ಸಮುದಾಯಗಳಲ್ಲಿ ಮೂಲ ಸಂಸ್ಕೃತಿಯ ಬದಲು ಅನ್ಯ ಸಂಸ್ಕೃತಿಯ ಆಚರಣೆಗಳಲ್ಲಿ ತೊಡಗಿರುವುದನ್ನು ಕಾಣಬಹುದಾಗಿದೆ. ತಮ್ಮ ತಮ್ಮ ಮನೆ ದೇವರು, ಮನೆ ದೇವತೆಗಳ ಬದಲು, ಕುಲ ದೇವತೆಗಳ ಬದಲು ಅನ್ಯ ದೇವತೆಗಳಿಗೆ/ಅನ್ಯ ದೇವರಿಗೆ ನಡೆದುಕೊಳ್ಳುತ್ತಿದ್ದಾರೆ. ಮೂಲ ಆಚರಣೆಗಳನ್ನು ಗಾಳಿಗೆ ತೂರಿದ್ದಾರೆ. ತಮ್ಮ ದೇವತೆಗಳಾದ ಶ್ರೀ ಆಂಜನೇಯ, ಶ್ರೀ ಕೋಟೆ ಆಂಜನೇಯ, ಮಾರಿಕಾಂಬೆ, ಚೌಡೇಶ್ವರಿ, ದುರುಗಮ್ಮ, ಶ್ರೀ ರಂಗನಾಥ ಸ್ವಾಮಿ ದೇವರ ಬದಲಿಗೆ, ಮಂತ್ರಾಲಯದ ಶ್ರೀ ರಾಘವೇಂದ್ರ, ಅಯ್ಯಪ್ಪ ಸ್ವಾಮಿ, ಕುಕ್ಕೆ ಸುಬ್ರಹ್ಮಣ್ಯ, ಧರ್ಮಸ್ಥಳದ ಮಂಜುನಾಥ ಸ್ವಾಮಿ, ತಿರುಪತಿಯ ವೆಂಕಟೇಶ್ವರ.- ಇನ್ನಿತರ ದೇವರಿಗೆ ನಡೆದುಕೊಳ್ಳುತ್ತಿದ್ದಾರೆ. ಮೂಲ ಆಚರಣೆಗಳ ಬದಲಿಗೆ ಅನ್ಯ ದೇವರ ಆಚರಣೆಗಳನ್ನು ಮೈಗೂಡಿಸಿಕೊಂಡಿದ್ದಾರೆ. ಆರ್ಥಿಕತೆಯನ್ನು ಜಾಗತೀಕರಣದ ಪೈಪೋಟಿಗಳಿಗೆ ಒಳಪಡಿಸಿದಾಗ ಜಾಗತೀಕ ಪೈಪೋಟಿಯನ್ನು ಎದುರಿಸಲು ಬೇಡ ಮತ್ತು ಹಸಲರು ಸಮುದಾಯಗಳು ವಿಫಲವಾಗಿವೆ. ಅನ್ಯ ಆಚರಣೆಗಳಿಗೆ ಒಳಗಾಗಿವೆ. ಉದಾ : "ಪ್ರಸಿದ್ಧ ಆರ್ಥಿಕ ತಜ್ಞರಾದ ಅಮಾರ್ತ್ಯಸೇನ್‌ರವರು ತಿಳಿಸುವುದು ಕೂಡ ಇದನ್ನೇ. ಸಾಮರ್ಥ್ಯ ಹೊಂದಿದ ಸಮುದಾಯಗಳು ಜಾಗತೀಕರಣ ಪ್ರಕ್ರಿಯೆಗೆ ತಮ್ಮನ್ನು ತೆರೆದುಕೊಂಡರೆ ಸಾಮರ್ಥ್ಯ ಪಡೆಯದ ಸಮುದಾಯಗಳು ಜಾಗತೀಕರಣ ಪ್ರಕ್ರಿಯೆಯಿಂದ ಇನ್ನೂ ಮುದುಡುವ ಸ್ಥಿತಿಗೆ ಇಳಿಯುತ್ತದೆ". ಎಂಬ ಮಾತು ಬುಡಕಟ್ಟು ಸಮುದಾಯಗಳಾದ ಬೇಡ ಮತ್ತು ಹಸಲರು ಸಮುದಾಯಕ್ಕೆ ಅನ್ವಯಿಸುವಂತಿದೆ.

ಅಧ್ಯಾಯ ೬

# ಉಪ ಸಂಹಾರ

ಶಿವಮೊಗ್ಗ ಜಿಲ್ಲೆಯ ಆದಿವಾಸಿ ಆಚರಣೆಗಳು-ಸಾಮಾಜಿಕ ಅಧ್ಯಯನವು ಬೇಡ ಬುಡಕಟ್ಟು ಸಮುದಾಯ ಮತ್ತು ಹಸಲರು ಬುಡಕಟ್ಟು ಸಮುದಾಯಗಳ ಆದಿವಾಸಿ ಆಚರಣೆಗಳ ವಿವಿಧ ಸಾಂಸ್ಕೃತಿಕ ಮುಖಗಳನ್ನು ಸವಿವರವಾಗಿ ಚರ್ಚೆಗೆ ಒಳಪಡಿಸಲಾಗಿದೆ. ಮಹಾಪ್ರಬಂಧವು ಒಟ್ಟು ಆರು ಅಧ್ಯಯನಗಳಲ್ಲಿ ತನ್ನ ಹರವನ್ನು ಪಡೆದುಕೊಂಡಿದೆ. ಮೊದಲನೇ ಅಧ್ಯಾಯದಲ್ಲಿ ಅಧ್ಯಯನವನ್ನು ಕೈಗೊಂಡ ಉದ್ದೇಶ, ಅಧ್ಯಯನದ ವ್ಯಾಪ್ತಿ ಮತ್ತು ಸ್ವರೂಪ, ಅಧ್ಯಯನದ ವಿಧಾನಗಳು, ಇದುವರೆಗೆ ನಡೆದಿರುವ ಅಧ್ಯಯನದ ಸಮೀಕ್ಷೆಗಳು, ಆದಿವಾಸಿ ಬುಡಕಟ್ಟು ಸಮುದಾಯದ ಅರ್ಥ ವಿವರಣೆ ಮತ್ತು ಆದಿವಾಸಿ ಸಮುದಾಯದ ಗುಣಲಕ್ಷಣಗಳು, ಅಧ್ಯಯನದ ಮಹತ್ವದ ಕ್ರಮಗಳ ಬಗೆಗೆ ಮಾಹಿತಿಯನ್ನು ಕೊಡಲಾಗಿದೆ. ಶಿವಮೊಗ್ಗ ಜಿಲ್ಲೆಯಲ್ಲಿ ನೆಲೆಸಿರುವ ಬೇಡರು ಮತ್ತು ಹಸಲರು ಬುಡಕಟ್ಟು ಸಮುದಾಯಗಳ ಸಂಸ್ಕೃತಿ, ಬುಡಕಟ್ಟು ಲಕ್ಷಣಗಳು, ಇಲ್ಲಿಯವರೆಗೆ ನಡೆದಿರುವ ಅಧ್ಯಯನದ ಸಮೀಕ್ಷೆಗಳನ್ನು ಸವಿವರವಾಗಿ ಈ ಅಧ್ಯಯನದಲ್ಲಿ ಮಾಹಿತಿಯನ್ನು ಕಲೆ ಹಾಕಲಾಗಿದೆ. ಅಧ್ಯಾಯ ಎರಡರಲ್ಲಿ ಶಿವಮೊಗ್ಗ ಜಿಲ್ಲೆ ಒಂದು ಕ್ಷೇತ್ರ ಪರಿಚಯದ ಬಗ್ಗೆ ಗಮನಹರಿಸಲಾಗಿದೆ. ಶಿವಮೊಗ್ಗ ಜಿಲ್ಲೆಯಲ್ಲಿ ಬರುವ ತಾಲೂಕುಗಳ ವಿವರ, ಐತಿಹಾಸಿಕ ಹಿನ್ನೆಲೆ, ಹಾಗೂ ಭೌಗೋಳಿಕ ಸ್ವರೂಪ, ಶಿವಮೊಗ್ಗ ಜಿಲ್ಲೆಯ ಪ್ರಾಚೀನತೆ ಇತ್ಯಾದಿ ವಿಷಯಗಳನ್ನು ವಿಶ್ಲೇಷಣೆಗೊಳಪಡಿಸಲಾಗಿದೆ. ಶಿವಮೊಗ್ಗ ಜಿಲ್ಲೆಯ ಪುರಾತನ ಇತಿಹಾಸವನ್ನು, ಶಿವಮೊಗ್ಗಕ್ಕೆ ಮೊದಲಿದ್ದ ಹೆಸರೇನು? ಬರುಬರುತ್ತಾ ಈ ಹೆಸರು ಯಾವ ಹಂತವನ್ನು ಪಡೆದುಕೊಂಡಿತು. ಎಂಬುದರ ಬಗ್ಗೆ ಹಿಂದಿನಿಂದ ಹಿಡಿದು ಇಂದಿನವರೆಗೆ ಚರಿತ್ರೆಯನ್ನು ಹೆಕ್ಕಿ ತೆಗೆಯಲಾಗಿದೆ. ಜೊತೆಗೆ ಶಿವಮೊಗ್ಗ ಜಿಲ್ಲೆಯ ಪೌರಾಣಿಕ, ಸಾಹಿತಿಕ, ಶಾಸನಾತ್ಮಕ, ಚಾರಿತ್ರಿಕ ಹಾಗೂ ಭೌಗೋಳಿಕತೆಗಳನ್ನು ಸಹ ಅಧ್ಯಯನಕ್ಕೊಳಪಡಿಸಲಾಗಿದೆ. ಪೌರಾಣಿಕ ಹಿನ್ನೆಲೆ, ಚಾರಿತ್ರಿಕ ನೆಲೆ ಹಾಗೂ ಸಾಮಾಜಿಕ ಹಿನ್ನೆಲೆಗಳನ್ನು ಸವಿವರವಾಗಿ ಗ್ರಹಿಸಲಾಗಿದೆ. ಶಿವಮೊಗ್ಗದ ಸಂಸ್ಕೃತಿ ಮತ್ತು ಸಾಂಸ್ಕೃತಿಕ ಮಹತ್ವ ಮುಂತಾದವುಗಳನ್ನು ಚರ್ಚೆಗೊಳಪಡಿಸಲಾಗಿದೆ. ಪ್ರಬಂಧದ ಮೂರನೆಯ ಅಧ್ಯಾಯದಲ್ಲಿ ಆದಿವಾಸಿ ಆಚರಣೆಗಳ ವಿಶ್ಲೇಷಣೆ, ಕುರಿತಾಗಿ ಬೇಡ ಬುಡಕಟ್ಟು ಕುರಿತು ಸುದೀರ್ಘವಾಗಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಬೇಡ ಬುಡಕಟ್ಟಿನ ಹಿನ್ನೆಲೆ,

ಬೇಡ ಜನಾಂಗದ ಸುದೀರ್ಘ ಇತಿಹಾಸ, ಬೇಡ ಜನಾಂಗಕ್ಕೆ ಇರುವ ಪರ್ಯಾಯ ಹೆಸರುಗಳಾದ ವಾಲ್ಮೀಕಿ, ಬೇಡ-ವಾಲ್ಮೀಕಿ, ತಳವಾರ, ಪರಿವಾರ, ಊರನಾಯಕರು ಮತ್ತು ಮ್ಯಾಸನಾಯಕರು, ನಾಯಕ ಜನಾಂಗದ ಪ್ರಾತಃಸ್ಮರಣೀಯರು, ನಾಯಕ ಜನಾಂಗದ ೭೭ ಪಾಳೆಯಗಾರರು, ಪಾಳೆಯಗಾರಿಕೆ ಪಟ್ಟುಗಳನ್ನು ಕಟ್ಟಿ ಕರ್ನಾಟಕದ ಉದ್ದಗಲಕ್ಕೂ ಈ ಜನಾಂಗ ನಡೆಸಿದ ಯುದ್ಧಗಳು ಈ ಜನಾಂಗದಲ್ಲಿ ಜನಿಸಿದ ಮಹರ್ಷಿ ವಾಲ್ಮೀಕಿ, ಬೇಡರ ಕಣ್ಣಪ್ಪ, ಗಂಡುಗಲಿ ಕುಮಾರರಾಮ, ಕನಕದಾಸ, ವಿಜಯ ನಗರ ಸಾಮ್ರಾಜ್ಯ ಸ್ಥಾಪನೆ ಮಾಡಿದ ಹಕ್ಕ-ಬುಕ್ಕರು, ಏಕಲವ್ಯ, ಗುಹಾ, ಶಬರಿ, ವೀರ ಸಿಂಧೂರ ಲಕ್ಷ್ಮಣ, ಚಿತ್ರದುರ್ಗದ ಮದಕರಿ ನಾಯಕ, ಹರಪನಹಳ್ಳಿ ಪಾಳೆಯಗಾರರು, ಸುರಪುರದ ಬೇಡ ಅರಸರು, ಕುಮ್ಮಟದುರ್ಗದ ಬೇಡ ಅರಸರು-ಹೀಗೆ ಬೇಡ ಜನಾಂಗದ ಸುದೀರ್ಘ ರಾಜಮನೆತನ, ಪಾಳೆಯಗಾರರ ಬಗ್ಗೆ ಈ ಜನಾಂಗದ ಮಹಾಪುರುಷರ ಬಗ್ಗೆ ಈ ಅಧ್ಯಯನದಲ್ಲಿ ಬೆಳಕು ಚೆಲ್ಲಲಾಗಿದೆ. ಶಿವಮೊಗ್ಗ ಜಿಲ್ಲೆಯಲ್ಲಿ ಬೇಡ ಜನಾಂಗದ ಮೂಲ ಉದ್ಯೋಗ ಕೃಷಿ, ಕೃಷಿ ಜೀವನ ದೇಶದ ಪುರೋಭಿವೃದ್ಧಿ ಸಾಧನೆಯ ಕೃಷಿಯ ಪ್ರಗತಿಯ ಮೇಲೆ ನಿಂತಿದೆ. ಕೃಷಿಯ ಮುನ್ನಡೆಯಲ್ಲಿ ಅದರ ಒಂದು ಭಾಗವಾಗಿರುವ ಕೃಷಿ ಕೂಲಿಕಾರರ ಪಾತ್ರ ಬಹಳ ಹಿರಿದಾದ್ದದು, ಕೃಷಿಯ ಚಾಲಕ ಶಕ್ತಿಯೇ ಕೃಷಿ ಕೂಲಿ ಆಳುವ ಇದರಿಂದ ಬೇಡರು ಹೊರತಾಗಿಲ್ಲ. ಕೃಷಿ ಮತ್ತು ಕೃಷಿಕೂಲಿ ಆಳುಗಳು ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಎರಡು ಒಂದಕ್ಕೊಂದು ಪೂರಕಗಳು. ಒಂದಿಲ್ಲದೆ ಇನ್ನೊಂದಿಲ್ಲ. ಕೃಷಿಕೂಲಿಕಾರರು ಕೃಷಿಯ ಜೀವನಾಡಿ ಇದ್ದಂತೆ. ಇಂದಿನ ನಮ್ಮ ಮುಖ್ಯ ಗುರಿ ಸಮಾಜವಾದಿ ಸಮಾಜದ ರಚನೆಯಾಗಿದೆ. ಅಂದರೆ, ಹೆಚ್ಚುತ್ತಿರುವ ಸುಖ ಸಂಪತ್ತುಗಳನ್ನು ನಮ್ಮೆಲ್ಲರಲ್ಲೂ ಸಮಾನವಾಗಿ ಹಂಚಿಕೊಳ್ಳುವುದು. ಆದರೆ ಈ ಕಾರ್ಯ ಅಂದುಕೊಂಡಷ್ಟು ಸುಲಭ ಸಾಧ್ಯವಲ್ಲ. ರಾಷ್ಟ್ರದ ಪ್ರಗತಿಯ ಸೋಪಾನವಾಗಿರುವ ಈ ಸಾಧನೆಯನ್ನು ತಲುಪಲು ದೇಶದ ಪ್ರತಿಯೊಬ್ಬ ಪ್ರಜೆಯೂ ತನ್ನ ಶಕ್ತಿ ಇದ್ದಷ್ಟೂ ಸಹಕರಿಸಬೇಕು. ಕೃಷಿಯಲ್ಲಿ ಹೆಚ್ಚು ಉತ್ಪತ್ತಿಯಾದ ಕೃಷಿಕೂಲಿ ಕೆಲಸ ಮತ್ತು ಜಾನುವಾರುಗಳಿಗೆ ಮೇವಿನ ಕೊರತೆಯನ್ನು ನೀಗಿಸಲು ಸಾಧ್ಯ. ಉತ್ಪಾದನೆ ಹೆಚ್ಚಿಸಬೇಕಾದರೆ ಕೃಷಿ ಮಾತ್ರ ಅಭಿವೃದ್ಧಿಯಾಗಬೇಕು. ಇದು ಸಾಧ್ಯವಾಗಬೇಕಾದರೆ ಕೃಷಿಗೆ ಆಧಾರ ಸ್ಥಂಭಗಳಾದ ಕೃಷಿ ಕೂಲಿ ಆಳುಗಳು ಶ್ರಮವಹಿಸಿ ದುಡಿಯಬೇಕಾಗುತ್ತದೆ. ಈ ಕಾರ್ಯವನ್ನು ಶಿವಮೊಗ್ಗ ಜಿಲ್ಲೆಯ ಗ್ರಾಮೀಣಮಟ್ಟದಲ್ಲಿ ಬೇಡರು ಮಾಡುತ್ತಿದ್ದಾರೆ. ಕೃಷಿ ಕೂಲಿ ಕೆಲಸದಲ್ಲೂ ತಾರತಮ್ಯವಿದೆ. ಪುರುಷ ಕೂಲಿ ಆಳುಗಳಿಗೆ ಒಂದು ದಿನಕ್ಕೆ ರೂ. ೩೦೦ ಕೊಟ್ಟರೆ ಮಹಿಳೆ ಕೃಷಿಕೂಲಿ ಆಳುಗಳಿಗೆ ರೂ. ೧೫೦ ಇದು ಎಷ್ಟರಮಟ್ಟಿಗೆ ಸರಿ? ಇದರೊಂದಿಗೆ ಸಮಾಜವಾದಿ ಸಮಾಜದ ಆಶಯವನ್ನು ಹೊಂದಿರುವ ಪ್ರಜಾಪ್ರಭುತ್ವ ಸರಕಾರದ ಗುರಿಯು ನಿರ್ದಿಷ್ಟ ರೂಪವನ್ನು ತಾಳಬೇಕಾದರೆ, ಕೃಷಿ ಜೀವನದ ಸಾಮರಸ್ಯ ಬೆಳೆಯಬೇಕಾದ್ದು ತೀರಾ ಅಗತ್ಯ. ಅಂದರೆ ಕೃಷಿ ಆಳುಗಳಿಗೂ ಹಾಗೂ ಜಮೀನ್ದಾರರ ನಡುವೆ ಮಧುರ ಭಾಂದವ್ಯ ಉಂಟಾಗಬೇಕು. ಕೃಷಿ ಕೂಲಿ ಕೆಲಸಗಾರರು ಯಾರು? ಅನಕ್ಷರಸ್ಥ ಪುರುಷ ಮತ್ತು ಅನಕ್ಷರಸ್ಥ ಮಹಿಳೆ. ಬಡತನ, ಅಜ್ಞಾನ, ಕಿತ್ತು

ತಿನ್ನುತ್ತಿರುವ ಬಡತನ, ಸಾಧನೆಯಿಲ್ಲದ ಬದುಕು. ವಂಶಪಾರ್ಯಂಪರವಾಗಿ ಬಂದ ಕೃಷಿ ಆಳುಗಳ ದಯನೀಯ ಬದುಕು. ಜೊತೆಗೆ ಮಕ್ಕಳ ಪಾಲನೆ, ಪೋಷಣೆ, ಒಂದೊತ್ತಿನ ಊಟದ ಪರಿಕಲ್ಪನೆ ಎಂತವರನ್ನಾದರೂ ಸರಿ ಇಂಥ ಕೆಲಸಕ್ಕೆ ತಂದು ಬಿಡುತ್ತದೆ. ಹಾಗಾಗಿ ಶಿವಮೊಗ್ಗ ಜಿಲ್ಲೆಯಲ್ಲಿರುವ ಬೇಡರು ಕೃಷಿ ಭೂಮಿ ಹೊಂದಿರುವುದು ಕಡಿಮೆ. ಕೂಲಿ ಆಳುಗಳಾಗಿ ಇನ್ನೊಬ್ಬರ ಹೊಲಗದ್ದೆಗಳಲ್ಲಿ ದುಡಿಯುವುದೇ ಹೆಚ್ಚು. ಕೃಷಿ ಕೂಲಿ ಆಳುಗಳ ದೈಹಿಕ ಬಲ, ಮಾನಸಿಕ ಸಾಮರ್ಥ್ಯಗಳ ಬಗ್ಗೆ ಪರಿಗಣಿಸಲು ಅವರ ವಯಸ್ಸು ಪ್ರಮುಖ ಅಂಶವಾಗುತ್ತದೆ. ಈ ಕೃಷಿಯಲ್ಲಿ ತೊಡಗಿರುವವರ ಪೈಕಿ, ಗಣನೀಯ ಪ್ರಮಾಣದವರು ಮಧ್ಯ ವಯೋವರ್ಗಕ್ಕೆ ಸೇರಿದವರಾಗಿರುವರು. ಕೃಷಿ ಕೆಲಸದಲ್ಲಿ ತೊಡಗಿರುವ ಆಳುಗಳು ಅನಕ್ಷರಸ್ಥರು ಇಲ್ಲವೇ ಅಲ್ಪ ಶಿಕ್ಷಣ ಪಡೆದವರಾಗಿರುತ್ತಾರೆ. ಶಿವಮೊಗ್ಗ ಜಿಲ್ಲೆಯ ಹಸಲರು ಸಮುದಾಯದ ಪುರುಷರು ಅಡಕೆ ಮರ ಹತ್ತಿ ಅಡಕೆಯನ್ನು ಕೆಳಕ್ಕೆ ಇಳಿಸುತ್ತಾರೆ. ಅಲ್ಲದೇ ಅವರು ಮರದಿಂದ ಮರಕ್ಕೆ ಜಿಗಿದು ಅಡಕೆ ಇಳಿಸುವುದರಿಂದ ಬಹುಪಾಲು ಹಸಲರು ಸಮುದಾಯದ ಪುರುಷರ ಕಾಲುಗಳು ಡೊಂಕಾಗಿರುತ್ತವೆ. ಇದಕ್ಕೆ ಕಾರಣ ಅಡಕೆಯ ಮರದಿಂದ ಮರಕ್ಕೆ ಜೀಗಿಯುವುದೇ ಇವರ ಕಾಯಕವಾಗಿರುತ್ತದೆ. ಕೃಷಿ ಕೂಲಿ ಆಳುಗಳಾಗಿ ದುಡಿಯುವ ಬೇಡ ಮತ್ತು ಹಸಲರು ಸಮುದಾಯದವರು ತಮ್ಮ ವರಮಾನದಲಿಯೇ ತಮ್ಮ ಮಕ್ಕಳ ಶಿಕ್ಷಣಕ್ಕೆ ಮಹತ್ವ ನೀಡುವುದು ಅತ್ಯಂತ ಗಮನಾರ್ಹ ಅಂಶವಾಗಿದೆ. ಶಿವಮೊಗ್ಗ ಜಿಲ್ಲೆಯ ಬೇಡರು ಮತ್ತು ಹಸಲ ಸಮುದಾಯದ ಕುಟುಂಬ ವ್ಯವಸ್ಥೆಯನ್ನು ಕುರಿತಂತೆ ನಮ್ಮ ವಿಶ್ಲೇಷಣೆಯಿಂದ ಮನಗಣಲಾದ ಅಂಶವೆಂದರೆ, ವಂಶ ಪಾರಂಪಾರಿಕವಾಗಿ ಕೃಷಿಯಾಧಾರಿತ ಕುಟುಂಬ ಪದ್ಧತಿ, ಅವಿಭಕ್ತ ಕುಟುಂಬವೇ ಆಗಿದ್ದರೂ ಶಿವಮೊಗ್ಗ ಜಿಲ್ಲೆಯ ತಾಲ್ಲೂಕುಗಳ ಅಕ್ಕಪಕ್ಕದಲ್ಲಿರುವ ಗ್ರಾಮಗಳ ಅಥವಾ ಹಳ್ಳಿಗಳಲ್ಲಿ ವಿಭಕ್ತ ಕುಟುಂಬ ಪದ್ಧತಿಯೇ ಹೆಚ್ಚು. ಇದಕ್ಕೆ ಪ್ರಮುಖ ಕಾರಣ ಕಡಿಮೆ ವರಮಾನ, ಸ್ಥಳಾಭಾವ, ಕುಟುಂಬ ಸದಸ್ಯರ ಹಿತಾಸಕ್ತಿಗಳಲ್ಲಿ ಭಿನ್ನತೆ ಮೊದಲಾದವಾಗಿವೆ. ಆಧುನಿಕ ಪ್ರಭಾವ, ಸಾರಿಗೆ ಮತ್ತು ಸಂವಹನದ ಸುಲಭ ಸಾಧನೋಪಾಯಗಳು ಮೊದಲಾದವು ವಿಭಕ್ತ ಕುಟುಂಬಗಳನ್ನೇ ಬಯಸಲು ಕಾರಣಗಳಾಗಿವೆ. ಕುತೂಹಲಕಾರಿಯಾದ ಅಂಶವೆಂದರೆ, ಶಿವಮೊಗ್ಗ ಜಿಲ್ಲೆಯ ಬೇಡರು ಮತ್ತು ಹಸಲರು ಕುಟುಂಬದ ಬಹುಪಾಲು ಕುಟುಂಬಗಳು ಒಂದಲ್ಲ ಒಂದು ರೀತಿಯಲ್ಲಿ ಅವಿಭಕ್ತ ಕುಟುಂಬದಲ್ಲಿದ್ದವರೇ. ಬದಲಾಗುತ್ತಿರುವ ಪರಿಸ್ಥಿತಿಗಳಿಂದಾಗಿಯೋ, ನಗರೀಕರಣದಿಂದಾಗಿಯೋ ಹೆಚ್ಚುತ್ತಿರುವುದರಿಂದಲೋ ಅವಿಭಕ್ತ ಕುಟುಂಬದ ಇಡೀ ರಚನೆಯೇ ದುರ್ಬಲಗೊಳ್ಳುತ್ತಿದ್ದು, ಸರಳವಾಗಿರುವ ಚಿಕ್ಕ ಚಿಕ್ಕ ಕುಟುಂಬಗಳಿಗೆ ಅವಕಾಶ ಮಾಡಿಕೊಡುತ್ತವೆ. ಈ ರೀತಿಯ ಪರಿವರ್ತನೆ ಸ್ಥಿತ್ಯಂತರವು ವಂಶ ಪಾರಂಪರಿಕವಾಗಿ ಅವಿಭಕ್ತ ಕುಟುಂಬ ಪದ್ಧತಿಯ ಬದಲಿಗೆ ವಿಭಕ್ತ ಕುಟುಂಬ ವ್ಯವಸ್ಥೆ ಬೇರೂರುತ್ತಿರುವುದು ಕಂಡುಬರುತ್ತದೆ. ಜನನ ಮತ್ತು ನಾಮಕರಣ, ಪ್ರೌಢ ಸಂಸ್ಕಾರದ ಸಂಸ್ಕೃತಿ, ಸಂಪ್ರದಾಯ, ಮದುವೆ ಮತ್ತು ಮದುವೆಯಲ್ಲಿನ ಆಚರಣೆಗಳು, ಬೇಡರ ಹಬ್ಬ ಹರಿದಿನಗಳು ಮತ್ತು ಜಾತ್ರೆ ಉತ್ಸವಗಳು, ಪ್ರಸಿದ್ಧ ಸುಪ್ರಸಿದ್ಧ ಶಿವಮೊಗ್ಗದ ಶ್ರೀ ಕೋಟೆ ಆಂಜನೇಯ ಸ್ವಾಮಿ

ಜಾತ್ರೆ ಮತ್ತು ಬೇಡರು, ಶ್ರೀ ರಂಗನಾಥಸ್ವಾಮಿ ಜಾತ್ರೆ ಮತ್ತು ಬೇಡರು, ಅಲ್ಲದೇ ಈ ಸಮುದಾಯ ಆಚರಿಸುವ ವಿಶಿಷ್ಟವಾದ ಶಿವರಾತ್ರಿ ಹಬ್ಬ, ಯುಗಾದಿ, ನಾಗರಪಂಚಮಿ, ಗೌರಿಹುಣ್ಣಿಮೆ, ಕಾರಹುಣ್ಣಿಮೆ, ದಸರಾ, ದೀಪಾವಳಿ ಹಬ್ಬ ಮತ್ತು ಶಿವಮೊಗ್ಗ ಜಿಲ್ಲೆಯಾದ್ಯಂತ ಆಚರಿಸುವ ಕುಮಾರರಾಮನ ಹಬ್ಬ ಇನ್ನಿತರ ಮಹತ್ವಯುತವಾದ ಬೇಡನಾಯಕರ ಸಂಸ್ಕೃತಿ, ಸಂಪ್ರದಾಯ, ನಂಬಿಕೆ, ವಿಧಿ–ನಿಷೇಧಗಳನ್ನು ಈ ಅಧ್ಯಯನದಲ್ಲಿ ಗ್ರಹಿಸಲಾಗಿದೆ. ನಾಲ್ಕನೆಯ ಅಧ್ಯಯನದಲ್ಲಿ ಆದಿವಾಸಿ ಆಚರಣೆಗಳ ವಿಶ್ಲೇಷಣೆ ಹಸಲರು ಬುಡಕಟ್ಟು ಸಮುದಾಯ ಕುರಿತು ಚರ್ಚಿಸಲಾಗಿದೆ. ಪ್ರಸ್ತುತ ಅಧ್ಯಾಯನದಲ್ಲಿ ಹಸಲರು ಬುಡಕಟ್ಟಿನ ಹಿನ್ನಲೆ, ಅವರಲ್ಲಿರುವ ಗೃಹ ವ್ಯವಸ್ಥೆ, ಉಡುಗೆ–ತೊಡುಗೆ, ಆಹಾರ ಪದ್ಧತಿ, ಕೃಷಿ ಕೂಲಿ ಕೆಲಸ, ಬೇಡ ಪದ್ಧತಿ, ನಾಟೀ ವೈದ್ಯ ಪದ್ಧತಿ, ಹಬ್ಬ ಹರಿದಿನ ಮತ್ತು ಜಾತ್ರೆ ಉತ್ಸವಗಳು ಬಹಳ ವಿಶಿಷ್ಟವಾಗಿ ಆಚರಿಸುವ ಜನಪದ ಕಲೆಯಾದ ಅಂಟಿಗೆ–ಪಂಟಿಗೆ, ಸಾಮಾಜಿಕ ಕಟ್ಟುಪಾಡುಗಳು ಇನ್ನಿತರ ವಿಷಯಗಳ ಕುರಿತು ಈ ಅಧ್ಯಯನದಲ್ಲಿ ಕೇಂದ್ರೀಕರಿಸಲಾಗಿದೆ. ಐದನೆಯ ಅಧ್ಯಯನದಲ್ಲಿ ಬೇಡ ಮತ್ತು ಹಸಲರು: ಆದಿವಾಸಿ ಆಚರಣೆಗಳ ತೌಲನಿಕ ವಿವೇಚನೆಯನ್ನು ಮಾಡಲಾಗಿದೆ. ಈ ಎರಡು ಸಮುದಾಯದಲ್ಲಿ ಕೆಲವು ಆಚರಣೆಗಳಲ್ಲಿ ಸಾಮ್ಯತೆ ಕಂಡು ಬರುವುದಿಲ್ಲ. ಬೇಡರು, ಕೋಲಾಟ, ಭಜನೆ ಮತ್ತು ಡೊಳ್ಳು ಕುಣಿತ ಕಲೆಯನ್ನು ಕರಗತಮಾಡಿಕೊಂಡಿದೆ. ಕೊನೆಯಲ್ಲಿ ವಕ್ತೃಗಳ ವಿವರ, ಗ್ರಂಥಋಣ, ಭಾವಚಿತ್ರಗಳನ್ನು ಅಳವಡಿಸಲಾಗಿದೆ. ಒಟ್ಟಿನಲ್ಲಿ ಈ ಪ್ರಬಂಧವು ಅರ್ಥಗರ್ಭಿತವಾದ ಅಧ್ಯಯನಗಳನ್ನೊಳಗೊಂಡ ಒಂದು ಪ್ರಬುದ್ಧ ಗ್ರಂಥ ಎಂಬುದರಲ್ಲಿ ಎರಡು ಮಾತಿಲ್ಲ.

## ೧. ಅಧ್ಯಯನದ ಫಲಿತಗಳು

೧. ಶಿವಮೊಗ್ಗ ಜಿಲ್ಲೆಯಲ್ಲಿ ಬೇಡರು ಮತ್ತು ಹಸಲರು ವಾಸಿಸುವ ಹಳ್ಳಿಗಳಲ್ಲಿ, ಹಾಡಿಗಳಲ್ಲಿ ಆಶ್ರಮಶಾಲೆಗಳ ಕೊರತೆ ಇರುವುದು ಅಧ್ಯಯನ ಮುಖಾಂತರ ಕಂಡುಕೊಳ್ಳಲಾಗಿದೆ.

೨. ಸರಕಾರದ ಅಭಿವೃದ್ಧಿ ಯೋಜನೆಗಳು ವಿವಿಧ ಸೌಲಭ್ಯ ಕುರಿತಾದ ಮಾಹಿತಿಯ ಕೊರತೆ ಮತ್ತು ಯೋಜನೆಗಳು, ಸವಲತ್ತುಗಳು ಹಾಡಿಗಳಲ್ಲಿ ನೆಲೆಸಿರುವ ಹಸಲರು ಬುಡಕಟ್ಟುಗಳಿಗೆ ಇನ್ನೂ ಮರೀಚಿಕೆಯಾಗಿಯೇ ಉಳಿದಿವೆ ಈ ಯೋಜನೆಗಳ ಅರಿವಿನ ಕೊರತೆ ಇದೆ. ಅನಕ್ಷರತೆ, ಅಜ್ಞಾನ ಇಂದಿಗೂ ಬಡತನದಿಂದ ಬಳಲುತ್ತಿದ್ದಾರೆ. ಎಂಬುದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ತಿಳಿದುಬಂದ ವಿಷಯವಾಗಿದೆ.

೩. ಗ್ರಾಮೀಣ ಭಾಗದಲ್ಲಿ ಬೇಡರು ಮತ್ತು ಹಾಡಿಗಳಲ್ಲಿರುವ ಹಸಲರು ಬುಡಕಟ್ಟು ಸಮುದಾಯಗಳು ಸರಕಾರದ ಜನತಾಮನೆಗಳಲ್ಲಿ ಯತೇಚ್ಛವಾಗಿ ವಾಸಿಸುತ್ತಿವೆ. ಅಧಿಕ ಸಂಖ್ಯೆಯಲ್ಲಿ ಜನತಾಮನೆಗಳು ಕಂಡು ಬರುತ್ತಿವೆ.

೪. ಆರ್ಥಿಕ ತೊಂದರೆಯಿಂದ ಹಳ್ಳಿಗಳಲ್ಲಿನ ಬೇಡರು ಮತ್ತು ಹಾಡಿಗಳಲ್ಲಿನ ಹಸಲರು ಗುಳೆ ಅಥವಾ ವಲಸೆ ಹೋಗುವ ಪರಿಸ್ಥಿತಿ ಅವರಿಗೆ ಬಂದೊದಗಿದೆ. ಇದಕ್ಕೆ ಕಾರಣ ನಿರಂತರವಾಗಿ ಕಾಡುತ್ತಿರುವ ಬರಗಾಲ. ಮುಂಬರುವ ವರ್ಷಗಳ ಕಾಲ ಬರಗಾಲ ಜಾನುವಾರಗಳಿಗೆ ಮತ್ತು ಜನಸಾಮಾನ್ಯರಿಗೆ, ರೈತರಿಗೆ ಶಾಪವಾಗಿ ಪರಿಣಮಿಸಿದೆ. ಇದರಿಂದಾಗಿ ಆರ್ಥಿಕ ದುರ್ಬಲರಾದವರ ಸಂಖ್ಯೆ ಹೆಚ್ಚಾಗಿದೆ.

೫. ಬೇಡರಿಗೆ ಮತ್ತು ಹಾಡಿಯಲ್ಲಿರುವ ಹಸಲರಿಗೆ ಬೇಸಿಗೆಯ ಸಂದರ್ಭದಲ್ಲಿ ಕುಡಿಯುವ ನೀರಿನ ಗಂಭೀರ ಸಮಸ್ಯೆ ಎದುರಾಗಿರುವುದು ಕಂಡುಬರುತ್ತದೆ.

೬. ನ್ಯಾಯಬೆಲೆ ಅಂಗಡಿಗಳಲ್ಲಿಯೂ ಕೂಡ ಸರಿಯಾದ ಸಮಯಕ್ಕೆ ಆಹಾರ ವಿತರಣೆ ದೊರಕದೆ ಅಪೌಷ್ಠಿಕತೆಯು ಬೇಡರಿಗೂ ಮತ್ತು ಹಸಲರಿಗೂ ಕಾಡಿರುವುದು ಕಂಡುಬಂದಿದೆ.

೭. ಗ್ರಾಮಾಂತರ ಪ್ರದೇಶದಲ್ಲಿನ ಬೇಡರು ಮತ್ತು ಹಾಡಿಯಲ್ಲಿರುವ ಹಸಲರು ಬುಡಕಟ್ಟಿನ ಪುರುಷ ಮತ್ತು ಮಹಿಳೆಯರು ಅನಕ್ಷರತೆಯಿಂದ ಕೂಡಿರುವುದು, ಅನಕ್ಷರಸ್ಥರ ಸಂಖ್ಯೆ ಹೆಚ್ಚಾಗಿರುವುದು ಅಧ್ಯಯನದಿಂದ ತಿಳಿದುಕೊಳ್ಳಲಾಗಿದೆ.

೮. ಉರಿ ಬಿಸಿಲು ಮತ್ತು ಬೇಸಿಗೆಯಲ್ಲಿ ವಿದ್ಯುತ್ ಕೊರತೆ ಹಸಲರನ್ನು ಮತ್ತು ಬೇಡರನ್ನು ಗಂಭೀರ ಸ್ವರೂಪದಲ್ಲಿ ಕಾಡಿದೆ.

೯. ಗ್ರಾಮಗಳಲ್ಲಿ ಮತ್ತು ಹಾಡಿಗಳಲ್ಲಿ ಶಾಲೆ ಇದ್ದರೂ ಶಿಕ್ಷಕರ ಕೊರತೆ ಮಕ್ಕಳ ಶಿಕ್ಷಣ ಕುಂಟಿತವಾಗಲು ಕಾರಣವಾಗಿದೆ ಎಂಬುದನ್ನು ಅಧ್ಯಯನದ ಮುಖಾಂತರ ಕಂಡುಕೊಳ್ಳಲಾಗಿದೆ.

೧೦. ಶಿವಮೊಗ್ಗ ಜಿಲ್ಲೆಯ ನಗರ ಮತ್ತು ಗ್ರಾಮಾಂತರ ಪ್ರದೇಶದ ಬೇಡರು ಆರ್ಥಿಕವಾಗಿ ಚೇತರಿಸಿಕೊಳ್ಳುವುದು ಕಂಡುಬಂದರೆ, ಹಸಲರು ಸಮುದಾಯ ಇಂದಿಗೂ ಬಡತನದ ಛಾಯೆಯಲ್ಲಿಯೇ ಇದೆ. ಅದಕ್ಕೆ ಕಾರಣ ಬಡತನ.

೧೧. ಹಸಲರು ಮತ್ತು ಬೇಡರು ಬ್ಯಾಂಕ್ ಮುಖಾಂತರ ಸಾಲಸೌಲಭ್ಯ ಪಡೆಯುವುದು ತೀರಾ ಕಡಿಮೆ ಎಂದೇ ಹೇಳಬೇಕಾಗುತ್ತದೆ. ಬ್ಯಾಂಕ್ ಸಾಲ ತೀರಿಸದೇ ಹೋದರೆ ಮಾನ ಮಾರ್ಯದೆ ಹೋಗುತ್ತದೆಂಬ ಭಯದಲ್ಲಿದ್ದಾರೆ.

೧೨. ಆರ್ಥಿಕವಾಗಿ ಅತ್ಯಂತ ನಿಕೃಷ್ಟವಾಗಿ ಬದುಕುವ ಬೇಡ ಮತ್ತು ಹಸಲರು ಸಮುದಾಯದಲ್ಲಿ ಅರ್ಧಕ್ಕೆ ಶಾಲೆಬಿಟ್ಟ ಮಕ್ಕಳು ಕೃಷಿಕೂಲಿ ಆಳುಗಳಾಗಿ ದುಡಿಯುತ್ತಿರುವುದು ಕಂಡು ಬಂದಿದೆ. ಇವರೆಲ್ಲ ಶಿಕ್ಷಣದಿಂದ ವಂಚಿತರಾಗಿದ್ದಾರೆ.

೧೩. ಹಸಲರು ಹಾಡಿಗಳಲ್ಲಿ ಮತ್ತು ಹಳ್ಳಿಗಳಲ್ಲಿ ವಾಸಿಸುವ ಬೇಡರಿಗೆ ಸರಕಾರದ ಆಸ್ಪತ್ರೆಗಳ ಕೊರತೆ ಎದ್ದು ಕಾಣುತ್ತದೆ. ಉಚಿತ ಆರೋಗ್ಯ ಸೌಲಭ್ಯ ಗಗನ ಕುಸುಮವಾಗಿದೆ. ನಾಯಿ, ಚೇಳು, ಹಾವು ಕಡಿದರೆ ಅದಕ್ಕೆ ತಕ್ಕದಾದ ಔಷಧದ ಕೊರತೆ ಎದ್ದು ಕಾಣುತ್ತದೆ.

೧೪. ಹಸಲರು ಸಮುದಾಯಕ್ಕೆ ಮತ್ತು ಬೇಡ ಸಮುದಾಯಕ್ಕೆ ಸರಕಾರದ ಮೂಲಭೂತ ಸೌಲಭ್ಯ ಇಂದಿಗೂ ದೊರಕದಿರುವುದು ಕಂಡುಬರುತ್ತದೆ.

೧೫. ಬೇಡರು ವಾಸಿಸುವ ಗ್ರಾಮಗಳಲ್ಲಿ ಮತ್ತು ಹಸಲ ಸಮುದಾಯ ವಾಸಿಸುವ ಹಾಡಿಗಳಲ್ಲಿ ಸರ್ಕಾರದ ಯೋಜನೆಗಳಲ್ಲಿ ಒಂದಾದ ಉದ್ಯೋಗ ಖಾತ್ರಿ ಯೋಜನೆಯನ್ನು ಖಾಯಂ ಆಗಿ ಅನುಷ್ಠಾನಗೊಳಿಸಬೇಕಾಗಿದೆ.

೧೬. ಬೇಡರಿಗೆ ಮತ್ತು ಹಸಲರು ಬುಡಕಟ್ಟುಗಳಿಗೆ ಸರಕಾರದ ವತಿಯಿಂದ ಇರುವಂತಹ ಜನರಿಗಾಗಿ ಇರುವ ಜಾಗೃತಿ ಕಾರ್ಯಕ್ರಮ ಸರಕಾರದ ವತಿಯಿಂದ ಆಯೋಜಿಸುವುದು ಅವಶ್ಯವಿದೆ. ಮುಂಬರುವ ದಿನಗಳಲ್ಲಿ ಇದು ಕಾರ್ಯರೂಪಕ್ಕೆ ಬರಬೇಕಾಗಿದೆ.

೧೭. ಕೇಂದ್ರ ಸರಕಾರ ಯೋಜನೆಗಳಾದ ಗ್ರಾಮಗಳನ್ನು ದತ್ತು ತೆಗೆದುಕೊಳ್ಳುವ ಮಾದರಿಯಲ್ಲಿ ಹಸಲರು ಬುಡಕಟ್ಟಿನ ಹಾಡಿಗಳನ್ನು ಆಯ್ಕೆ ಮಾಡಿಕೊಳ್ಳಬೇಕಾಗಿದೆ. ಇದರಿಂದ ಗ್ರಾಮಗಳು ಮತ್ತು ಹಾಡಿಗಳು ಅಭಿವೃದ್ಧಿಯಾಗಲಿವೆ.

೧೮. ಶಿವಮೊಗ್ಗದಲ್ಲಿರುವ ಬೇಡರು ಹರಪನಹಳ್ಳಿ ಪಾಳೇಯಗಾರರ ಅವನತಿ ನಂತರ ಶಿವಮೊಗ್ಗ ಮತ್ತು ಶಿವಮೊಗ್ಗ ಜಿಲ್ಲೆಯಾದ್ಯಾಂತ ಪಸರಿಸಿದ್ದಾರೆ. ಆದರೆ ಹಸಲರು ಸಮುದಾಯದವರು ಮೂಲದಿಂದಲೂ ಶಿವಮೊಗ್ಗ ಜಿಲ್ಲೆಯವರೇ ಆಗಿದ್ದಾರೆ.

೧೯. ಶಿವಮೊಗ್ಗ ಜಿಲ್ಲೆಯಲ್ಲಿ ನೆಲೆಸಿರುವ ಬೇಡರ ಜನಸಂಖ್ಯೆ ಹಸಲರು ೫,೪೦೦ ಬುಡಕಟ್ಟಿಗಿಂತ ಹತ್ತು ಪಟ್ಟು ಹೆಚ್ಚಿದ್ದಾರೆ. ಆದರೆ ಶಿವಮೊಗ್ಗದಲ್ಲಿರುವ ಹಸಲರು ಬುಡಕಟ್ಟು ಒಂದು ಅಂದಾಜಿನ ಪ್ರಕಾರ ೪,೦೦೦ಕ್ಕಿಂತಲೂ ಹೆಚ್ಚಿನ ಜನಸಂಖ್ಯೆಯನ್ನು ಹೊಂದಿದೆ.

೨೦. ಶಿವಮೊಗ್ಗ ಜಿಲ್ಲೆಯಲ್ಲಿ ನೆಲೆಸಿರುವ ಬೇಡ ಬುಡಕಟ್ಟು ಮತ್ತು ಹಸಲರು ಸಮುದಾಯದ ಬುಡಕಟ್ಟುಗಳಲ್ಲಿ ಮದುವೆಯಂತಹ ಪ್ರಮುಖ ವಿಷಯದಲ್ಲಿ ಹೆಣ್ಣು ಗಂಡುಗಳನ್ನು ಕೊಡುವ ಮತ್ತು ತೆಗೆದುಕೊಳ್ಳುವ ವಿಷಯದಲ್ಲಿ ಮದುವೆ ಆಚರಣೆಗಳಲ್ಲಿ ಭಿನ್ನತೆಗಳು ಕಂಡು ಬರುತ್ತವೆ.

೨೧. ಶಿವಮೊಗ್ಗ ಜಿಲ್ಲೆಯಲ್ಲಿ ನೆಲೆಸಿರುವ ಹಸಲರು ಬುಡಕಟ್ಟು ಮತ್ತು ಬೇಡ ಬುಡಕಟ್ಟುಗಳಲ್ಲಿ ಅವಿಭಕ್ತ ಕುಟುಂಬ ಪದ್ಧತಿ ತೀವ್ರವಾಗಿದ್ದು, ಇತ್ತೀಚಿಗೆ ವಿಭಕ್ತ ಕುಟುಂಬಗಳಾಗುತ್ತಿವೆ.

೨೨. ಶಿವಮೊಗ್ಗ ಜಿಲ್ಲೆಯಲ್ಲಿರುವ ಬೇಡರು ತಮ್ಮದೇ ಆದ ನ್ಯಾಯ ಪದ್ದತಿಯನ್ನು ಹೊಂದಿದ್ದಾರೆ. ಒಂದು ವೇಳೆ ನ್ಯಾಯ ತೀರ್ಮಾನದಲ್ಲಿ ನ್ಯಾಯ ಸಿಗದಿದ್ದರೆ, ಕೋರ್ಟ್ ಮತ್ತು ಪೋಲೀಸ್ ಸ್ಟೇಷನ್ ಮೊರೆ ಹೋಗುತ್ತಾರೆ. ಆದರೆ, ಹಸಲರು ಬುಡಕಟ್ಟುಗಳು ತಮ್ಮದೇ ನ್ಯಾಯ ಪದ್ಧತಿಯನ್ನು ಹೊಂದಿದ್ದು, ಬ್ರಾಹ್ಮಣರು ನ್ಯಾಯ ನೀಡುವ ಯಜಮಾನರು. ಅವರು ಹೇಳಿದಂತೆ ಕೇಳುತ್ತಾರೆ. ಅವರ ತೀರ್ಪಿಗೆ ತಲೆ ಬಾಗುತ್ತಾರೆ. ಆದರೆ ಈ ಸಮುದಾಯವು ಕೋರ್ಟ್ ಮತ್ತು ಪೊಲೀಸ್ ಸ್ಟೇಷನ್ ಮೆಟ್ಟಿಲುಗಳನ್ನು ಹತ್ತದಿರುವುದು ಕಂಡು ಬರುತ್ತದೆ.

೨೩. ಬೇಡ ಬುಡಕಟ್ಟು ಮತ್ತು ಹಸಲರು ಬುಡಕಟ್ಟು ಸಮುದಾಯಗಳ ಕುರಿತು ಸಾಕಷ್ಟು ಸಂಶೋಧನಾ ಅಧ್ಯಯನಗಳು ಒಳಗಾಗಿದ್ದರೂ ಹಸಲರು ಸಮುದಾಯದ ಬಗ್ಗೆ ಸಮಗ್ರವಾಗಿ ಯಾವುದೇ ಸಂಶೋಧನೆ ನಿರ್ದಿಷ್ಟವಾಗಿ ನಡೆದಿಲ್ಲ. ಈ ಅಧ್ಯಯನ ಅವರ ಸಂಸ್ಕೃತಿಯನ್ನು ಅನಾವರಣ ಮಾಡಿದಂತಾಗುತ್ತದೆ.

೨೪. ಶಿವಮೊಗ್ಗ ಜಿಲ್ಲೆಯ ಬೇಡರು ಮತ್ತು ಹಸಲರು ಬುಡಕಟ್ಟು ಸಮುದಾಯಗಳ ಸಾಂಸ್ಕೃತಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನು ಈ ಪ್ರಬಂಧದ ಮೂಲಕ ಕಂಡುಕೊಳ್ಳಲಾಗಿದೆ.

೨೫. ಶಿವಮೊಗ್ಗ ಜಿಲ್ಲೆಯ ಪರಿಸರದಲ್ಲಿರುವ ಬೇಡರು ಮತ್ತು ಹಸಲರು ಬುಡಕಟ್ಟು ಸಮುದಾಯದಲ್ಲಿ ಸಾಮರಸ್ಯದ ಜೀವನ ಕಂಡುಬರುತ್ತದೆ.

೨೬. ಶಿವಮೊಗ್ಗ ಜಿಲ್ಲೆಯ ಬೇಡರು ಮತ್ತು ಹಸಲರು ಬುಡಕಟ್ಟುಗಳ ಬಗ್ಗೆ ಅವರ ವೇಷಭೂಷಣ, ಆಚಾರ ವಿಚಾರ ಅವುಗಳ ಪರಸ್ಪರತೆಯ ಅಂಶಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

೨೭. ಹಸಲರು ಬುಡಕಟ್ಟು ಮತ್ತು ಬೇಡರು ರಾಜಕೀಯವಾಗಿ ಮುನ್ನಲೆಗೆ ಬರಲು ಪರದಾಡುತ್ತಿವೆ. ಈ ವಿಷಯದಲ್ಲಿ ಅನಕ್ಷರತೆ ದೊಡ್ಡತಲೆನೋವಾಗಿ ಪರಿಣಮಿಸಿರುವುದು ಕಂಡುಬರುತ್ತದೆ.

೨೮. ಹಸಲರು ಬುಡಕಟ್ಟು ಮತ್ತು ಬೇಡ ಸಮುದಾಯ ನಂಬಿಕೆ, ಸಂಪ್ರದಾಯ, ಆಚರಣೆ, ವಿಧಿ–ನಿಷೇಧಗಳು, ಮಡಿ ಮೈಲಿಗೆಯಲ್ಲಿ ಸಮಾನತೆಯನ್ನು ಕಂಡುಕೊಂಡಿರುವುದು ಕಂಡು ಬರುತ್ತದೆ.

೨೯. ಹಸಲರು ಬುಡಕಟ್ಟು ಮತ್ತು ಬೇಡ ಸಮಾಜದಲ್ಲಿ ಬಾಲಕಿಯರು ಶಾಲೆ ಬಿಟ್ಟ ಪ್ರಕರಣಗಳು ಯತೇಚ್ಛವಾಗಿ ಕಂಡುಬರುತ್ತವೆ. ಪದವಿಪೂರ್ವ ಮತ್ತು ಪದವಿ ಶಿಕ್ಷಣದಿಂದ ಈ ಬಾಲಕಿಯರು ವಂಚಿತರಾಗಿರುವುದು ಕಂಡು ಬಂದಿದೆ.

೩೦. ಬೇಡರಲ್ಲಿ ದುಡಿದು ತಿನ್ನಬೇಕೆಂಬ ಹಂಬಲವಿದ್ದರೆ ಹಸಲರು ಸಮುದಾಯದ ಪುರುಷರಲ್ಲಿ ಮತ್ತು ಯುವಕರಲ್ಲಿ ಸೋಮಾರಿತನ ಹೆಚ್ಚಾಗಿರುವುದು ಕಂಡುಬರುತ್ತದೆ. ಇವರು ಮಹಿಳೆಯ ದುಡಿಮೆಯ ಮೇಲೆ ಅವಲಂಬಿಗಳಾಗಿದ್ದಾರೆ.

೩೧. ಗ್ರಾಮಾಂತರ ಮಟ್ಟದಲ್ಲಿ ಬೇಡ ಸಮುದಾಯದ ಯುವಕರು ದುಶ್ಚಟಗಳ ದಾಸರಾಗಿದ್ದಾರೆ, ಮದ್ಯಪಾನ, ಧೂಮಪಾನ, ಗುಟ್ಕಾ, ತಂಬಾಕು ಇತ್ಯಾದಿ ಚಟಗಳಿಗೆ ದಾಸರಾಗಿದ್ದಾರೆ. ಕೆಲವರು ರೋಗಗಳಿಂದ ನಿಧನ ಹೊಂದಿದ್ದಾರೆ. ಆದರೆ ಹಸಲರು ಸಮುದಾಯದ ಮಹಿಳೆ ಮತ್ತು ಪುರುಷರು, ಯುವಕರು, ಅಡಿಕೆ ಎಲೆಯನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ. ಇದಕ್ಕೆ ಅವರದೇ ಭಾಷೆಯಲ್ಲಿ ಕೌಳ–ಎಂದು ಕರೆಯುವುದು ಅಧ್ಯಯದಿಂದ ಕಂಡು ಬಂದಿದೆ. ಹಸಲರಲ್ಲಿ ಆರೋಗ್ಯವಂತರೇ ಹೆಚ್ಚು.

೩೨. ಬೇಡರಲ್ಲಿ ಅಪರಾಧ ಪ್ರವೃತ್ತಿ ಕಂಡು ಬಂದರೆ, ಹಸಲರು ಬುಡಕಟ್ಟಿನಲ್ಲಿ ಅಪರಾಧ ಪ್ರವೃತ್ತಿ ತುಂಬಾ ಕಡಿಮೆ ಎಂದೇ ಹೇಳಬೇಕಾಗುತ್ತದೆ.

೩೩. ಹಸಲರು ಸಮುದಾಯ ಇಂದಿಗೂ ನಾಟೀ ವೈದ್ಯ ಪದ್ದತಿಯನ್ನೇ ಮುಂದುವರಿಸಿಕೊಂಡು ಬರುತ್ತಿದೆ. ಆದರೆ, ಬೇಡರು ನಾಟೀ ವೈದ್ಯ ಪದ್ಧತಿಯ ಬದಲು ಆಸ್ಪತ್ರೆ, ಸರಕಾರಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆಯುವುದು ಕಂಡು ಬರುತ್ತದೆ.

೩೪. ಗ್ರಾಮಾಂತರ ಪರಿಸರದ ಬೇಡ ಪುರುಷರು ಎಲ್ಲ ರೀತಿಯ ಕೃಷಿ ಕೆಲಸದಲ್ಲಿ ತೊಡಗುತ್ತಾರೆ. ಹೊಲಗದ್ದೆಗಳಿಗೆ ನೀರು ಹರಿಸುವುದು, ಬಿತ್ತುವುದು, ಉಳುಮೆ ಮಾಡುವುದು, ಕಬ್ಬು ಕಡಿಯುವುದು, ಭತ್ತ ಕಟಾವು ಮಾಡುವುದು ಮಾಡಿದರೆ, ಹಾಡಿಗಳಲ್ಲಿರುವ ಹಸಲರು ಬುಡಕಟ್ಟು ಪುರುಷರು–ಅಡಿಕೆ ಮರಗಳನ್ನು ಏರಿ ಅಡಿಕೆ ಹರಿಯುವುದು, ಅಡಿಕೆಯ ಮರದಿಂದ ಮರಕ್ಕೆ ಜಿಗಿಯುವುದು–ಈ ಕೆಲಸದಲ್ಲಿಯೇ ಹೆಚ್ಚಾಗಿ ಕೃಷಿ ಬದುಕನ್ನು ಕಂಡುಕೊಂಡಿದ್ದಾರೆ. ಹಾಗಾಗಿ ಹಸಲರು ಬುಡಕಟ್ಟು ಪುರುಷರ ಕಾಲುಗಳು ಯತೇಚ್ಛವಾಗಿ ಡೊಂಕಾಗಿರುತ್ತವೆ. ಮರದಿಂದ ಮರಕ್ಕೆ ಜಿಗಿಯುವುದು, ಅಡಿಕೆ ಬಿಡಿಸುವುದೇ ಇವರ ಮೂಲ ಕಾಯಕವಾಗಿದೆ.

## ೨. ಸಲಹೆ ಮತ್ತು ಪರಿಹಾರಗಳು

೧. ಸರಕಾರದ ಯೋಜನೆಗಳಲ್ಲಿ ಒಂದಾದ ಮಹಾತ್ಮಗಾಂಧಿ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯನ್ನು ಅನುಷ್ಠಾನಗೊಳಿಸಬೇಕು

೨. ಹಸಲರ ಹಾಡಿಗಳಲ್ಲಿ ಸರಕಾರವು ಪ್ರಾಥಮಿಕ ಶಾಲೆಯನ್ನು ತೆರೆಯಬೇಕು. ಹಾಡಿಗಳಲ್ಲಿರುವ ಬಾಲಕ, ಬಾಲಕಿಯರು ಒಂದು ಅಥವಾ ಎರಡು ಕಿ.ಮೀ. ದೂರದಲ್ಲಿರುವ ಪ್ರಾಥಮಿಕ ಶಾಲೆಗಳಿಗೆ ನಡೆದುಕೊಂಡು ಹೋಗುವ ಪರಿಸ್ಥಿತಿ ಇದೆ.

೩. ಹಸಲರು ಹಾಡಿಗಳಲ್ಲಿ, ಬೇಡರು ವಾಸಿಸುವ ಗ್ರಾಮಗಳಲ್ಲಿ ಸರಕಾರದ ವತಿಯಿಂದ ಇನ್ನಷ್ಟೂ ಜನತಾಮನೆಗಳು ಬೇಕಾಗಿವೆ. ಅವಿಭಕ್ತ ಕುಟುಂಬಗಳು, ಕೌಟುಂಬಿಕ ಕಲಹಗಳಿಂದಾಗಿ ವಿಭಕ್ತ ಕುಟುಂಬಗಳ ಸಂಖ್ಯೆ ಗಣನೀಯವಾಗಿ ಏರುತ್ತಿರುವುದರಿಂದ ಸರಕಾರದ ಜನತಾ ಮನೆಗಳ ಅವಶ್ಯಕತೆ ಇದೆ.

೪. ಹಸಲರು ಹಾಡಿಗಳಲ್ಲಿ ಮತ್ತು ಬೇಡರು ವಾಸಿಸುವ ಹಳ್ಳಿ ಅಥವಾ ಗ್ರಾಮಗಳಲ್ಲಿ ನಾಗರೀಕ ಸೌಲಭ್ಯಗಳನ್ನು ಕಲ್ಪಿಸುವುದು ಅವಶ್ಯಕತೆ ಇದೆ. ಸ್ನಾನದ ಕೊಠಡಿ, ಶೌಚಾಲಯ, ಕುಡಿಯುವ ನೀರು, ವಿದ್ಯುತ್ ವ್ಯವಸ್ಥೆ, ರಸ್ತೆ ರಿಪೇರಿ, ಕಾಡು ಪ್ರಾಣಿಗಳಿಂದ ರಕ್ಷಣೆ, ಬಸ್ ವ್ಯವಸ್ಥೆ–ಇನ್ನಿತರ ಸೌಲಭ್ಯವನ್ನು ಸರಕಾರವು ಕಲ್ಪಿಸಬೇಕಾಗಿದೆ.

೫. ಉಚಿತ ಆರೋಗ್ಯ ಕೇಂದ್ರವನ್ನು ಸರಕಾರವು ಹಸಲರು ಹಾಡಿಗಳಲ್ಲಿ ಮತ್ತು ಬೇಡರು ವಾಸಿಸುವ ಗ್ರಾಮ, ಹೋಬಳಿಗಳಲ್ಲಿ ತೆರೆಯಬೇಕಾಗಿದೆ.

೬. ಪ್ರತಿಯೊಂದು ಹಸಲರು ಹಾಡಿಗಳಲ್ಲಿ ಮತ್ತು ಬೇಡರು ವಾಸಿಸುವ ಬೆಟ್ಟ, ಗುಡ್ಡ, ಅರಣ್ಯ ಪ್ರದೇಶಗಳಲ್ಲಿ ಅಂಗನವಾಡಿ ಕೇಂದ್ರಗಳನ್ನು ತೆರೆಯಲು ಸರಕಾರ ವ್ಯವಸ್ಥೆ ಮಾಡಬೇಕಾಗಿದೆ.

೭. ಹಸಲರು ಹಾಡಿಗಳ ಅಭಿವೃದ್ಧಿಗೆ, ಅಭಿವೃದ್ಧಿ ಮಂಡಳಿ ರಚನೆಯನ್ನು ಸರಕಾರ ಕಲ್ಪಿಸಿ ಕೊಡಬೇಕಾಗಿದೆ.

೮. ಹಸಲರು ಬುಡಕಟ್ಟು ಮತ್ತು ಬೇಡ ಬುಡಕಟ್ಟುಗಳ ಕೂಲಿ ಆಳುಗಳಿಗೆ ಸರಕಾರಿ ಜೀವ ವಿಮೆ ಭದ್ರತೆಯನ್ನು, ಸರಕಾರ ಒದಗಿಸಬೇಕಾಗಿದೆ.

೯. ಹಳ್ಳಿಗಳಲ್ಲಿ ನೆಲೆಸಿರುವ ಬೇಡರಿಗೆ ಮತ್ತು ಹಾಡಿಗಳಲ್ಲಿ ವಾಸಿಸಿರುವ ಹಸಲರಿಗೆ ಸರಕಾರದ ಸೌಲಭ್ಯಗಳು, ಯೋಜನೆಗಳು ತಲುಪಬೇಕಾದರೆ ಜಾಗೃತಿ ಮೂಡಿಸುವ ಕೆಲಸವಾಗಬೇಕು. ಜಾಗೃತಿ ಕಾರ್ಯಕ್ರಮವು ಸರಕಾರದ ವತಿಯಿಂದ ಆಯೋಜಿಸಬೇಕು.

೧೦. ಕೇಂದ್ರ ಸರಕಾರದ ಯೋಜನೆಗಳಲ್ಲಿ ಒಂದಾದ ಗ್ರಾಮವನ್ನು ದತ್ತು ತೆಗೆದುಕೊಳ್ಳುವ ಆಯ್ಕೆಯನ್ನು ಮಾಡಬೇಕು. ಸತತವಾಗಿ ಬರಗಾಲದಿಂದ ತತ್ತರಿಸಿರುವ ಬೇಡ ಬುಡಕಟ್ಟಿನ ಹಳ್ಳಿಗಳನ್ನು ಮತ್ತು ಹಸಲರು ವಾಸಿಸುವ ಹಾಡಿಗಳನ್ನು ದತ್ತು ತೆಗೆದುಕೊಳ್ಳುವ ಮೂಲಕ ಕೆಲಸ ಮಾಡಬೇಕಾಗಿದೆ.

೧೧. ಬೇಡ ಮತ್ತು ಹಸಲರು ಬುಡಕಟ್ಟು ಕುಟುಂಬಗಳಿಗೆ ಅಂತ್ಯೋದಯ ಪಡಿತರ ಚೀಟಿಯನ್ನು ಒದಗಿಸಬೇಕು.

೧೨. ಸಮುದಾಯದ ಜೊತೆಗೆ ಸೇರಿ ಸರಕಾರವು ಯೋಜನೆ ರೂಪಿಸಬೇಕು.

೧೩. ಅರಣ್ಯವೇ ಹಸಲರು ಸಮುದಾಯಕ್ಕೆ ಸಂಪತ್ತು, ಏಕೆಂದರೆ ಅರಣ್ಯದ ತಪ್ಪಲಿನ ಹಾಡಿಗಳಲ್ಲಿ ವಾಸಿಸುತ್ತಿರುವ ಹಸಲರು ಕಾಡು ಸಂಮೃದ್ಧಿಯಾಗಿರಬೇಕೆಂದು ಬಯಸುತ್ತಾರೆ. ಆದರೆ ಅರಣ್ಯ ನಾಶ ಮಾಡಿದರೆ ಅವರ ಪರಿಸರ, ಪ್ರಕೃತಿ ಬದುಕಿಗೆ ದಕ್ಕೆ ಬರಲಿದೆ.

೧೪. ಬೇಡ ಮತ್ತು ಹಸಲರು ಬುಡಕಟ್ಟು ವಾಸಿಸುವ ಸ್ಥಳಗಳಲ್ಲಿ ಸಂಚಾರಿ ಆರೋಗ್ಯ, ಘಟಕಗಳು ಪರಿಣಾಮಕಾರಿಯಾಗಿ ಕೆಲಸ ಮಾಡಬೇಕು.

೧೫. ಕಾಡಿನಲ್ಲಿ ಸಿಗುವ ಕಿರು ಅರಣ್ಯ ಉತ್ಪನ್ನ ತೆಗೆಯಲು ಬೇಡ ಮತ್ತು ಹಸಲರು ಬುಡಕಟ್ಟುಗಳಿಗೆ ಪ್ರಾತಿನಿಧ್ಯ ನೀಡಬೇಕು.

೧೬. ಬೇಡ ಮತ್ತು ಹಸಲರು ಬುಡಕಟ್ಟುಗಳಿಗೆ ಸಂಬಂಧಿಸಿದ ಯುವಜನ ಮತ್ತು ಉದ್ಯೋಗ ನೀತಿಯನ್ನು ರೂಪಿಸಿ ಜಾರಿಗೆ ತರಬೇಕು.

೧೮. ಬೇಡ ಮತ್ತು ಹಸಲರು ಬುಡಕಟ್ಟುಗಳ ಸಂಸ್ಕೃತಿಯ ಉಳಿವು ಮತ್ತು ಪರಿಚಯಕ್ಕಾಗಿ ಸಾಂಸ್ಕೃತಿಕ ಕೇಂದ್ರಗಳನ್ನು ಸ್ಥಾಪಿಸುವುದು.

## ೩. ಗ್ರಂಥಋಣ

೧. ಅಮರೇಶ ನುಗಡೋಣಿ (ಸಂ), ಕನ್ನಡ ಸಂಶೋಧನೆಯ ವೈಧಾನಿಕತೆಗಳು, ಪ್ರಾಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಅಕ್ಕಮ್ಮ ಟಿ., ಅಸಂಘಟಿತ ವಲಯದಲ್ಲಿ ಮಹಿಳಾ ಕೆಲಸಗಾರರು: ಒಂದು ಅಧ್ಯಯನ (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೩. ಆಂಜನಪ್ಪ. ಬಿ.ಎಚ್, ಮಹಿಳೆ ಮತ್ತು ದುಡಿಮೆ, ಸೃಷ್ಟಿ ಪಬ್ಲಿಕೇಷನ್, ಬೆಂಗಳೂರು, ೨೦೦೬.

೪. ಕಾವೇರಿ. ಪಿ., ಸಾಗರ, ಕೊಳಚೆ ಪ್ರದೇಶದ ಮಹಿಳಾ ಬದುಕು, (ಅಪ್ರಕಟಿತ ಎಂ.ಫಿಲ್. ಸಂಪ್ರಬಂಧ) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೫. ಕುಮಟಾ ಶಿಮೊಗೆ ಪ್ರಕಾಶನ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್, ಶಿವಮೊಗ್ಗ, ೨೦೦೬.

೬. ಕರ್ನಾಟಕ ರಾಜ್ಯ ಗ್ಯಾಜೇಟಿಯರ್, ಭಾಗ–೧, ೧೯೯೦.

೭. ಕುಮಾರ್ ವಿ.ಎಸ್. ಸಿ.ಟಿ.ಆರ್, ಕನ್ನಡ ನಾಡುಕೃತಿ, ವಸಂತ ಪ್ರಕಾಶನ, ಜಯನಗರ ಬೆಂಗಳೂರು, ೨೦೧೨.

೮. ಚಂದ್ರಪೂಜಾರಿ ಎಂ, ಸಂಶೋಧಕರು ಮತ್ತು ಕ್ಷೇತ್ರಕಾರ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೨.

೯. ಚಂದ್ರಪೂಜಾರಿ ಎಂ, ಸಮಾಜ ಸಂಶೋಧನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೦. ಚಂದ್ರಶೇಖರ ಕಂಬಾರ, ಕನ್ನಡ ಜಾನಪದ ಕೋಶ, ಸಂಪುಟ–೨, ೧೯೮೫.

೧೧. ಚಂದ್ರಪೂಜಾರಿ. ಎಂ, ಸಂಶೋಧನೆ ಏನು? ಏಕೆ? ಹೇಗೆ?, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೧೨. ಚನ್ನಮ್ಮ ಕೆ.ಸಿ, ಮಹಿಳೆಯ ದುಡಿಮೆ ಏಕರೂಪತೆಯ ಪ್ರಶ್ನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೧೩. ಚಿದಾನಂದಮೂರ್ತಿ ಎಂ, ಕನ್ನಡ ಸಂಸ್ಕೃತಿ ಮತ್ತು ಹೆಮ್ಮೆ, ಪ್ರಸಾರಾಂಗ, ಸಾಹಿತಿಗಳ ಬಳಗ, ಬೆಂಗಳೂರು, ೧೯೮೭.

೧೪. ಶ್ರೀ ಚೌಡಮ್ಮ ತಾಯಿ, ಶ್ರೀ ಕ್ಷೇತ್ರ ಸಿಗಂಧೂರು ಕ್ಷೇತ್ರ ಮಹಾತ್ಮೆ, ಪ್ರಕಾಶನ ಶ್ರೀ ಚೌಡಮ್ಮದೇವಿ ದೇವಾಲಯ ಸಿಗಂದೂರು, ಕಳಸವಳ್ಳಿ ಗ್ರಾಮ, ತುಂಬ್ರಿ ಅಂಚೆ, ಸಾಗರ ತಾ॥ ಶಿವಮೊಗ್ಗ ಜಿಲ್ಲೆ, ೨೦೧೭.

೧೫. ಜ್ಯೋತಿ ಶಶಿಕುಮಾರ್, ಮಹಿಳಾ ಸಾಮಾಜಿಕತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

೧೬. ಢಂಗ. ಡಿ.ಬಿ, ಜನಾಂಗ ಪರಿಚಯ, ಪೆರಿಯಾರ್ ಪ್ರಕಾಶನ, ಧಾರವಾಢ, ೧೯೮೮.

೧೭. ಡಿಸೋಜ ನಾ, ಕತ್ತಲೆಯಿಂದ ಬೆಳಕಿಗೆ ಹಸಲರು, ಉದಾಯವಾಣಿ ಡಿಸೆಂಬರ್–೧೪–೧೯೮೬.

೧೮. ದಿನಕರ, ಶಿವಮೊಗ್ಗ ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರ ನೆನಪುಗಳು, ಪ್ರಕಾಶನ, ಶಿವಮೊಗ್ಗ ಜಿಲ್ಲೆ ಸ್ವಾತಂತ್ರ್ಯ ಹೋರಾಟಗಾರರ ಸಂಘ, ೧೯೯೩.

೧೯. ದೇವೇಂದ್ರ ಕೀರ್ತಿ ಭಟ್ಟಾರಕ ಮಹಾಸ್ವಾಮಿಗಳು, ನುಡಿಸಿಂಚನ, ಶ್ರೀ ಸಿದ್ದಾಂತ ಕೀರ್ತಿ ಗ್ರಂಥಮಾಲೆ, ಹೊಂಬುಜ, ೨೦೧೭.

೨೦. ದೀಪಕ್ ಸಾಗರ್ ಎಂ.ಜಿ.ಆರ್., ಹಸಲರ ಬದುಕಿನ ಹೊಂಗನಸಿನಲ್ಲಿ ಹಸಲರು, ಸುಧಾವಾರ ಪತ್ರಿಕೆ, ಬೆಂಗಳೂರು, ೨೨.೯.೧೯೯೬.

೨೧. ನಂದಕುಮಾರ್, ಸಚಿತ್ರ ಸಂಗೀತ ಸರಸ್ವತಿ, ಪ್ರಕಾಶನ, ವಿದ್ಯಾಗಣಪತಿ ಸೇವಾ ಸಂಘ(ರಿ), ಶಿವಮೊಗ್ಗ, ೨೦೦೭.

೨೨. ನಾಗರಹಳ್ಳಿ ಮೋಹನ, ಶ್ರೀ ಸಿದ್ದದಾವನಿ, ರವಿಕಿರಣ್ ಪ್ರಕಾಶನ, ದುರ್ಗಗುಡಿ, ಶಿವಮೊಗ್ಗ, ೨೦೦೧.

೨೩. ನಾಯಕ ಎಂ.ಕೆ, ವಾಲ್ಮೀಕಿವಾಣಿ ಪ್ರಕಾಶನ, ಕಾವೇರಿ ಪ್ರಿಂಟರ್ಸ್, ಚಿತ್ರದುರ್ಗ–೧೯೮೮.

೨೪. ನಾಯಕ ಎನ್.ಆರ್, ಶಿರಸಿಯ ಶ್ರೀ ಮಾರಿಕಾಂಬೆ ಮತ್ತು ಜಾತ್ರೆ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಕಾಶನ, ಬೆಂಗಳೂರು, ೧೯೯೬.

೨೫. ನಾಯಕ. ಹಾ.ಮಾ(ಸಂ), ಕನ್ನಡ ವಿಷಯ ವಿಶ್ವಕೋಶ, ಸಂಪುಟ ೧ ಮತ್ತು ೨, ಪ್ರಸಾರಾಂಗ ಮೈಸೂರು ವಿಶ್ವ ವಿದ್ಯಾಲಯ, ಮೈಸೂರು, ೧೯೯೪.

೨೬. ಪುಟ್ಟಯ್ಯ. ಬಿ.ಎಂ, ಸಂಶೋಧನೆಯ ತಾತ್ವಿಕ ಆಯಾಮಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೨೭. ಮರುಳಸಿದ್ಧಯ್ಯ ಎಚ್.ಎಂ, ಸಮುದಾಯ ಸಂಘಟನೆ, ಐಬಿಎಚ್ ಪಬ್ಲಿಕೇಷನ್, ಬೆಂಗಳೂರು, ೨೦೦೩.

೨೮. ಮೋಹನ್‌ಕೃಷ್ಣ ರೈ, ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೨೯. ಭೈರಪ್ಪ, ಸಮಗ್ರ ಸಮಾಜಶಾಸ್ತ್ರ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೮.

೩೦. ಮನರೂರು, ಶಿವಮೊಗ್ಗ ಜಿಲ್ಲಾ ಕಥಾ ಸಂಕಲನ ಪ್ರಕಾಶನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೨೦೦೪.

೩೧. ಪರಮೇಶ್ವರ ಕಟ್ಟಿಮನಿ, ವಾಲ್ಮೀಕಿ ಬಂಧು ಮಾಸ ಪತ್ರಿಕೆ, ಪ್ರಕಾಶನ, ಪಿ.ವಿ. ಕಟ್ಟಿಮನಿ, ಧಾರವಾಡ, ೨೦೦೦.

೩೨. ಪುಟ್ಟಪ್ಪ ಕೆ.ವಿ(ಸಂ), ಯುಗಯಾತ್ರಿ ಭಾರತೀಯ ಸಂಸ್ಕೃತಿ, ಸಂಪುಟ–೧, ೧೯೭೧.

೩೩. ಭಟ್ ಎಸ್.ಆರ್, ಪ್ರಾಚೀನ ಭಾರತದಲ್ಲಿ ಜನಜೀವನ, ನವ ಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೮೪.

೩೪. ಭದ್ರಾಪುರ ಎಸ್.ಎನ್, ದೇವರಗುಡ್ಡ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೫.

೩೫. ಭಾನುಮತಿ ವೈ.ಸಿ, ಜಾನಪದ ಭಿತ್ತಿ, ಸಂವಹನ ಪ್ರಕಾಶನ, ಮೈಸೂರು, ೧೯೯೯.

೩೬. ಭಟ್ ಜಿ.ಎಸ್, ಹಸಲರ ಸಂಸ್ಕೃತಿ, ಸಮತಾ ಪ್ರಕಾಶನ, ಬೆಂಗಳೂರು, ೧೯೯೩.

೩೭. ಬೋರಲಿಂಗಯ್ಯ ಹಿ.ಚಿ(ಸಂ), ಕರ್ನಾಟಕ ಜನಪದ ಕಲೆಗಳ ಕೋಶ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬.

೩೮. ಬೋರಲಿಂಗಯ್ಯ ಹಿ.ಚಿ, ಕಾಡು ಕಾಂಕ್ರೀಟ್ ಮತ್ತು ಜಾನಪದ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೯೫.

೩೯. ಬೋರಲಿಂಗಯ್ಯ ಹಿ.ಚಿ, ಗಿರಿಜನರಿಗೆ ಇನ್ನೂ ಕನಸಾಗಿರುವ ಅಭಿವೃದ್ಧಿ, ಪ್ರಜಾವಾಣಿ, ದೀಪಾವಳಿ ಸಂಚಿಕೆ, ೧೯೯೧,

೪೦. ಬೋರಲಿಂಗಯ್ಯ ಹಿ.ಚಿ, ಕಡುಗುಂಜಿ ಪರಿಸರ ಮನೋಹರ ಬದುಕು ವಿಕ್ಷಿಪ್ತ, ಸಾಪ್ತಾಹಿಕ ಮರವಣೆ, ಪ್ರಜಾವಾಣಿ–೧೯೯೯.

೪೧. ಮಂಜುನಾಥ ಬೇವಿನಕಟ್ಟಿ, ಜನಪದ ನಂಬಿಕೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬.

೪೨. ಮಾರೀಹಾಳ ವಿ.ಜೆ, ಕನಾಟಕ ಸಂಸ್ಕೃತಿಯ ವಿಶ್ವರೂಪ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩.

೪೩. ಮಂಜುನಾಥ ಬೇವಿನಕಟ್ಟೆ(ಸಂ), ಜಾನಪದ ಕರ್ನಾಟಕ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೧.

೪೪. ಮಲೆನಾಡಿನ ಹಸಲರು, ಪ್ರಜಾವಾಣಿ, ೧೦ ಡಿಸೆಂಬರ್, ೧೯೭೮.

೪೫. ಮೈತ್ರಿ ಕೆ.ಎಂ., ಚೆಲುವರಾಜು, ಬುಡಕಟ್ಟು ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೪೬. ರಹಮತ್ ತರೀಕೆರೆ, ಕನ್ನಡ ಸಂಶೋಧನೆಯ ತಾತ್ವಿಕತೆಯ ವಿಚಾರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

೪೭. ರಾಜೇಗೌಡ. ಎಚ್.ಕೆ(ಸಂ), ಗ್ರಾಮಚೇತನ, ಎಚ್.ಡಿ.ಚೌಡಯ್ಯ ಅಭಿನಂದನಾ ಸಮಿತಿ, ಮಂಡ್ಯ, ೨೦೦೩.

೪೮. ರಾಮಣ್ಣ ಶಿವಮೊಗ್ಗ, ಜಿಲ್ಲಾ ಗೊಂದಲಿಗರ ಕಥೆಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೮.

೪೯. ರಾಮಭಟ್ಟ, ಶಿವಮೊಗ್ಗ ಜಿಲ್ಲಾ ಇತಿಹಾಸ ಮತ್ತು ಸಂಸ್ಕೃತಿ, ಪ್ರಕಾಶನ, ರಾಷ್ಟ್ರೀಯ ಶಿಕ್ಷಣ ಸಂಸ್ಥೆ, ಶಿವಮೊಗ್ಗ, ೨೦೦೧.

೫೦. ರಾಮಭಟ್ಟ ಶಿವಮೊಗ್ಗ, ಜಿಲ್ಲಾ ಸಂಗೀತ ಪರಂಪರೆ, ಪ್ರಕಾಶನ, ಶ್ರೀರಾಮ ಸೇವಾ ಸಮಿತಿ, ದುರ್ಗಿಗುಡಿ, ಶಿವಮೊಗ್ಗ, ೨೦೦೧.

೫೧. ರಾಮಭಟ್ಟ ಶಿವಮೊಗ್ಗ, ನಗರದ ಇತಿಹಾಸಕಾರರು, ಪ್ರಕಾಶನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬.

೫೨. ರುದ್ರಪ್ಪ ಕರಿಶೆಟ್ಟಿ, ಮ್ಯಾಸ ನಾಯಕರು, ಒಂದು ಜನಾಂಗೀಯ ಅಧ್ಯಯನ, ಪ್ರಸಾರಾಂಗ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫.

೫೩. ಲಕ್ಕಪ್ಪಗೌಡ ಎಚ್.ಜೆ(ಸಂ), ಕರ್ನಾಟಕ ಬುಡಕಟ್ಟುಗಳ ಸಂಪುಟ-೦೧,೨, ಕನ್ನಡ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೪

೫೪. ವೀಣಾ.ಎಂ.ಪಿ, ಮನೆ ಸಮಾಜ ಸಂಸ್ಕೃತಿ (ಮ್ಯಾಸ ನಾಯಕ ಹಾಗೂ ಊರನಾಯಕ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫.

೫೫. ವೀರಣ್ಣದಂಡೆ ಡಾ., ದೇಸಿ, ಭಾಗ್ಯಶ್ರೀ ಎಂಟರ್ ಪ್ರೈಸಸ್, ನಂಬರ್ ೫೫೫, ೯ನೇ ಮುಖ್ಯರಸ್ತೆ, ವಿಜಯನಗರ ಬೆಂಗಳೂರು, ೨೦೦೩.

೫೬. ಶಾಸ್ತ್ರಿ, ಶ್ರೀ ಕೂಡಲಿ ಕ್ಷೇತ್ರದರ್ಶನ, ಶ್ರೀ ಕೃಪ ಪ್ರಕಾಶನ, ಶಿವಮೊಗ್ಗ, ೨೦೦೯.

೫೭. ಸಾಯಿಸುತೆ, ವಸುದೈವ ಕುಟುಂಬ, ರವೀಂದ್ರ ಪುಸ್ತಕಾಲಯ, ಶಿವಮೊಗ್ಗ, ೨೦೦೪.

೫೮. ಸಂಗಮೇಶ ಗುಗೊಂಡ, ಗ್ರಾಮೀಣ ಸಾಂಸ್ಕೃತಿಕ ಪರಂಪರೆ ಮತ್ತು ರಾಷ್ಟ್ರೀಯ ಭಾವೈಕ್ಯೆ, ಪ್ರಕಾಶನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೪.

೫೯. ಸುಬ್ಬಣ್ಣ ರೈ, ಗಾಳೆಮ್ಮ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮.

೬೦. ಸಾಂಖಿಕ ಅಧಿಕಾರಿಗಳು, ಶಿವಮೊಗ್ಗ ಜಿಲ್ಲೆಯ ಅಂಕಿ ಅಂಶಗಳ ನೋಟ, ೨೦೦೬-೦೭, ಪುಟ.೦೫-೦೬.

೬೧. ಸರೋಜ.ಕೆ, ಮಹಿಳಾ ಆರೋಗ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೬೨. ಸುರೇಶ್ ಕೆ.ಎಂ, ಕರ್ನಾಟಕ ದೇವಾಲಯ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೬೩. ಸೋಮಶೇಖರ, ಗಣಿಗಾರಿಕೆಯಿಂದ ಕೃಷಿ ಸಮುದಾಯ ಮೇಲಾಗುವ ಪರಿಣಾಮಗಳು (ಅಪ್ರಕಟಿತ ಎಂ.ಫಿಲ್. ಸಂಪ್ರಬಂಧ) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೬೪. ಹಂಪ ನಾಗರಾಜಯ್ಯ, ಹೊಂಬುಜ ಮತ್ತು ಸಾಂತರರು, ಶ್ರೀ ಸಿದ್ಧಾಂತ ಕೀರ್ತಿ ಗ್ರಂಥಮಾಲೆ ಪ್ರಕಾಶನ, ಹೊಂಬುಜ ಕ್ಷೇತ್ರ, ಹೊಸನಗರ ತಾ, ಶಿವಮೊಗ್ಗ ಜಿಲ್ಲೆ, ೨೦೧೩.

೬೫. ಹಂಪ ನಾಗರಾಜಯ್ಯ, ಹೊಂಬಜ ಕ್ಷೇತ್ರ ಅನುಸಂಧಾನ, ವಿಶ್ರಾಂತ ಪ್ರಕಾಶನ, ಬಸವನಗುಡಿ ಬೆಂಗಳೂರು, ೨೦೧೧.

೬೬. ಹರ್ತಿಕೋಟೆ ವೀರೇಂದ್ರ ಸಿಂಹ, ವಾಲ್ಮೀಕಿ ಕಿರಣ, ಪ್ರಕಾಶನ, ಶ್ರೀ ವಾಲ್ಮೀಕಿ ಮಹಾಸಂಸ್ಥಾನ, ರಾಜನಹಳ್ಳಿ, ೧೯೯೮.

೬೭. ಹನುಮಂತಪ್ಪ ಶಿವಮೊಗ್ಗ, ಜಿಲ್ಲಾ ಜನಪದ ಸಾಹಿತ್ಯ ಮತ್ತು ಇತರ ಆಯ್ಕೆಗಳು, ಕಮಲಾ ಪ್ರಕಾಶನ, ಶಿವಮೊಗ್ಗ, ೨೦೦೩.

೬೮. ಹರಿಯಣ್ಣ ಶಿವಮೊಗ್ಗ, ಜನಪದ ಕಥೆಗಳು, ಮೈಸೂರು ವಿಶ್ವ ವಿದ್ಯಾಲಯ, ಮೈಸೂರು, ೧೯೭೬.

೬೯. ಹನುಮಂತಪ್ಪ ತಾರಿಹಳ್ಳಿ, ಹೊಸಪೇಟೆ ನಾಯಕರ ಏಳು ಕೇರಿಗಳು ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಪಿಎಚ್.ಡಿ. ಗ್ರಂಥ ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೧.

೭೦. ಹನುಮಂತಪ್ಪ ತಾರಿಹಳ್ಳಿ, ನಾಯಕರ ಮಹಾಸಂಸ್ಥಾನ-ಸುರಪುರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

೭೧. ಹನುಮಂತಪ್ಪ ತಾರಿಹಳ್ಳಿ, ಕನಕಗಿರಿ ನಾಯಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

೭೨. ಹನುಮಂತಪ್ಪ ತಾರಿಹಳ್ಳಿ, ಕಮಲಾಪುರ ಬೇಡ ನಾಯಕರ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩.

೭೩. ಹನುಮಂತಪ್ಪ ತಾರಿಹಳ್ಳಿ, ಕರ್ನಾಟಕದ ಬುಡಕಟ್ಟು ಸಮುದಾಯಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೭೪. ಹನುಮಂತಪ್ಪ ತಾರಿಹಳ್ಳಿ, ಮಾನವ ಮತ್ತು ಸಾಂಸ್ಕೃತಿಕ ಪಲ್ಲಟಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

೭೫. ಹಿರೇಮಠ ಎಸ್.ಎಸ್, ಜಾತ್ರೆಗಳು, ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ ಭಾಗ-೨, ಸಮತಾ ಪ್ರಕಾಶನ, ಹೊಸಪೇಟೆ, ೧೯೯೩.

೭೬. ಹುಚ್ಚಪ್ಪಮಾಸ್ತರ್ ಎನ್, ಹಸಲರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪.

೭೭. ಹೆಂಡಿ. ಬಿ.ಬಿ, ಜಾನಪದ ಶಾಸ್ತ್ರ, ಅನುಭವ ಪ್ರಕಾಶನ, ಕಲುಬುರ್ಗಿ, ೧೯೯೯.

೭೮. ಹೊಸಮುರ ಬಂಗಾರಪ್ಪ, ಸಮಾನತೆಯ ಚಿಂತನೆಗಳು, ಚಿಂತನಾ ಪ್ರಕಾಶನ, ಹೊಳೆನರಸೀಪುರ, ೧೯೯೯.

೭೯. Anathakrishana Iyer L.K , Nanjundaiah H.V : The mysore tribes and castes (mysore : the mysore university,1930; rpt.1998,New Delhi ; Mittal publications), 5 Vols.

೮೦. Ethnological-Notes on Scheduled Tribes, 1961.

೮೧. Castes and Tribes of South India, E.Thurstion, 1909.

೮೨. Mysore Tribes and CastedsVol-IIIm, P 296-308, 1930

೮೩. Hindu Tribes and Castes, Sherring M.A. Vol.III, Culcutta, Pp,163, 1972.

೮೪. Tribes and Castes Bombay, Bol-II, Pp.67,68, Bol.I to III, 1922.

೮೫. Karnataka State Gazetteer, 2011.

೮೬. Karnataka State Gazetteer, Shivamoga, Vol.I.

೮೭. Karnataka State Gazetteer, Dakshina Kannada District.

೮೮. Karnatak State Gazetteer, Chikkamangalur.

೮೯. Kartaka State Gazetteer, Uttarakannada.

೯೦. Encyclopacedia of Folk Culture of Karnataka, Krishnamurthy Hanur, 1991.

# ೧. ಅನುಬಂಧ

## ೧. ಹಸಲರಲ್ಲಿರುವ ಪೌರಾಣಿಕ ಕಥೆ

ಅಗಸನ ಅಪವಾದಕ್ಕೊಳಗಾದ ಸೀತೆಯನ್ನು ಕಾಡಿನಲ್ಲಿ ಬಿಟ್ಟು ಬರುವಂತೆ ರಾಮ ತಮ್ಮನಾದ ಲಕ್ಷ್ಮಣನಿಗೆ ಹೇಳುತ್ತಾರೆ. ಲಕ್ಷ್ಮಣ ತುಂಬು ಗರ್ಭಿಣಿಯಾದ ಸೀತೆಯನ್ನು ಕಾಡಿನಲ್ಲಿ ಬಿಟ್ಟು ಹೋಗುತ್ತಾರೆ. ಸೀತೆ ವಾಲ್ಮೀಕಿ ಆಶ್ರಮವನ್ನು ಸೇರಿ ಆಶ್ರಯ ಪಡೆಯುತ್ತಾಳೆ. ಸ್ವಲ್ಪ ದಿನಗಳ ನಂತರ ಲವ ಜನಿಸುತ್ತಾನೆ. ಒಮ್ಮೆ ಮಗುವನ್ನು ತೊಟ್ಟಿಲಲ್ಲಿ ಹಾಕಿ ಬಟ್ಟೆ ಮಡಿ  ಮಾಡಲು ನದಿಗೆ ಹೋಗುತ್ತಾಳೆ. ನದಿಯಲ್ಲಿ ಮಂಗಗಳು ನೀರು ಕುಡಿಯುವುದನ್ನು ನೋಡಿ ಮಗುವಿಗೆ ಏನಾಯಿತೋ ಏನೋ ಎಂದು ಅನುಮಾನಿಸಿ ತಿರುಗಿ ಆಶ್ರಮಕ್ಕೆ ಬಂದು ಲವನನ್ನು ಎತ್ತಿಕೊಂಡು ಪುನಃ ಬಟ್ಟೆ ಮಡಿ ಮಾಡಲು ಹೋಗುತ್ತಾಳೆ. ಇತ್ತ ವಾಲ್ಮೀಕಿ ಸ್ವಲ್ಪ ಹೊತ್ತಿನ ನಂತರ ಬಂದು ನೋಡಿದಾಗ ಲವ ಇಲ್ಲದಿರುವದನ್ನು ನೋಡಿ ಕಂಗಾಲಾಗುತ್ತಾನೆ. ಸೀತೆ ಬಂದ ಮೇಲೆ ಹೇಗೆ ಮುಖ ತೋರಿಸುವುದು ಎಂದು ದರ್ಭೆಯನ್ನು ಮಂತ್ರಿಸಿ ಶಿಶು ಮಾಡಿ ತೊಟ್ಟಿಲಲ್ಲಿ ಮಲಗಿಸುತ್ತಾನೆ. ಸ್ವಲ್ಪ ಹೊತ್ತಿನಲ್ಲಿ ಸೀತೆ ಮಗುವಿನೊಂದಿಗೆ ನದಿಯಿಂದ ವಾಪಸಾಗುತ್ತಾಳೆ. ತೊಟ್ಟಿಲಲ್ಲಿರುವ ಮಗುವನ್ನು ನೋಡಿ ಆಶ್ಚರ್ಯಪಡುತ್ತಾಳೆ. ಆಗ ವಾಲ್ಮೀಕಿ 'ಇದೆಲ್ಲಾ ನನ್ನಿಂದಲೇ ಆದದ್ದು, ಈ ಮಗುವನ್ನು ನೀನೇ ಸಾಕು'ಎನ್ನುತ್ತಾನೆ. ಈ ಮಗುವಿಗೆ ಕುಶ ಎಂದು ನಾಮಕರಣ ಮಾಡುತ್ತಾನೆ. ರಾಮ ಹಾಗೂ ಲವ–ಕುಶರಿಗೆ ಯುದ್ಧ ನಡೆದಾಗ ಕಾಡಿನಲ್ಲಿ ತಯಾರಿಸಿದ ತಮ್ಮದೇ ಬಿಲ್ಲು ಬಾಣಗಳಿಂದ ಕುಶ–ಲವರು ಹೋರಾಡುತ್ತಾರೆ. ಹಸಲರು ತಾವು ಕುಶನ ಸಂತತಿಯವರು ಎಂದು ಭಾವಿಸುತ್ತಾರೆ. ಹಸ್ತದಿಂದ ಜನಿಸಿದ್ದರಿಂದ ತಾವು ಹಸ್ಲರು ಎಂದುಕೊಳ್ಳುತ್ತಾರೆ. ಬಿಲ್ಲು ಬಾಣ ಗುರಿಯಲ್ಲಿ ನುರಿತವರಾದ್ದರಿಂದ ತಾವು ಬಿಲ್‌ಕ್ಷತ್ರಿಯರಾದೆವೆಂದೂ ಹೇಳುತ್ತಾರೆ. ರಾಮರಾಜ್ಯದಲ್ಲಿ ಸಮಸ್ತ ಅಧಿಕಾರವೂ ತಮ್ಮ ಕೈಯಲ್ಲಿತ್ತು. ಅನಂತರ ಎಲ್ಲಾ ಕಿತ್ತುಕೊಂಡರು ಎನ್ನುತ್ತಾರೆ.

೨. ಹಸಲರು ಮತ್ತು ಮೇದಾರರ ಸಂಬಂಧದ ಕಥೆ

ಒಬ್ಬ ಹಸಲ ಒಂದು ಬಿದಿರು ತುಂಡಿನಿಂದ ಒಂದು ವಸ್ತು ಮಾಡಿದ. ಆದರೆ ಒಬ್ಬ ಮೇದಾರ ಅದೇ ಬಿದಿರು ತುಂಡಿನಿಂದ ಎರಡು ವಸ್ತುಗಳನ್ನು ಮಾಡಿದ. ನಂತರ ಇಬ್ಬರಿಗೂ ಜಗಳವಾಗಿ ಮೇದಾರರವನು ಚಾಕು ಹಿಡಿದುಕೊಂಡು ಓಡಿಹೋದ. ಹಸಲರವನು ಆತನನ್ನು ಬೆನ್ನಟ್ಟಿಕೊಂಡು ಹೋದ. ನಂತರ ಚಾಕುವಿನ ಹಿಡಿ ಹಸಲರ ಕೈಯಲ್ಲಿ, ಹಿಡಿಯಲ್ಲದ ಚಾಕು ಮೇದಾರನ ಕೈಯಲ್ಲಿ ಉಳಿಯಿತು. ಮೇದಾರರು ಇಂದಿಗೂ ತಮ್ಮ ಕೆಲಸದಲ್ಲಿ ಹಿಡಿಯಿರುವ ಚಾಕುವನ್ನು ಬಳಸುವುದಿಲ್ಲ. ಮೇದಾರರು ಬಿದಿರನ್ನು ತಲೆಯ ಮೇಲೆ ಹೊರುವುದಿಲ್ಲ. ಹೆಗಲ ಮೇಲೆ ಹೊರುತ್ತಾರೆ; ಹಸಲರು ಬಿದರನ್ನು ಹೆಗಲ ಮೇಲೆ ಹೊರುವುದಿಲ್ಲ. ತಲೆಯ ಮೇಲೆ ಹೊರುತ್ತಾರೆ. ಸಾಗರ, ಸೊರಬ, ಹೊಸನಗರ, ಶಿರಸಿ, ಸಿದ್ದಾಪುರಗಳಲ್ಲಿ ಪ್ರಚಲಿತವಿರುವ ದಂತಕಥೆಯ ಪ್ರಕಾರ ಅಗ್ನಿ ಹೊನ್ನಯ್ಯ ಹಸಲರ ಸಾಂಸ್ಕೃತಿಕ ನಾಯಕ, ಇವನು ಯಶಸ್ವಿಯಾಗಿ ವಿಷ್ಣುವಿನ ವಾಹನವಾದ ಗರುಡನ ಪ್ರತಿಮೆಯಿರುವ ಗರುಡಗಂಭವನ್ನು ನೆಡುತ್ತಾನೆ. ಅದು ಶಿಕಾರಿಪುರ ತಾಲ್ಲೂಕಿನ ಬಳ್ಳಿಗಾವಿಯಲ್ಲಿದೆ ಎಂದು ಹೇಳುವರು, ಬಹಳಷ್ಟು ಉಪಟಳಗಳ ನಡುವೆಯೂ ಹೊನ್ನಯ್ಯ ಗರುಡಗಂಭ ನೆಡುವಲ್ಲಿ ಯಶಸ್ವಿ ಯಾಗುತ್ತಾನೆ. ಈ ಸಾಹಸಮಯ ಕಾರ್ಯಕ್ಕೆ ಸಂಪ್ರೀತರಾದ ಜನ ಅವನಿಗೆ ಬಂಗಾರವನ್ನು ನೀಡಲು ಬರುತ್ತಾರೆ. "ಹೊನ್ನ ಹಿಡಿ ಹೊನ್ನಯ್ಯ"ಎನ್ನುತ್ತಾ ಅವನ ಬಳಿ ಬರುತ್ತಾರೆ. ಆದರೆ ಹೊನ್ನಯ್ಯ ಬಹುಶಃ ಈ ಜನರು ತನ್ನನ್ನು ಹಿಡಿಯಲಿಕ್ಕಾಗಿ ಮಾಡಿದ ಅಪಾಯದ ಸಂಚು ಎಂದು ಅನುಮಾನಿಸಿ ಕಾಡಿನಲ್ಲಿ ತಪ್ಪಿಸಿಕೊಂಡು ಬಿಡುತ್ತಾನೆ. ಬಹುಶಃ ಹೊನ್ನಯ್ಯ ಮುಂದೆ ಶರಣನಾಗಲು ಕಾರಣವಾದ ಬಗ್ಗೆ ಪ್ರಚಲಿವಿರುವ ದಂತಕಥೆಯಂತೆ ತೋರುತ್ತದೆ. ಐತಿಹಾಸಿಕವಾಗಿ ಹಸಲರು ತೋರಿದ ಸಾಂಪ್ರದಾಯಿಕ ಯುದ್ಧಕೌಶಲ್ಯಗಳಿಲ್ಲ. ಆದರೆ ಮೂಡಿಗೆರೆ ಹಾಗೂ ತೀರ್ಥಹಳ್ಳಿಯಲ್ಲಿನ ತುಳು ಹಸಲರಲ್ಲಿ ಒಂದು ದಂತಕಥೆಯಿದೆ. ಅವರಲ್ಲಿ ಬಾಲಮುದ್ದ ಹಾಗೂ ಬಾಲಕಲಾಲ ಎಂಬ ಅಣ್ಣತಮ್ಮಂದಿರು ಇದ್ದರು. ಒಂದಾನೊಂದು ಕಾಲದಲ್ಲಿ ತುಳುನಾಡನ್ನು ಬಾಳೆ ಅರಸ ಹಾಗೂ ಭೈರ ಅರಸ ಎಂಬ ರಾಜರು ಆಳುತ್ತಿದ್ದರು. ಒಮ್ಮೆ ವೈರಿಗಳು ರಾಜ್ಯಕ್ಕೆ ದಾಳಿಯಿಟ್ಟರು. ರಾಜನಿಗೆ ಸೋಲು ನಿಶ್ಚಿತವೆನಿಸಿತು. ಆ ಸಮಯದಲ್ಲಿ ಹಸಲರ ಮುದ್ದ, ಕಲಾಲ ಸಹೋದರರು ತಾವು ವೈರಿಪಡೆಯನ್ನು ಎದುರಿಸುವುದಾಗಿಯೂ, ತಮಗೆ ಬಿಲ್ಲು, ಬಾಣ ಸರಬರಾಜು ಮಾಡುವಂತೆಯೂ ಕೇಳಿಕೊಂಡರು. ನಂತರ ರಾಜ ಇಬ್ಬರನ್ನೂ ತನ್ನ ಸೈನಿಕ ಪಡೆಯೊಡನೆ ಯುದ್ಧಭೂಮಿಗೆ ಕಳುಹಿಸುತ್ತಾನೆ. ವೀರಾವೇಶದಿಂದ ಮುದ್ದ ಮತ್ತು ಕಲಾಲ ವೈರಿಸೇನೆಯೊಡನೆ ಹೋರಾಡಿ ಶತ್ರುಪಡೆಯನ್ನು ಹಿಮ್ಮೆಟ್ಟಿಸಿ ವಿಜಯೋತ್ಸವದಿಂದ ಮರಳುತ್ತಾರೆ. ಮರಳಿ ಬರುವಾಗ ದಾರಿಯಲ್ಲಿ ಒಂದು ದೇವಸ್ಥಾನದಲ್ಲಿ ಮಲಗಿರುತ್ತಾರೆ. ಮಾರನೇ ದಿನ ಬೆಳಗ್ಗೆ ಮಾಯವೋ ಎಂಬಂತೆ ಕಲಾಲನ ತಲೆ ಮುಂಡದಿಂದ ಬೇರೆಯಾಗಿರುತ್ತದೆ. ರಾಜನಿಗೆ ವಿಷಯ ತಿಳಿದು. ಕಲಾಲನ ತಲೆಯನ್ನು ದೇವಸ್ಥಾನದ ಎದುರಿಗೆ ರತ್ನಕವಚದಿಂದ ಮುಚ್ಚಿ ರಣಗಂಭದ

ಮೇಲಿಡುತ್ತಾನೆ. ಗತಿಸಿದ ನಾಯಕನ ಆತ್ಮಶಾಂತಿಗೆ ಬಲಿಯನ್ನು ಕೊಡಿಸಿದ. ಸ್ವಲ್ಪ ಕಾಲದ ನಂತರ ಮುದ್ದನು ಕಂಬಲ ನೋಡುತ್ತಿದ್ದಾಗ ಕೋಣ ತಿವಿದು ಹತನಾಗುತ್ತಾನೆ. ಹೀಗೆ ಇಬ್ಬರೂ ಸಹೋದರರು ಅಸ್ವಾಭಾವಿಕ, ಅಕಾಲ ಮರಣ ಹೊಂದುತ್ತಾರೆ. ಇವರನ್ನು ವಿಶಿಷ್ಟ ಮಾದರಿಯ ಭೂತಗಳನ್ನಾಗಿ ಅಲೌಕಿಕಗೊಳಿಸಿದ್ದಾರೆ. ಈ ಭೂತಗಳನ್ನು ತೃಪ್ತಿಪಡಿಸಲು ಕೆಲಸ ನಲಿಕೆಯವರದಾಯಿತು. ಈ ಶೂರರ ಧೈರ್ಯ ಸಾಹಸಗಳನ್ನು ಕಥೆ ಹೇಳುವ ಮೂಲಕ, ಕೊಂಡಾಡುವ ಕೆಲಸವನ್ನು ಮುಂದುವರಿಸಿಕೊಂಡು ಬರುತ್ತಿದ್ದಾರೆ.

**೩. ಹಸಲರಲ್ಲಿರುವ ಚೌಕ ಬರೆಯುವ ಹಾಡು**

ಕರುವಿನ ಸಗಣಿಯ ಕಿರು ಬೆರಳಲ್ಲಿ ತಕ್ಕಂದು
ಮಾಳಿಗಿಒಳಗ ದೌಳಿಸಿ ಈ ಮನೆಯ
ನಾರಿ ತುಂಬಿದಳು ಚೌಕವ
ಬ್ಯಾಳಿ ಗುಡಿಗೆ ಸೇರಿ ನಿಂತ ವಳ್ಯಾರ
ಚಿತ್ತಾರ ವರೆಯ ಹಿರಿಯಕ್ಕ ಮುತ್ತೈದೆ
ಬ್ಯಾಳಿಯ ತಾರೆ ಚೌಕಕ್ಕೆ
ನಾರಿ ತಾನೆಂದು ಚೌಕ ಚೆಂದವಿಲ್ಲವೆಂದು
ನಿತ್ತಿದ್ದ ಜಾಣೆ ಜರಿದಾಳೆ
ನಿತ್ತಿದ್ದ ಜಾಣೆ ತಾ ಬರೆದಾಳ
ಅಜ್ಜಮಪುರದ ನವಿಲಿಂದು ಕೂಗಿಗೆ
ಆಡುಂಡು ಅಕ್ಷರವ ಬರೆದಾಳ

**೪. ಹಸಲರು ಅರಿಶಿಣ ಹಚ್ಚುವ ಹಾಡು**

ಈ ಊರ ಅರಿಶೀಣ ಚಂದಾವಿಲ್ಲವೆಂದು
ಗೋವಿಗೊಂದೋಲೆ ಬರೆದಾರ। ಅವರಣ್ಣ
ಪವಾಡ ಕೊಟ್ಟು ತರಿಸ್ಯಾರ। ಅರಿಶೀಣ
ನಾರೇರು ಗೊಂಡಚ್ಚಿ ಅರೆದಾರ। ಅರೆಶೀಣ
ಬಾಲೇಯ ತೋಳ ತೊಡೆಗೆಣ್ಣೆ
ಕಂಚೀನ ಗಿಣಲಾಗೆ ಮಿಂಚೆಣ್ಣೆ ಹಾಕ್ಯಂದು
ಕೆಂಚೇರು ಹಚ್ಯಾರ ಅರಿಶಿಣವ

**೫. ಹಸಲರು ಧಾರೆ ಎರೆಯುವ ಹಾಡು**

ಹಂದಾರದಡಿಗೆ ಬಂದ ನೀಲಗುದುರೆ
ಹಂದಾರ ತಾಗಿ ತಳವಾಗಿ। ಬಾಸಿಂಗದ
ಬಿಂಗ ಉದರ್ಯಾವ ಬಲುಜ್ವಾಕಿ
ಚಪ್ಪಾರದಡಿಗೆ ಹೊಕ್ಕು ಬೀಸುವ ಗಾಳಿ

ಮತ್ತೊಂದು ಜಾವ ನಿಲುಗಾಳಿ। ನಮ್ಮಯ್ಯನ
ಕಂದಯ್ಯನ ಧಾರಿ ಎರೆದಾನ
ಆರೇಳು ವರ್ಷ ಹಾಲುಂಡ ಸಿಹಿಗಲ್ಲ
ನಾರಿತಂಗ್ಯವ್ವ ಇವಮೆಚ್ಚ। ಮೆಚ್ಚದಿದ್ರೆ
ಕಂದಾನ ಬಾಸಿಂಗಕೆ ಎದುರಾಗೆ
ಧಾರೇಯನೆರೆದಾರೆ ಮಾರೀಯ ನೋಡ್ಯಾರೆ
ದ್ವಾರೇನ ಹಾಕ್ಯಾರ ಕೊರಳೀಗೆ। ಬಂಗಾರದ
ಗೋಲನಿಟ್ಟಾರೆ ಅಳಿಯಾಗೆ
ಬಾಳಿಯ ಹಣ್ಣ ಗೆದ್ದ ಬಾಳೀಯ ಕಾಯ್ ಗೆದ್ದ
ಬಾಳೀಯ ಎಳೆಗ್ವಾನಿ ಗೆದ್ದ। ಕಂದಯ್ಯ
ಬಾಲೆಗೆದ್ದೊಳಗೆ ನಡೆದಾನ

೬. **ಬೇಡ ಬುಡಕಟ್ಟಿನ ಮನೆತುಂಬುವ ಹಾಡು**

ಉತ್ತಮರ ಮಗಳೆ ಮುತ್ತ ಸೋಗಿಲಿ ಬಾರೆ
ಬಿತ್ತುತ್ತ ಬಾರೆ ಬಯಲಾಗೆ। ನಮ್ಮನಿಯ
ಉತ್ತಮರ ಭೂಮಿ ಬೆಳೆಯಾಕೆ
ಬಾಲೇರೇಳಾಗ ಬಾಳೆಲ್ಲ ಕಿರುಸಸಿ
ಬಾಲೆ ಬಂದು ಊರ ಹೊಗುವಾಗ। ನಮ್ಮ ಹಿತ್ಲ
ಬಾಳೆಲ್ಲ ಕಾತ ಫಲಬಂದು
ರಂಬೇರೇಳಾಗ ನಿಂಬೆಲ್ಲ ಕಿರುಸಸಿ
ರಂಬೆ ಬಂದು ಊರು ಹೊಗುವಾಗ। ನಮ್ಮ ಹಿತ್ಲ
ನಿಂಬೆಲ್ಲ ಕಾತ ಫಲಬಂದು

೭. **ಬೇಡ ಬುಡಕಟ್ಟಿನ ಗಂಗೆ ಪೂಜೆಯ ಹಾಡು**

ತಾಯಿ ಗಂಗಮ್ಮಗೆ ಗೋಧಿಯ ಉಡಿಯಕ್ಕಿ
ತೋಧ ಮಲ್ಲಿಗೆ ನೆನದಂಡೆ ಸುವ್ವಯೋ
ತೋಧ ಮಲ್ಲಿಗೆ ನೆನದಂಡೆ ಕಳಿವ್ಯಾರೆ
ಚಿಕ್ಕಾಗೊಂದಿ ದೋರೆಗಳೆ ಸುವ್ವಯೋ।

ಅಕ್ಕ ಗಂಗಮ್ಮಗೆ ಅಕ್ಕಿಯ ಉಡಿಯಕ್ಕಿ
ನಿಚ್ಚಾನೆ ಮಲ್ಲಿಗೆ ಸುವ್ವಾಯೋ
ತಾಯಿ ಗಂಗಮ್ಮಗೆ ಗೋಧಿಯ ಉಡಿಯಕ್ಕಿ
ಮನೆಯ ಮಲ್ಲಿಗೆ ನೆನದಂಡೆ ಸುವ್ವಯೋ

ಅಕ್ಕ ಗಂಗಮ್ಮಗೆ ಅಕ್ಕಿಯ ಉಡಿಯಕ್ಕಿ
ಮುತ್ತಿನ ಉಡಿಯಕ್ಕಿ ನೆನದಂಡೆ ಸುವ್ವಯೋ
ಮುತ್ತಿನ ಹುಟ್ಟ ಹೆಗಲ ಮೇಲೆ ಸುವ್ವಯೋ
ನಾಡಿನ ಮಠದರೋ ಸುವ್ವಯೋ

ತಾಯಿ ಗಂಗಮ್ಮಗೆ ಗೋಧಿಯ ಉಡಿಯಕ್ಕಿ
ಅಕ್ಕ ಗಂಗಮ್ಮಗೆ ತೆರವಡೆದು ಸುವ್ವಯೋ
ಕಪ್ಪೆ ದಂಡೆ ಬಂದು ಚಪ್ಪರಕ್ಕೆ ನಿಂತಾವೆ
ಅಕ್ಕ ಗಂಗಮ್ಮ ಕರೆದಾಳೋ ಸುವ್ವಯೋ

೮. **ಬೇಡ ಬುಡಕಟ್ಟಿನ ತೊಟ್ಟಿಲ ಹಾಡು**

ಜೋ ಜೋ ಗೋಪಿ ಜೋ ಜೋ
ಜೋ ಜೋ ಗೋಪಿ ಜೋ ಜೋ

ಅಡೆದಾಳ ಬಾನತಿ ಅಡೆದಾಳ
ಕುಡಿದಾಳ ಕುಡಿದು ಕುಡಿತುಪ್ಪ
ಹಿಡಿದಾಳ ಬಾಳ ಬೆಳಗುವ ಬೇವು
ಕುಡುಗೋಲ ಕೈ ಒಳಗೆ ಅರಸಿ ಬಾರತಿ
ಸುತ್ತ ದೇವರಿಗೆ ಎತ್ತಿ ಕೈ ಮುಗಿದು

ಜೋ ಜೋ ಗೋಪಿ ಜೋ ಜೋ
ಜೋ ಜೋ ಗೋಪಿ ಜೋ ಜೋ

ಹತ್ತಿಯ ಮರವ ಹೇರಿ ಕೆತ್ತನ
ಕೆತ್ತುತ್ತಲಿ ಮುಯ್ಯನ ಬಡಗಿ
ಬಿಗಿಯನ್ನ ಬಡಗಿ ಮ್ಯಾಗಳ ಕೊಂಡಿ
ಮ್ಯಾಗಳ ಕೊಂಡಿ ಮಾನಿಕ್ಯ ಧರಳೆ
ಮ್ಯಾಗಳ ಕೊಂಡಿ ಮಾಣಿಕ್ಯದಂತಿರಲಿ

ಜೋ ಜೋ ಗೋಪಿ ಜೋ ಜೋ
ಜೋ ಜೋ ಗೋಪಿ ಜೋ ಜೋ

ಬಡಿಗೇರ ಮನೆಮುಂದೆ ಸಡಗರವಾಲಿ ಕಂಬ
ಬಡಿಗೇರ ಬಸಪ್ಪ ಉಯ್ಯಾಲೆಂದು
ಕಂಚಗಾರ ಮನೆಮುಂದೆ ಬಂದು ನಿಂತು
ಕಂಚಿನವಾಲಿ ಕಂಬ ಕಂಡಂತೆ ಕನಸು

ಜೋ ಜೋ ಗೋಪಿ ಜೋ ಜೋ
ಜೋ ಜೋ ಗೋಪಿ ಜೋ ಜೋ

ಕಂಚಿಗಾರ ಮನೆಮುಂದೆ ಗೋಣಿಬಸಪ್ಪ ನಿಂತು
ಅವರೆಡು ಕಂಚಿನವಾಲೆ ಕಂಬ
ಸಿರಿ ಓದುವ ಹಲಗೆ ಅಂದದಿ ಕಂಡು
ಉಯ್ಯಾಲೇ ಎದ್ದು ಹೋದಾವು ಸಡಗರ ಮಾಡಿ

ಜೋ ಜೋ ಗೋಪಿ ಜೋ ಜೋ
ಜೋ ಜೋ ಗೋಪಿ ಜೋ ಜೋ

ಮಾನವಶಾಸ್ತ್ರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ, ಕಮಲಾಪುರ, ಬಳ್ಳಾರಿ

## ಸಂದರ್ಶನ ಅನುಸೂಚಿ

ಕನ್ನಡ ವಿಶ್ವವಿದ್ಯಾಲಯ ಮಾನವಶಾಸ್ತ್ರ ಅಧ್ಯಯನ ವಿಭಾಗದ ಸಂಶೋಧನಾರ್ಥಿಯಾದ **ಅನುಷಾ ಎಸ್.ಈ.** ಆದ ನಾನು **"ಶಿವಮೊಗ್ಗ ಜಿಲ್ಲೆಯ ಆದಿವಾಸಿ ಆಚರಣೆಗಳು: ಸಾಮಾಜಿಕ ಅಧ್ಯಯನ"** ಎಂಬ ಸಂಶೋಧನಾ ಅಧ್ಯಯನವನ್ನು **ಡಾ. ತಾರಿಹಳ್ಳಿ ಹನುಮಂತಪ್ಪ** ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ ಮಾನವಶಾಸ್ತ್ರ ಅಧ್ಯಯನ ವಿಭಾಗ ಇವರ ಮಾರ್ಗದರ್ಶನದಲ್ಲಿ ಕೈಗೊಂಡಿದ್ದು, ಈ ಸಂಶೋಧನಾ ಅಧ್ಯಯನಕ್ಕೆ ದಯವಿಟ್ಟು ನೀವುಗಳು ನನ್ನ ಪ್ರಶ್ನೆಗಳಿಗೆ ಮುಕ್ತವಾಗಿ, ನಿರ್ಭೀತಿ ಹಾಗೂ ತೆರೆದ ಮನಸ್ಸಿನಿಂದ ಉತ್ತರಿಸಬೇಕೆಂದು ಕೇಳಿಕೊಳ್ಳುತ್ತೆನೆ. ನೀವು ನೀಡಿದ ಮಾಹಿತಿಯನ್ನು ನನ್ನ ಸಂಶೋಧನಾ ಅಧ್ಯಯನಕ್ಕಾಗಿ ಮಾತ್ರ ಬಳಸಿಕೊಳ್ಳಲಾಗುವುದು ಹಾಗೂ ಗೌಪ್ಯವಾಗಿ ಇಡಲಾಗುತ್ತದೆ. ಆದ್ದರಿಂದತಾವು ಸ್ಪಷ್ಟ, ಸತ್ಯ ಹಾಗೂ ನೇರ ಉತ್ತರಗಳನ್ನು ನೀಡಬೇಕಾಗಿ ಕೇಳಿಕೊಳ್ಳುತ್ತೇನೆ.

## ೨. ವಕ್ತೃಗಳ ವಿವರ

**ಮಾಹಿತಿದಾರರು**

| ಕ್ರ.ಸಂ. | ಹೆಸರು | ವಯಸ್ಸು | ಲಿಂಗ | ಕಸುಬು | ಜಾತಿ | ವಿಳಾಸ |
|---|---|---|---|---|---|---|
| ೧. | ಹನುಮಂತಪ್ಪ | ೪೫ | ಗಂಡು | ಕೃಷಿ | ಬೇಡ | ಹುಚ್ಚಿಂಗೆಲ್ಲಮ್ಮನ ಬೀದಿ, ವಿದ್ಯಾನಗರ, ಶಿವಮೊಗ್ಗ |
| ೨. | ಚಾಮುಂಡೇಶ್ವರಿ | ೪೮ | ಹೆಣ್ಣು | ಕೃಷಿ/ಕೂಲಿ | ಬೇಡ | ದುರ್ಗಮ್ಮನ ಕೇರಿ, ಶಿವಮೊಗ್ಗ |
| ೩. | ಸೀತಮ್ಮ | ೪೯ | ಹೆಣ್ಣು | ಮನೆಕೆಲಸ | ಬೇಡ | ೧೩ನೇ ವಾರ್ಡ್, ವಿದ್ಯಾನಗರ, ಶಿವಮೊಗ್ಗ |
| ೪. | ರಾಮಣ್ಣ | ೩೮ | ಗಂಡು | ಕೂಲಿ | ಬೇಡ | ಶೇಷಾದ್ರಿಪುರ ಹತ್ತಿರ, ಶಿವಮೊಗ್ಗ |
| ೫. | ಈಶ್ವರಪ್ಪ ಆರ್. | ೬೮ | ಗಂಡು | ಪೂಜಾರಿ | ಬೇಡ | ಕೆ.ಎಚ್.ಬಿ ಕಾಲೋನಿ, ಕಲ್ಲಹಳ್ಳಿ, ೨ನೇ ಹಂತ, ಶಿವಮೊಗ್ಗ |
| ೬. | ರಾಘವೇಂದ್ರ | ೩೧ | ಗಂಡು | ಕೂಲಿ | ಬೇಡ | ವಿನೋಬ ನಗರ ೩೪ನೇ ವಾರ್ಡ್, ಶಿವಮೊಗ್ಗ |
| ೭. | ಅಂಜನಾ | ೬೪ | ಹೆಣ್ಣು | ಮನೆಕೆಲಸ | ಬೇಡ | ಕೆ.ಎಚ್.ಬಿ ಕಾಲೋನಿ, ಕಲ್ಲಹಳ್ಳಿ ೨ನೇ ಹಂತ, ಶಿವಮೊಗ್ಗ |
| ೮. | ಸತ್ಯಮ್ಮ | ೬೧ | ಹೆಣ್ಣು | ಕೂಲಿ | ಬೇಡ | ಮತ್ತೋಡು ಗ್ರಾಮ, ಶಿವಮೊಗ್ಗ |

| | | | | | |
|---|---|---|---|---|---|
| ೯. | ಸುಭದ್ರಮ್ಮ | ೬೮ | ಹೆಣ್ಣು | ಕೃಷಿಕೂಲಿ | ಬೇಡ | ಮತ್ತೋಡು ಗ್ರಾಮ, ಶಿವಮೊಗ್ಗ |
| ೧೦. | ಚೌಡಮ್ಮ | ೭೧ | ಹೆಣ್ಣು | ಕೃಷಿಕೂಲಿ | ಬೇಡ | ಮತ್ತೋಡು ಗ್ರಾಮ, ಶಿವಮೊಗ್ಗ |
| ೧೧. | ಲಕ್ಷ್ಮಣ | ೬೬ | ಗಂಡು | ಕೃಷಿ/ಕೂಲಿ | ಬೇಡ | ಮತ್ತೋಡು ಗ್ರಾಮ, ಶಿವಮೊಗ್ಗ |
| ೧೨. | ಆನಂದಪ್ಪ | ೪೭ | ಗಂಡು | ಕೃಷಿಕೂಲಿ | ಬೇಡ | ಮತ್ತೋಡು ಗ್ರಾಮ, ಶಿವಮೊಗ್ಗ |
| ೧೩. | ಬಸವಪ್ಪ | ೪೧ | ಗಂಡು | ಕೃಷಿ/ಕೂಲಿ | ಬೇಡ | ಮತ್ತೋಡು ಗ್ರಾಮ, ಶಿವಮೊಗ್ಗ |
| ೧೪. | ಸತ್ಯಮ್ಮ | ೪೮ | ಹೆಣ್ಣು | ಕೃಷಿ/ಕೂಲಿ | ಬೇಡ | ಬಸವನ ಗಂಗೋರು, ಭದ್ರಾವತಿ, ಶಿವಮೊಗ್ಗ |
| ೧೫. | ಚೆಲುವಯ್ಯ | ೬೧ | ಗಂಡು | ಕೃಷಿ/ಕೂಲಿ | ಬೇಡ | ಬಸವನ ಗಂಗೋರು, ಭದ್ರಾವತಿ, ಶಿವಮೊಗ್ಗ |
| ೧೬. | ಮಾರುತೆಪ್ಪ | ೫೭ | ಗಂಡು | ಕೃಷಿ/ಕೂಲಿ | ಬೇಡ | ಬಸವನ ಗಂಗೋರು, ಭದ್ರಾವತಿ, ಶಿವಮೊಗ್ಗ |
| ೧೭. | ಸೀತರಾಮಪ್ಪ | ೫೧ | ಗಂಡು | ಕೃಷಿ/ಕೂಲಿ | ಬೇಡ | ಬಸವನ ಗಂಗೋರು, ಭದ್ರಾವತಿ, ಶಿವಮೊಗ್ಗ |
| ೧೮. | ಚಂದ್ರಶೇಖರ | ೪೯ | ಗಂಡು | ಕೃಷಿ/ಕೂಲಿ | ಬೇಡ | ಬಸವನ ಗಂಗೋರು, ಭದ್ರಾವತಿ, ಶಿವಮೊಗ್ಗ |
| ೧೯. | ರೇಣುಕಮ್ಮ | ೫೪ | ಹೆಣ್ಣು | ಕೃಷಿ/ಕೂಲಿ | ಬೇಡ | ಬಸವನ ಗಂಗೋರು, ಭದ್ರಾವತಿ, ಶಿವಮೊಗ್ಗ |
| ೨೦. | ಹುಲಿಯಮ್ಮ | ೫೧ | ಹೆಣ್ಣು | ಕೃಷಿ/ಕೂಲಿ | ಬೇಡ | ಬಸವನ ಗಂಗೋರು, ಭದ್ರಾವತಿ, ಶಿವಮೊಗ್ಗ |
| ೨೧. | ಈಶ್ವರಪ್ಪ | ೪೮ | ಗಂಡು | ಕೃಷಿ/ಕೂಲಿ | ಬೇಡ | ಬಸವನ ಗಂಗೋರು, ಭದ್ರಾವತಿ, ಶಿವಮೊಗ್ಗ |
| ೨೨. | ದುರುಗಮ್ಮ | ೩೭ | ಹೆಣ್ಣು | ಮನೆಗೆಲಸ | ಬೇಡ | ಬಸವನ ಗಂಗೋರು, ಭದ್ರಾವತಿ, ಶಿವಮೊಗ್ಗ |
| ೨೩. | ವೆಂಕಟೇಶ ರೆಡ್ಡಿ | ೫೬ | ಗಂಡು | ಮನೆಗೆಲಸ | ಬೇಡ | ಬಸವನ ಗಂಗೋರು, ಭದ್ರಾವತಿ, ಶಿವಮೊಗ್ಗ |

| | | | | | |
|---|---|---|---|---|---|
| ೨೪. ಚೌಡನಾಯ್ಕ | ೫೧ | ಗಂಡು | ಕೂಲಿ | ಬೇಡ | ಬಸವನ ಗಂಗೋರು, ಭದ್ರಾವತಿ, ಶಿವಮೊಗ್ಗ |
| ೨೫. ಬಸವಪ್ಪ | ೪೯ | ಗಂಡು | ಕೂಲಿ | ಬೇಡ | ಬಸವನ ಗಂಗೋರು, ಭದ್ರಾವತಿ, ಶಿವಮೊಗ್ಗ |
| ೨೬. ಜಾನಕೆಮ್ಮ | ೩೮ | ಹೆಣ್ಣು | ಮನೆಗೆಲಸ | ಬೇಡ | ಮದಕರಿ ನಗರ ೧೩ನೇ ವಾರ್ಡ, ತೀರ್ಥಹಳ್ಳಿ ಶಿವಮೊಗ್ಗ |
| ೨೯. ಬ್ರಹ್ಮಪ್ಪ | ೩೭ | ಹೆಣ್ಣು | ಮನೆಗೆಲಸ | ಬೇಡ | ಮದಕರಿ ನಗರ ೧೩ನೇವಾರ್ಡ, ತೀರ್ಥಹಳ್ಳಿ ಶಿವಮೊಗ್ಗ |
| ೩೦. ಲಕ್ಷಮ್ಮ | ೪೬ | ಹೆಣ್ಣು | ಮನೆಗೆಲಸ | ಬೇಡ | ಮದಕರಿ ನಗರ ೧೩ನೇವಾರ್ಡ, ತೀರ್ಥಹಳ್ಳಿ ಶಿವಮೊಗ್ಗ |
| ೩೧. ಮಾರಮ್ಮ | ೫೧ | ಹೆಣ್ಣು | ಮನೆಗೆಲಸ | ಬೇಡ | ಮದಕರಿ ನಗರ ೧೩ನೇ ವಾರ್ಡ, ತೀರ್ಥಹಳ್ಳಿ ಶಿವಮೊಗ್ಗ |
| ೩೨. ರವಿ | ೫೧ | ಗಂಡು | ಮನೆಗೆಲಸ | ಬೇಡ | ಮದಕರಿ ನಗರ ೧೩ನೇ ವಾರ್ಡ, ತೀರ್ಥಹಳ್ಳಿ ಶಿವಮೊಗ್ಗ |
| ೩೩. ಮಂಜುನಾಥ | ೪೬ | ಗಂಡು | ಕೃಷಿಕೂಲಿ | ಬೇಡ | ಮಹರ್ಷಿ ವಾಲ್ಮೀಕಿ ನಗರ ೧೧ನೇ ವಾರ್ಡ, ಸೊರಬ ಶಿವಮೊಗ್ಗ |
| ೩೪. ಕರಿಸ್ವಾಮಪ್ಪ | ೩೮ | ಗಂಡು | ಕೃಷಿಕೂಲಿ | ಬೇಡ | ಮಹರ್ಷಿ ವಾಲ್ಮೀಕಿ ನಗರ ೧೧ನೇ ವಾರ್ಡ, ಸೊರಬ ಶಿವಮೊಗ್ಗ |
| ೩೫. ನಾಗಮ್ಮ | ೨೯ | ಹೆಣ್ಣು | ಕೃಷಿಕೂಲಿ | ಬೇಡ | ಮಹರ್ಷಿ ವಾಲ್ಮೀಕಿ ನಗರ ೧೧ನೇ ವಾರ್ಡ, ಸೊರಬ ಶಿವಮೊಗ್ಗ |
| ೩೬. ಗೋವಿಂದಪ್ಪ | ೩೧ | ಗಂಡು | ಕೃಷಿಕೂಲಿ | ಬೇಡ | ಮಹರ್ಷಿ ವಾಲ್ಮೀಕಿ ನಗರ ೧೧ನೇ ವಾರ್ಡ, ಸೊರಬ ಶಿವಮೊಗ್ಗ |

| | | | | | | |
|---|---|---|---|---|---|---|
| ೩೭. | ಹಿರೇಮಠ ಸ್ವಾಮಿ | ೩೮ | ಗಂಡು | ಕೃಷಿಕೂಲಿ | ಬೇಡ | ಮಹರ್ಷಿ ವಾಲ್ಮೀಕಿ ನಗರ ೧೧ನೇ ವಾರ್ಡ, ಸೊರಬ ಶಿವಮೊಗ್ಗ |
| ೩೮. | ಸುಬ್ಬಣ್ಣ | ೪೩ | ಗಂಡು | ಮನೆಕೆಲಸ | ಬೇಡ | ಮಹರ್ಷಿ ವಾಲ್ಮೀಕಿ ನಗರ ೧೧ನೇ ವಾರ್ಡ, ಸೊರಬ ಶಿವಮೊಗ್ಗ |
| ೩೯. | ಸುಶೀಲಮ್ಮ | ೪೨ | ಹೆಣ್ಣು | ಮನೆಕೆಲಸ | ಬೇಡ | ಮಹರ್ಷಿ ವಾಲ್ಮೀಕಿ ನಗರ ೧೧ನೇ ವಾರ್ಡ, ಸೊರಬ ಶಿವಮೊಗ್ಗ |
| ೪೦. | ಲೋಕವ್ವ | ೫೧ | ಹೆಣ್ಣು | ಕೃಷಿ/ಕೂಲಿ | ಬೇಡ | ಮಹರ್ಷಿ ವಾಲ್ಮೀಕಿ ನಗರ ೧೧ನೇ ವಾರ್ಡ, ಸೊರಬ ಶಿವಮೊಗ್ಗ |
| ೪೧. | ತಿಮ್ಮಯ್ಯ | ೨೯ | ಗಂಡು | ಕೃಷಿ/ಕೂಲಿ | ಬೇಡ | ನಾಯಕರ ಹೋಣಿ ೪ನೇ ವಾರ್ಡ, ಹೊಸನಗರ ಶಿವಮೊಗ್ಗ |
| ೪೨. | ನಿಂಗಪ್ಪ ಸಾಗರ | ೩೫ | ಗಂಡು | ಕೃಷಿ/ಕೂಲಿ | ಬೇಡ | ನಾಯಕರ ಹೋಣಿ ೪ನೇ ವಾರ್ಡ, ಹೊಸನಗರ, ಶಿವಮೊಗ್ಗ |
| ೪೩. | ಭಾನುಮತಿ | ೪೪ | ಹೆಣ್ಣು | ಕೃಷಿ/ಕೂಲಿ | ಬೇಡ | ನಾಯಕರ ಹೋಣಿ ೪ನೇ ವಾರ್ಡ, ಹೊಸನಗರ, ಶಿವಮೊಗ್ಗ |
| ೪೪. | ಭಾರತಿ ಈಶ್ವರ | ೫೩ | ಹೆಣ್ಣು | ಕೃಷಿ/ಕೂಲಿ | ಬೇಡ | ನಾಯಕರ ಹೋಣಿ ೪ನೇ ವಾರ್ಡ, ಹೊಸನಗರ, ಶಿವಮೊಗ್ಗ |
| ೪೫. | ಪಾಲಪ್ಪ | ೫೩ | ಗಂಡು | ಕೃಷಿ/ಕೂಲಿ | ಬೇಡ | ನಾಯಕರ ಹೋಣಿ ೪ನೇ ವಾರ್ಡ, ಹೊಸನಗರ, ಶಿವಮೊಗ್ಗ |
| ೪೬. | ರಂಗನಾಥ | ೨೮ | ಗಂಡು | ಕೃಷಿ/ಕೂಲಿ | ಬೇಡ | ನಾಯಕರ ಹೋಣಿ ೪ನೇ ವಾರ್ಡ, ಹೊಸನಗರ, ಶಿವಮೊಗ್ಗ |

| | | | | | |
|---|---|---|---|---|---|
| ೪೭. | ತುಳಸಮ್ಮ | ೪೭ | ಹೆಣ್ಣು | ಕೃಷಿ/ಕೂಲಿ | ಬೇಡ | ನಾಯಕರ ಹೋಣಿ ೪ನೇ ವಾರ್ಡ್, ಹೊಸನಗರ, ಶಿವಮೊಗ್ಗ |
| ೪೮. | ಬಂಗಾರಣ್ಣ | ೫೧ | ಗಂಡು | ಕೃಷಿ/ಕೂಲಿ | ಬೇಡ | ನಾಯಕರ ಹೋಣಿ ೪ನೇ ವಾರ್ಡ್, ಹೊಸನಗರ, ಶಿವಮೊಗ್ಗ |
| ೪೯. | ರುಕ್ಕಮ್ಮ | ೫೩ | ಹೆಣ್ಣು | ಕೃಷಿ/ಕೂಲಿ | ಬೇಡ | ನಾಯಕರ ಹೋಣಿ ೪ನೇ ವಾರ್ಡ್, ಹೊಸನಗರ, ಶಿವಮೊಗ್ಗ |
| ೫೦. | ಮಂಜಣ್ಣ | ೫೪ | ಗಂಡು | ಕೃಷಿಕೂಲಿ | ಬೇಡ | ಮರನಕುಳಿ ಗ್ರಾಮ, ಸಾಗರ, ಶಿವಮೊಗ್ಗ |
| ೫೧. | ಚೇತನಾ | ೩೯ | ಹೆಣ್ಣು | ಮನೆಕೆಲಸ | ಬೇಡ | ಮರನಕುಳಿ ಗ್ರಾಮ, ಸಾಗರ, ಶಿವಮೊಗ್ಗ |
| ೫೨. | ಬಾಲಣ್ಣ | ೨೮ | ಗಂಡು | ಕೃಷಿಕೂಲಿ | ಬೇಡ | ಮರನಕುಳಿ ಗ್ರಾಮ, ಸಾಗರ, ಶಿವಮೊಗ್ಗ |
| ೫೩. | ಸುಭದ್ರಮ್ಮ | ೪೧ | ಹೆಣ್ಣು | ಕೃಷಿಕೂಲಿ | ಬೇಡ | ಮರನಕುಳಿ ಗ್ರಾಮ, ಸಾಗರ, ಶಿವಮೊಗ್ಗ |
| ೫೪. | ಕರಿಸಿದ್ಧಯ್ಯ | ೪೪ | ಗಂಡು | ಕೃಷಿಕೂಲಿ | ಬೇಡ | ಮರನಕುಳಿ ಗ್ರಾಮ, ಸಾಗರ, ಶಿವಮೊಗ್ಗ |
| ೫೫. | ಹುಚ್ಚೆಂಗೆಮ್ಮ | ೫೨ | ಹೆಣ್ಣು | ಕೃಷಿಕೂಲಿ | ಬೇಡ | ಮರನಕುಳಿ ಗ್ರಾಮ, ಸಾಗರ, ಶಿವಮೊಗ್ಗ |
| ೫೬. | ಕೋಟೆ ಹನುಂತಪ್ಪ | ೫೮ | ಗಂಡು | ಕೃಷಿಕೂಲಿ | ಬೇಡ | ಬಸವನ ಗಂಗೋರು, ಶಿವಮೊಗ್ಗ ನಗರ, ಶಿವಮೊಗ್ಗ |
| ೫೭. | ಈಶ್ವರಪ್ಪ | ೪೯ | ಗಂಡು | ಕೃಷಿಕೂಲಿ | ಬೇಡ | ಬಸವನ ಗಂಗೋರು, ಶಿವಮೊಗ್ಗ ನಗರ, ಶಿವಮೊಗ್ಗ |
| ೫೮. | ಅಂಬಣ್ಣ | ೨೮ | ಗಂಡು | ಕೃಷಿಕೂಲಿ | ಬೇಡ | ಬಸವನ ಗಂಗೋರು, ಶಿವಮೊಗ್ಗ ನಗರ, ಶಿವಮೊಗ್ಗ |

| | | | | | | |
|---|---|---|---|---|---|---|
| ೫೯. | ಶ್ರೀನಿವಾಸಮೂರ್ತಿ | ೬೯ | ಗಂಡು | ಕೃಷಿಕೂಲಿ | ಬೇಡ | ಮಾಲವಗೊಪ್ಪ ಶಿವಮೊಗ್ಗ<br>ನಗರ, ಶಿವಮೊಗ್ಗ |
| ೬೦. | ರತ್ನಾಕರ | ೬೪ | ಗಂಡು | ಕೃಷಿಕೂಲಿ | ಬೇಡ | ಮಾಲವಗೊಪ್ಪ ಶಿವಮೊಗ್ಗ<br>ನಗರ, ಶಿವಮೊಗ್ಗ |
| ೬೧. | ಕೃಷ್ಣಮೂರ್ತಿ | ೩೩ | ಗಂಡು | ಕೃಷಿಕೂಲಿ | ಬೇಡ | ಮಾಲವಗೊಪ್ಪ ಶಿವಮೊಗ್ಗ<br>ನಗರ, ಶಿವಮೊಗ್ಗ |
| ೬೨. | ಚೌಡಪ್ಪ | ೪೭ | ಗಂಡು | ಕೃಷಿಕೂಲಿ | ಬೇಡ | ಮಾಲವಗೊಪ್ಪ ಶಿವಮೊಗ್ಗ<br>ನಗರ, ಶಿವಮೊಗ್ಗ |
| **೬೩.** | **ರಾಮಣ್ಣ** | **೭೭** | **ಗಂಡು** | **ಹೋರಾಟ<br>ಗಾರರು** | **ಹಸಲರು** | **ತಾಳಗುಪ್ಪ, ಕಾರ್ಗಲ್<br>ಸಾಗರ, ಶಿವಮೊಗ್ಗ** |
| ೬೪. | ಮಹಾದೇವಪ್ಪ | ೪೬ | ಗಂಡು | ಕೃಷಿಕೂಲಿ | ಹಸಲರು | ಹಿರೇಕವಲಿ, ೭ನೇ ವಾರ್ಡ<br>ಶಿಕಾರಿಪುರ, ಶಿವಮೊಗ್ಗ |
| ೬೫. | ಸಂತೆ ಉಮಾಪತಿ | ೫೧ | ಗಂಡು | ಕೃಷಿಕೂಲಿ | ಹಸಲರು | ಹಿರೇಕವಲಿ, ೭ನೇ ವಾರ್ಡ<br>ಶಿಕಾರಿಪುರ, ಶಿವಮೊಗ್ಗ |
| ೬೬. | ಈಶ್ವರ | ೪೩ | ಗಂಡು | ಕೃಷಿಕೂಲಿ | ಹಸಲರು | ಹಿರೇಕವಲಿ, ೭ನೇ ವಾರ್ಡ<br>ಶಿಕಾರಿಪುರ, ಶಿವಮೊಗ್ಗ |
| ೬೭. | ವಿಶ್ವನಾಥಪ್ಪ | ೨೯ | ಗಂಡು | ಕೃಷಿಕೂಲಿ | ಹಸಲರು | ಹಿರೇಕವಲಿ, ೭ನೇ ವಾರ್ಡ<br>ಶಿಕಾರಿಪುರ, ಶಿವಮೊಗ್ಗ |
| ೬೮. | ರಂಗಪ್ಪ | ೩೭ | ಗಂಡು | ಕೃಷಿಕೂಲಿ | ಹಸಲರು | ಹಿರೇಕವಲಿ, ೭ನೇ ವಾರ್ಡ<br>ಶಿಕಾರಿಪುರ, ಶಿವಮೊಗ್ಗ |
| ೬೯. | ಗೋಪಾಲಮ್ಮ | ೬೩ | ಹೆಣ್ಣು | ಮನೆಕೆಲಸ | ಹಸಲರು | ಹಿರೇಕವಲಿ, ೭ನೇ ವಾರ್ಡ<br>ಶಿಕಾರಿಪುರ, ಶಿವಮೊಗ್ಗ |
| ೭೧. | ರಾಮಚಂದ್ರಪ್ಪ | ೬೧ | ಗಂಡು | ಕೃಷಿಕೂಲಿ | ಹಸಲರು | ಹಳೇಕವಲಿ, ೮ನೇವಾರ್ಡ,<br>ಶಿಕಾರಿಪುರ, ಶಿವಮೊಗ್ಗ |
| ೭೨. | ರಮೇಶ್ | ೩೮ | ಗಂಡು | ಕೃಷಿಕೂಲಿ | ಹಸಲರು | ಹಳೇಕವಲಿ, ೮ನೇವಾರ್ಡ,<br>ಶಿಕಾರಿಪುರ, ಶಿವಮೊಗ್ಗ |
| ೭೩. | ಮಾಯಮ್ಮ | ೨೯ | ಹೆಣ್ಣು | ಕೃಷಿಕೂಲಿ | ಹಸಲರು | ಹಳೇಕವಲಿ, ೮ನೇವಾರ್ಡ,<br>ಶಿಕಾರಿಪುರ, ಶಿವಮೊಗ್ಗ |

| | | | | | | |
|---|---|---|---|---|---|---|
| ೭೪. | ಭಾರತೀಶ್ವರ | ೩೭ | ಗಂಡು | ಕೃಷಿಕೂಲಿ | ಹಸಲರು | ಹಳೇಕವಲಿ, ೮ನೇವಾರ್ಡ್, ಶಿಕಾರಿಪುರ, ಶಿವಮೊಗ್ಗ |
| ೭೫. | ಮೀನಾಕ್ಷಮ್ಮ | ೩೩ | ಹೆಣ್ಣು | ಮನೆಕೆಲಸ | ಹಸಲರು | ಹಳೇಕವಲಿ, ೮ನೇವಾರ್ಡ್, ಶಿಕಾರಿಪುರ, ಶಿವಮೊಗ್ಗ |
| ೭೬. | ಲಕ್ಷ್ಮೀನಾರಾಯಣ | ೪೩ | ಗಂಡು | ಮನೆಕೆಲಸ | ಹಸಲರು | ಹಳೇಕವಲಿ, ೮ನೇವಾರ್ಡ್, ಶಿಕಾರಿಪುರ, ಶಿವಮೊಗ್ಗ |
| ೭೭. | ಶಾಂತಿನಾಯಕ | ೪೪ | ಗಂಡು | ಮನೆಕೆಲಸ | ಹಸಲರು | ಹಳೇಕವಲಿ, ೮ನೇವಾರ್ಡ್, ಶಿಕಾರಿಪುರ, ಶಿವಮೊಗ್ಗ |
| ೭೮. | ನಾಗನಗೌಡ | ೫೭ | ಗಂಡು | ಮನೆಕೆಲಸ | ಹಸಲರು | ಹಳೇಕವಲಿ, ೮ನೇವಾರ್ಡ್, ಶಿಕಾರಿಪುರ, ಶಿವಮೊಗ್ಗ |
| ೭೯. | ಹನುಮವ್ವ | ೨೮ | ಹೆಣ್ಣು | ಮನೆಕೆಲಸ | ಹಸಲರು | ಹಳೇಕವಲಿ, ೮ನೇವಾರ್ಡ್, ಶಿಕಾರಿಪುರ, ಶಿವಮೊಗ್ಗ |
| ೮೦. | ಮಾಂತೇಶಪ್ಪ | ೩೯ | ಗಂಡು | ಕೃಷಿಕೂಲಿ | ಹಸಲರು | ಕಾಸಿನಕೊಪ್ಪ ೧೦ನೇವಾರ್ಡ್, ಶಿಕಾರಿಪುರ, ಶಿವಮೊಗ್ಗ |
| ೮೧. | ಕೃಷ್ಣಪ್ಪ | ೨೮ | ಗಂಡು | ಕೃಷಿಕೂಲಿ | ಹಸಲರು | ಕಾಸಿನಕೊಪ್ಪ ೧೦ನೇವಾರ್ಡ್, ಶಿಕಾರಿಪುರ, ಶಿವಮೊಗ್ಗ |
| ೮೨. | ವೆಂಕಟೇಶ್ | ೬೧ | ಗಂಡು | ಕೃಷಿಕೂಲಿ | ಹಸಲರು | ಕಾಸಿನಕೊಪ್ಪ ೧೦ನೇವಾರ್ಡ್, ಶಿಕಾರಿಪುರ, ಶಿವಮೊಗ್ಗ |
| ೮೩. | ರಾಘವೇಂದ್ರ | ೫೯ | ಗಂಡು | ಕೃಷಿಕೂಲಿ | ಹಸಲರು | ಕಾಸಿನಕೊಪ್ಪ ೧೦ನೇವಾರ್ಡ್, ಶಿಕಾರಿಪುರ, ಶಿವಮೊಗ್ಗ |
| ೮೪. | ಹನುಮವ್ವ | ೫೪ | ಹೆಣ್ಣು | ಮನೆಕೆಲಸ | ಹಸಲರು | ಕಾಸಿನಕೊಪ್ಪ ೧೦ನೇವಾರ್ಡ್, ಶಿಕಾರಿಪುರ, ಶಿವಮೊಗ್ಗ |
| ೮೫. | ನಗರೇಶ್ವರ | ೩೮ | ಗಂಡು | ಕೃಷಿಕೂಲಿ | ಹಸಲರು | ಬೆಳ್ಳೆಣೆ, ಹಾಡಿ ಸಾಗರ, ಸಾಗರ ತಾ॥ ಶಿವಮೊಗ್ಗ ಜಿಲ |
| ೮೬. | ಶ್ರೀಶೈಲಪ್ಪ | ೩೧ | ಗಂಡು | ಕೃಷಿಕೂಲಿ | ಹಸಲರು | ಬೆಳ್ಳೆಣೆ, ಹಾಡಿ ಸಾಗರ, ಸಾಗರ ತಾ॥ ಶಿವಮೊಗ್ಗ ಜಿಲ |
| ೮೭. | ಮಂಜಮ್ಮ | ೪೮ | ಹೆಣ್ಣು | ಮನೆಕೆಲಸ | ಹಸಲರು | ಬೆಳ್ಳೆಣೆ, ಹಾಡಿ ಸಾಗರ, ಸಾಗರ ತಾ॥ ಶಿವಮೊಗ್ಗ ಜಿಲ |

| | | | | | | |
|---|---|---|---|---|---|---|
| ೮೮. | ವಿರೂಪಾಕ್ಷಪ್ಪ | ೫೧ | ಗಂಡು | ಕೃಷಿಕೂಲಿ | ಹಸಲರು | ಬೆಳ್ಳೆಣೆ, ಹಾಡಿ ಸಾಗರ, ಸಾಗರ ತಾ॥ ಶಿವಮೊಗ್ಗ ಜಿಲ್ಲೆ |
| ೮೯. | ಪರಮೇಶ್ವರಪ್ಪ | ೫೮ | ಗಂಡು | ಕೃಷಿಕೂಲಿ | ಹಸಲರು | ಬೆಳ್ಳೆಣೆ, ಹಾಡಿ ಸಾಗರ, ಸಾಗರ ತಾ॥ ಶಿವಮೊಗ್ಗ ಜಿಲ್ಲೆ |
| ೯೦. | ಗಣೇಶ | ೪೩ | ಗಂಡು | ಕೃಷಿಕೂಲಿ | ಹಸಲರು | ಜಡೆಗದ್ದೆ ಹಾಡಿ, ಸಾಗರ ತಾ॥ ಶಿವಮೊಗ್ಗ ಜಿಲ್ಲೆ |
| ೯೧. | ವಿಷ್ಣು | ೨೯ | ಗಂಡು | ಕೃಷಿಕೂಲಿ | ಹಸಲರು | ಜಡೆಗದ್ದೆ ಹಾಡಿ, ಸಾಗರ ತಾ॥ ಶಿವಮೊಗ್ಗ ಜಿಲ್ಲೆ |
| ೯೨. | ನಂಜುಡಪ್ಪ | ೫೪ | ಗಂಡು | ಕೃಷಿಕೂಲಿ | ಹಸಲರು | ಜಡೆಗದ್ದೆ ಹಾಡಿ, ಸಾಗರ ತಾ॥ ಶಿವಮೊಗ್ಗ ಜಿಲ್ಲೆ |
| ೯೩. | ಅನ್ನಪೂರ್ಣಮ್ಮ | ೪೩ | ಹೆಣ್ಣು | ಮನೆಕೆಲಸ | ಹಸಲರು | ಜಡೆಗದ್ದೆ ಹಾಡಿ, ಸಾಗರ ತಾ॥ ಶಿವಮೊಗ್ಗ ಜಿಲ್ಲೆ |
| ೯೪. | ಶಾರದಮ್ಮ | ೪೮ | ಹೆಣ್ಣು | ಮನೆಕೆಲಸ | ಹಸಲರು | ಜಡೆಗದ್ದೆ ಹಾಡಿ, ಸಾಗರ ತಾ॥ ಶಿವಮೊಗ್ಗ ಜಿಲ್ಲೆ |
| ೯೫. | ರಾಮಚಂದ್ರ | ೪೫ | ಗಂಡು | ಶಿಲೆಕೊಣೆ | ಹಸಲರು | ಶಿಲೆಕೊಣೆ ತೀರ್ಥಹಳ್ಳಿ ಶಿವಮೊಗ್ಗ ಜಿಲ್ಲೆ |
| ೯೬. | ದೇವೇಂದ್ರ | ೩೬ | ಗಂಡು | ಮನೆಕೆಲಸ | ಹಸಲರು | ಶಿಲೆಕೊಣೆ ತೀರ್ಥಹಳ್ಳಿ ಶಿವಮೊಗ್ಗ ಜಿಲ್ಲೆ |

## ೩. ನಕ್ಷೆ

## ಕರ್ನಾಟಕ - ಶಿವಮೊಗ್ಗ ಜಿಲ್ಲೆ









## ೪. ಪ್ರಶ್ನಾವಳಿಗಳು

**ಅ. ಸಾಮಾನ್ಯ ಮಾಹಿತಿ**

೧. ನಿಮ್ಮ ಹೆಸರು :

೨. ಕೌಟುಂಬಿಕ ವಿವರ :

೧. ಇಬ್ಬರು ೨. ನಾಲ್ಕು ಜನ ೩. ನಾಲ್ಕಕ್ಕಿಂತ ಹೆಚ್ಚು

೩. ಮನೆ ವಿಳಾಸ :

೪. ಮಾತೃ ಭಾಷೆ :

೫. ಮನೆ ದೇವರು:

೬. ಮನೆತನದ ಹೆಸರು :

೭. ಗ್ರಾಮ/ಪಟ್ಟಣ/ನಗರ :

೮. ತಾಲೂಕು :

೯. ಜಿಲ್ಲೆ :

೧೦. ಒಣ ಭೂಮಿ/ಒಣ ಬೇಸಾಯ :

೧೧. ಪ್ರತಿ ಮನೆಯಲ್ಲಿ ಕೃಷಿಕರ ಸಂಖ್ಯೆ

೧. ಇಬ್ಬರು ೨. ನಾಲ್ಕು ೩. ನಾಲ್ಕಕ್ಕಿಂತ ಹೆಚ್ಚು

೧೨. ನೀವು ಪಡೆಯುತ್ತೀರುವ ದಿನಗೂಲಿ (ಗಂಡು ಆಳು)

೧. ರೂ. ೨೦೦ ೨. ರೂ. ೨೫೦ ೩. ರೂ.೩೦೦ ೪. ಅದಕ್ಕಿಂತ ಹೆಚ್ಚು

೧೩. ನೀವು ಪಡೆಯುತ್ತೀರುವ ದಿನಗೂಲಿ (ಹೆಣ್ಣು ಆಳು)

೧. ರೂ. ೧೫೦ ೨. ರೂ.೨೦೦ ೩. ಅದಕ್ಕಿಂತ ಹೆಚ್ಚು

೧೪. ನಿಮ್ಮ ಮನೆಯಿಂದ ಹೊಲ-ಗದ್ದೆಗಳೂ ಎಷ್ಟು ದೂರ ಇವೆ?

೧. ೧ ಕಿ.ಮೀ. ೨. ೨ ಕಿ.ಮೀ. ೩. ಅದಕ್ಕಿಂತ ದೂರ

೧೫. ದಿನಕ್ಕೆ ಎಷ್ಟು ತಾಸು ನಿಮ್ಮ ಕೃಷಿ ದುಡಿಮೆ

೧. ೫ ತಾಸು ೨. ೬ ತಾಸು ೩. ೮ ತಾಸು

೧೬. ಜಮೀನ್ದಾರರು ನಿಮ್ಮನ್ನು ಯಾವ ರೀತಿ ನೋಡಿಕೊಳ್ಳುತ್ತಿದ್ದಾರೆ ?

೧೭. ನಿಮ್ಮ ಕಸುಬು

೧. ಕೃಷಿ ೨. ಮನೆಕೆಲಸ ೩. ವ್ಯಾಪಾರ ೪. ಬೀಡಿ ಅಂಗಡಿ

೧೮. ಪಶು ಸಂಪತ್ತು (ಸಂಖ್ಯೆಗಳಲ್ಲಿ)

೧. ಎತ್ತು, ಹೋರಿ ೨. ಆಕಳು ಮತ್ತು ಕರು

೩. ಎಮ್ಮೆ ಮತ್ತು ಕೋಣ ೪. ಕುರಿ,ಕೋಳಿ

೧೯. ಕುಟುಂಬ ಯೋಜನೆ

೧. ಮಾಡಿಸಲಾಗಿದೆ ೨. ಇಲ್ಲ

೨೦. ಕೃಷಿಕರಿಗೆ ಸರಕಾರ ನೀಡುತ್ತಿರುವ ಸೌಲಭ್ಯಗಳು.

೧. ಪಿಂಚಣಿ ಸೌಲಭ್ಯ ೨. ವಿಧವಾ ವೇತನ

೩. ವೃದ್ಯಾಪ್ಯ ವೇತನ

೨೧. ಮನೆಗಳಲ್ಲಿರುವ ಸೌಲಭ್ಯಗಳು

೧. ಟಿ.ವಿ. ೨. ಗ್ಯಾಸ್

೩. ಸೈಕಲ್ ೪. ಶೌಚಾಲಯ ೫. ಸ್ನಾನಗೃಹ

೨೨. ಪಡಿತರ ಚೀಟಿ ಇದೆಯಾ ?

೧. ಹೌದು ೨. ಇಲ್ಲಾ

೨೩. ಕೃಷಿಕರಿಗಿರುವ ಸಾಲ ಸೌಲಭ್ಯಗಳು ?

೧. ಸಹಕಾರ ಸಂಘಗಳು ೨. ಬ್ಯಾಂಕ್

೨೪. ನೀವು ಪಡೆದಿರುವ ಶಿಕ್ಷಣ

೧. ೧೦ನೇ ತರಗತಿ ೨. ಕಾಲೇಜು ಶಿಕ್ಷಣ

೩. ಯಾವುದು ಇಲ್ಲ

೨೫. ನೀವು ಶಿಕ್ಷಣ ಬಿಡಲು ಕಾರಣ ?

೧. ವೈಯಕ್ತಿಕ ೨. ಕೌಟಂಬಿಕ

೩. ಇತರ

೨೬. ಸದ್ಯ ನಿಮ್ಮ ಮಕ್ಕಳು ಯಾವ ತರಗತಿಯಲ್ಲಿ ಓದುತ್ತಿದ್ದಾರೆ.

೧. ೧ ರಿಂದ ೭ನೇ ತರಗತಿ ೨. ೮-೧೦ ರವರೆಗೆ

೩. ಕಾಲೇಜು ಶಿಕ್ಷಣ

೨೭. ನೀವು ರೈತರಾಗಿ ನಿಮ್ಮ ಮಕ್ಕಳಿಗೆ ಶಿಕ್ಷಣ ಕಲಿಸಲು ಅವಕಾಶ ನೀಡುತ್ತೀರಾ?

೧. ಹೌದು ೨. ಇಲ್ಲಾ

೨೮. ಶಿಕ್ಷಣಕ್ಕೆ ಮಹತ್ವ ನೀಡುತ್ತೀರಾ? /ದುಡುಮೆಗೆ ಮಹತ್ವ ನೀಡುತ್ತೀರಾ?

೧. ಹೌದು ೨. ಇಲ್ಲಾ

೩. ದುಡಿಮೆ ಮುಖ್ಯ

೨೯. ಕೃಷಿಕರಾಗಿ ನಿಮ್ಮ ಆರ್ಥಿಕ ಪರಿಸ್ಥಿತಿ ಸುಧಾರಿಸಿದಯೇ ?

೧. ಹೌದು ೨. ಇಲ್ಲ

೩. ಉತ್ತಮ ೪. ಪರವಾಗಿಲ್ಲ

೩೦. ಕೃಷಿ ಹೊರತುಪಡಿಸಿ ಬೇರೆ ವೃತ್ತಿಯಿಂದ ಬರುವ ಆದಾಯ ಎಷ್ಟು ?

೩೧. ಯಾವ ವಯಸ್ಸಿನಿಂದ ಕೃಷಿ ಕೂಲಿ ಕೆಲಸ ಮಾಡುತ್ತಿದ್ದೀರಿ?

೧. ೧೨ ೨. ೧೪

೩. ೧೬ ೪. ೧೮

೩೨. ಕೃಷಿಕರಾಗಿ ನಿಮಗೆ ಎಷ್ಟು ವರ್ಷ ಅನುಭವ ?

೧. ೮ ವರ್ಷ ೨. ೧೦ ವರ್ಷ

೩೩. ಹಬ್ಬದ ದಿನ ನಿಮ್ಮ ಮನೆಯಲ್ಲಿ ಮಾಡುವ ಸಿಹಿ ಅಡುಗೆ ಯಾವುದು ?

೧. ಹುಗ್ಗಿ ೨. ಹೋಳಿಗೆ

೩. ಕಡುಬು ೪. ಪಾಯಸ ೫. ಇತ್ಯಾದಿ

೩೪. ಬೇರೆ ಬೇರೆ ಹಬ್ಬಗಳಲ್ಲಿ ಮಾಡುವ ಸಿಹಿ ಅಡುಗೆಗಳು ಯಾವುವು ?

೩೫. ನಿಮ್ಮ ಮನೆಯಲ್ಲಿ ಎಷ್ಟು ಜನ ದುಡಿಯುತ್ತಿದ್ದೀರಿ?

೧. ಗಂಡ–ಹೆಂಡತಿ ೨. ಮಕ್ಕಳು

೩. ಒಟ್ಟು

೩೬. ನೀವು ಏನಾದರೂ ಉಳಿತಾಯ ಖಾತೆ ಹೊಂದಿದ್ದೀರಾ?

೧. ಹೊಂದಿದ್ದೇವೆ ೨. ಇಲ್ಲಾ

೩೭. ನಿಮ್ಮ ದುಡುಮೆ ಜೀವನಕ್ಕೆ ಸಾಕಾಗುತ್ತದೆಯೇ?

೧. ಇಲ್ಲಾ ೨. ಪರವಾಗಿಲ್ಲ

೩೮. ನಿಮಗೆ ಮೂಲಭೂತ ಸೌಲಭ್ಯಗಳನ್ನು ಪಡೆಯಲು ಸಾಧ್ಯವಾಗುತ್ತದೆಯೇ?

೧. ಹೌದು ೨. ಇಲ್ಲಾ

೩೯. ನೀವು ಎಷ್ಟು ಸಮಯ ದುಡಿಯುತ್ತೀರಿ?

೧. ಹಗಲುರಾತ್ರಿ ೨. ರಾತ್ರಿ

೩. ಹಗಲು ಮಾತ್ರ

೪೦. ಕಾಡು ಪ್ರಾಣಿಗಳ ಕಾಟ ಇದೆಯೇ?

೧. ಹೌದು ೨. ಇಲ್ಲ

೪೧. ವಿಪರೀತ ಕೆಲಸದಿಂದ ಆರೋಗ್ಯಕ್ಕೆ ಧಕ್ಕೆ ಉಂಟಾಗುತ್ತದೆಯೇ ?

೧. ಹೌದು ೨. ಇಲ್ಲ

೪೨. ಅಡಿಕೆ ಮರದಲ್ಲಿ ಎಷ್ಟು ತಾಸು ಇರುತ್ತೀರಿ ?

೧. ಒಂದು ಗಂಟೆ ೨. ೨ ಗಂಟೆ

೩. ದಿನವಿಡಿ ೪. ಎಷ್ಟು ತಾಸು

೪೩. ಹಸಲರಲ್ಲಿ ಕಾಲು ಡೊಂಕು ಆಗಲು ಕಾರಣವೇನು ?

೧. ಅಡಿಕೆ ಮರದಿಂದ ೨. ಮರದಿಂದ ಮರಕ್ಕೆ ಜೀಗಿಯುವುದು

೩. ಮರದಲ್ಲಿಯೇ ದಿನವಿಡೀ ಕಳೆಯುದರಿಂದ

೪೪. ಅಡಿಕೆ ಮರದಿಂದ ಬಿದ್ದ ಉದಾಹರಣೆ ಇದೆಯೇ ?

೧. ಹೌದು ೨. ಇಲ್ಲಾ

೩. ಕಾಲು ಮುರಿದಿದೆ ೪. ಕೈ ಮುರಿದಿದೆ

೪೫. ಸತತವಾಗಿ ಅಡಿಕೆ ಮರ ಹತ್ತುವುದರಿಂದ ಆರೋಗ್ಯ ಕೆಡುತ್ತಿದೆಯಾ?

೧. ಹೌದು ೨. ಇಲ್ಲ

೪೬. ಹಗಲು-ರಾತ್ರಿ ದುಡಿಯುವುದರಿಂದ ನಿಮ್ಮ ಆರೋಗ್ಯದ ಮೇಲೆ ಪರಿಣಾಮ?

೧. ಬೀರಿದೆ ೨. ಇಲ್ಲ

೪೭. ನಿಮ್ಮ ಜಮೀನ್ದಾರರು ಆರೋಗ್ಯ ಸೌಲಭ್ಯಗಳನ್ನು ನೀಡಿದ್ದಾರಾ?

೧. ಹೌದು ೨. ಇಲ್ಲ

೪೮. ನಿಮ್ಮಲ್ಲಿ ಎತ್ತು ಬಂಡಿ ಇವೆಯೇ?

೧. ಹೌದು ೨. ಇಲ್ಲ

೪೯. ನೀವು ಕೃಷಿ ಕೆಲಸ ಮಾಡುವಾಗ ತೊಂದರೆಯಾದರೆ ಏನು ಮಾಡುತ್ತಾರೆ?

೧. ನೆರೆಹೊರೆಯವರ ಸಹಾಯ ೨. ಮಾಲೀಕರ ಸಹಾಯ

೩. ಇಲ್ಲ

೫೦. ನಿಮ್ಮ ಮನೆಯಲ್ಲಿ ಫ್ಯಾನು, ಸೈಕಲ್ ಮೋಟರ್ ಇದೆಯಾ ?

೧. ಇದೆ ೨. ಇಲ್ಲ

೫೧. ನೀವು ದುಡಿಯುತ್ತಿರುವ ಕೃಷಿ ಕೂಲಿಯಿಂದ ಕೆಲ ಸೌಲಭ್ಯ ಪಡೆಯಲು ಸಾಧ್ಯವೇ?

೧. ಹೌದು ೨. ಇಲ್ಲ

೫೨. ನಿಮ್ಮ ಸ್ಥಾನಮಾನ ಸುಧಾರಣೆಗೆ ಪ್ರಯತ್ನ ಮಾಡುವೀರಾ?

೧. ಹೌದು ೨. ಇಲ್ಲ

೫೩. ನಿಮಗೆ ಸಂತೋಷ ಸಿಗುವುದು ಯಾವಾಗ?

೧. ಕೃಷಿ ಕೆಲಸದಲ್ಲಿ ೨. ಮನೆಯಲ್ಲಿ

೫೪. ನೀವು ಕೆಲಸ ಮಾಡುವ ಪ್ರದೇಶದಲ್ಲಿ ಅನ್ಯಧರ್ಮೀಯರು ಇದ್ದಾರೆಯೇ?

೧. ಹೌದು ೨. ಇಲ್ಲ

೫೫. ನಿಮ್ಮಲ್ಲಿ ಸಂಘಟನೆಗಳು ಇವೆಯೇ?

೧. ಹೌದು ೨. ಇಲ್ಲ

೫೬. ಕೃಷಿ ಜೊತೆಗೆ ಬೇರೆ ವೃತ್ತಿ ಮಾಡಲು ಬಯಸುವಿರಾ?

೧. ಹೌದು ೨. ಇಲ್ಲ

೫೭. ನಿಮಗೆ ಯಾವ ಕಾನೂನು ಗೊತ್ತಿದೆ

೧. ಗೊತ್ತಿದೆ ೨. ಇಲ್ಲಾ

೫೮. ನೀವು ರಜೆ ಮಾಡುವ ದಿನ ಯಾವುದು?

೧. ಭಾನುವಾರ ೨. ಸೋಮವಾರ

೩. ಸಂತೆ ದಿವಸ

೫೯. ಬೆರೆ ಜಾತಿಯವರು ಹಬ್ಬ ಪೂಜೆಗೆ ಕರೆದರೆ ಹೋಗುವಿರಾ?

೧. ಹೌದು ೨. ಇಲ್ಲ

೬೦. ಹೊಲ ಗದ್ದೆಗಳಲ್ಲಿ ಮಾಡುವ ಹಬ್ಬಗಳಿಂದ ಸಂತೋಷ ಇದೆಯೆ?

೧. ಹೌದು ೨. ಇಲ್ಲ

೬೧. ನೀವು ರಾಜಕೀಯದಲ್ಲಿ ಭಾಗವಹಿಸಲು ಇಷ್ಟ ಪಡುವೀರಾ?

೧. ಹೌದು ೨. ಇಲ್ಲ

೩. ಪ್ರಯತ್ನವಿದೆ

೬೨. ನಿಮ್ಮಲ್ಲಿರುವ ಒಣ ಭೂಮಿ ಎಷ್ಟು ಎಕರೆ?

೬೩. ನಿಮ್ಮಲ್ಲಿರುವ ನೀರಾವರಿ ಭೂಮಿ ಎಷ್ಟು ಎಕರೆ?

೬೪. ಕೃಷಿಯಿಂದ ಗ್ರಾಮಗಳ ಉದ್ಧಾರ ಆಗಿದೆಯಾ?

೧. ಹೌದು ೨. ಇಲ್ಲ

೬೫. ಕೃಷಿಯೇ ನಿಮ್ಮ ಜೀವನ ಏನಂತ್ತೀರಿ?

೧. ಹೌದು ೨. ಇಲ್ಲ

೬೬. ನಿಮ್ಮಲ್ಲಿರುವ ನೀರಾವರಿ ಭೂಮಿ ಎಷ್ಟು ಎಕರೆ ಇದೆ?

೧. ಅರ್ಧ ಎಕರೆ ೨. ಒಂದು ಎಕರೆ

೩. ಎರಡು ಎಕರೆ ೪. ಇತರೆ



ಬೇಡ ಬುಡಕಟ್ಟು ಮನೆಯ ದೇವರ ಜಗುಲಿ, ಶಿವಮೊಗ್ಗ



ಬೇಡ ಬುಡಕಟ್ಟಿನ ಮನೆಯ ಜಾನುವಾರು ಕಟ್ಟುವ ಸ್ಥಳ, ಶಿವಮೊಗ



ಬೇಡ ಬುಡಕಟ್ಟು ಮನೆಯವರು ಉಪಯೋಗಿಸುತ್ತಿರುವ ಹಿತ್ತಾಳೆ ಸಾಮಾನು, ಶಿವಮೊಗ್ಗ



ಬೇಡ ಬುಡಕಟ್ಟು ಜನರು ಆರಾಧಿಸುವ ಶ್ರೀ ಚೌಡೇಶ್ವರಿ ಮತ್ತು ದುರುಗಮ್ಮ ದೇವಸ್ಥಾನ, ಶಿವಮೊಗ್ಗ



ಬೇಡ ಬುಡಕಟ್ಟು ಜನರ ಮನೆಯ ಮುಂಭಾಗ, ಶಿವಮೊಗ್ಗ



ಬೇಡ ಬುಡಕಟ್ಟು ರೈತರು, ಶಿವಮೊಗ್ಗ



ಬೇಡ ಬುಡಕಟ್ಟು ಜನರು ಆರಾಧಿಸುವ ಗುಂಡು ಭರಮಪ್ಪ ದೈವ, ಶಿವಮೊಗ್ಗ



ಬೇಡ ಬುಡಕಟ್ಟು ಜನರು ವಾಸಿಸುವ ಮಂಗಳೂರು ಹಂಚಿನ ಮನೆ ಶಿವಮೊಗ್ಗ



ಬಡತನದ ಹಂಚಿನಲ್ಲಿರುವ ಬೇಡ ಬುಡಕಟ್ಟು ಜನರ ಮನೆಯ ಮುಂಭಾಗ, ಶಿವಮೊಗ್ಗ




ಬೇಡ ಬುಡಕಟ್ಟು ಜನರು ಆರಾಧಿಸುವ ದುರ್ಗಾದೇವಿ ಜಾತ್ರೆ ಮತ್ತು ಯುಗಾದಿ ಹಬ್ಬದ ನಿಮಿತ್ತ ಹಾಕಿರುವ ಬ್ಯಾನರ್, ಶಿವಮೊಗ



ಬೇಡ ಬುಡಕಟ್ಟು ಜನರು ಆರಾಧಿಸುವ ಆಂಜನೇಯ ದೈವ, ಶಿವಮೊಗ್ಗ



ಬೇಡ ಬುಡಕಟ್ಟು ಜನರು ಮದುವೆ ಸಂದರ್ಭದಲ್ಲಿ ಪೂಜಿಸುವ ಒಳ್ಳು ಮತ್ತು ಬೀಸುವ ಕಲ್ಲು, ಶಿವಮೊಗ್ಗ



ಬೇಡ ಬುಡಕಟ್ಟು ಜನರು ದುರ್ಗಾದೇವಿ ಜಾತ್ರೆಯಲ್ಲಿ ಪಾಲ್ಗೊಂಡಿರುವ ಚಿತ್ರ,
ಶಿವಮೊಗ್ಗ



ಬೇಡ ಬುಡಕಟ್ಟು ಜನರು ಆರಾಧಿಸುವ ಬನ್ನಿ ಮಹಾಂಕಾಳಿ, ಶಿವಮೊಗ್ಗ



ಬಡತನದ ಹಂಚಿನಲ್ಲಿರುವ ಬೇಡ ಬುಡಕಟ್ಟು ಜನರ ಮನೆ, ಶಿವಮೊಗ್ಗ



ಬೇಡ ಬುಡಕಟ್ಟು ಜನರು ಆರಾಧಿಸುವ ನಾಗಪ್ಪನ ಕಟ್ಟೆ, ಶಿವಮೊಗ್ಗ




ಬೇಡ ಬುಡಕಟ್ಟು ಜನರು ಆರಾಧಿಸುವ ಶ್ರೀ ಮಾರಿಕಾಂಬೆ ಜಾತ್ರೆಯ ಬ್ಯಾನರ್, ಶಿವಮೊಗ್ಗ



ಬೇಡ ಬುಡಕಟ್ಟು ಜನರು ಆರಾಧಿಸುವ ಹುಲಿಗೆಮ್ಮ ದೇವರ ದೇವಸ್ಥಾನ, ಶಿವಮೊಗ್ಗ



ಬೇಡ ಬುಡಕಟ್ಟು ರೈತರ ದನದ ಕೊಟ್ಟಿಗೆ, ಶಿವಮೊಗ್ಗ



ಬೇಡ ಬುಡಕಟ್ಟು ಜನರು ಆರಾಧಿಸುವ ಶ್ರೀ ಕೋಟೆ ಆಂಜನೇಯ ದೈವ, ಶಿವಮೊಗ್ಗ



ಹಸಲರು ರಾಮಣ್ಣ ಮನೆಯ ಕುಟುಂಬ, ಸಾಗರ



ಬೀಸುವ ಕಲ್ಲು ಬಳಸುತ್ತಿರುವ ಹಸಲರು ಯಜಮಾನಿ, ಶಿವಮೊಗ್ಗ



ಹಸಲರು ಪತಿ ಮತ್ತು ಪತ್ನಿ ಮನೆಯ ವಿಹಂಗಮ ನೋಟ, ಶಿವಮೊಗ್ಗ



ಶರಾವತಿ ನದಿಯ ಹಿನ್ನಿರು ಒಂದು ವಿಹಂಗಮ ನೋಟ, ಶಿವಮೊಗ್ಗ



ಹಸಲರು ಮಕ್ಕಳು ಓದುವ ಸರಕಾರಿ ಶಾಲೆ ಇಳಕಳಲೆ, ಸಾಗರ ತಾಲೂಕು, ಶಿವಮೊಗ್ಗ



ದೀಪಾವಳಿ ಹಬ್ಬಕ್ಕೆ ಸಿದ್ದವಾದ ಹಸಲರು ಮನೆ, ಕುಡುಗುಂಜಿ, ಸಾಗರ ತಾಲೂಕು, ಶಿವಮೊಗ್ಗ



ಹಸಲರು ರಾಮಣ್ಣ ಮತ್ತು ಲಕ್ಷ್ಮಣ್ಣ, ಅಣ್ಣ-ತಮ್ಮ, ಸಾಗರ ತಾಲೂಕು, ಶಿವಮೊಗ್ಗ



ಹಸಲರು ಮನೆಯ ಜಗುಲಿಯ ಮೇಲಿರುವ ದೇವರುಗಳು, ಶಿವಮೊಗ್ಗ



ಮಗುವಿನೊಂದಿಗೆ ಹಸಲರು ಮಹಿಳೆ, ಶಿವಮೊಗ್ಗ




ಹಸಲರು ಮಕ್ಕಳು ಓದುವ ಅಂಗನವಾಡಿ ಶಾಲೆ, ಶಿವಮೊಗ್ಗ



ರಬ್ಬರ ಮರಕ್ಕೆ ತೂಗುಪಟ್ಟಿ ಹಾಕಿರುವ ಹಸಲರು ಕೂಲಿ ಆಳುಗಳು,
ಶಿವಮೊಗ್ಗ



ದರ್ಗಾದಲ್ಲಿ ತಪ್ಪು ಮಾಡಿದವರನ್ನು ಅಥವಾ ವಿರೋಧಿಗಳನ್ನು ಕಟ್ಟಿ
ಹಾಕುವ ಬೀಗದ ಕೈ ಸರಪಳಿಗಳು, ಹಣಗೆರೆ ಗ್ರಾಮ, ತೀರ್ಥಹಳ್ಳಿ
ತಾಲೂಕು, ಶಿವಮೊಗ್ಗ



ಹಜರತ್ ದರ್ಗಾದಲ್ಲಿರುವ ಭೂತರಾಯ, ಹಣಗೆರೆ ಗ್ರಾಮ, ತೀರ್ಥಹಳ್ಳಿ ತಾಲೂಕು, ಶಿವಮೊಗ್ಗ



ಹಜರತ್ ದರ್ಗಾದಲ್ಲಿರುವ ಚೌಡೇಶ್ವರಿ, ಹಣಗೆರೆ ಗ್ರಾಮ, ತೀರ್ಥಹಳ್ಳಿ ತಾಲೂಕು, ಶಿವಮೊಗ್ಗ



ಹಜರತ್ ದರ್ಗಾದಲ್ಲಿರುವ ಸೈಯದ್ ಸಾದತ್ ಸಮಾಧಿ, ಹಣಗೆರೆ
ಗ್ರಾಮ, ತೀರ್ಥಹಳ್ಳಿ ತಾಲೂಕು, ಶಿವಮೊಗ್ಗ



ಹಸಲರು ದನಗಳನ್ನು ಕಟ್ಟುವ ಕೊಟ್ಟಿಗೆಗಳು, ಶಿವಮೊಗ್ಗ



ಹಸಲರು ಅಡಿಕೆ ಒಣಗಿಸುತ್ತಿರುವುದು, ಸಂಶೋದಕರು ಸಂದರ್ಶಿಸುವ ಚಿತ್ರ, ಶಿವಮೊಗ್ಗ



ದೀಪಾವಳಿ ಹಬ್ಬದ ಸಂದರ್ಭದಲ್ಲಿ ಹಸಲರು ಪೂಜಿಸುವ ತುಳಸಿ ಕಟ್ಟೆ, ಶಿವಮೊಗ್ಗ



ಹಸಲರು ಮಹಿಳೆ ಅಡಿಕೆ ಸುಲಿಯುತ್ತಿರುವ ಸಂದರ್ಭದಲ್ಲಿ

ಸಂಶೋದಕರು, ಶಿವಮೊಗ್ಗ



ಮಳೆಗಾಲದಲ್ಲಿ ಹಸಲರು ಬಳಸುವ ಅಡಿಕೆ ಎಲೆಯ ಟೋಪಿ, ಶಿವಮೊಗ್ಗ




ಹಸಲರು ಮಕ್ಕಳ ಅಂಗನವಾಡಿ ಕೇಂದ್ರ, ಶಿಲೆಕುಣಿ ಗ್ರಾಮ, ಶಿವಮೊಗ್ಗ



ಹಸಲರು ಭತ್ತಕ್ಕಾಗಿ, ಜೋಳಕ್ಕಾಗಿ ಬಳಸುವ ಕೆರೆಸೆ, ಶಿವಮೊಗ್ಗ



ದೀಪಾವಳಿ ಹಬ್ಬದ ಸಡಗರದಲ್ಲಿರುವ ಹಸಲರು ಮತ್ತು ಅವರನ್ನು

ಸಂದರ್ಶಿಸುವ ಸಂಶೋದಕರು, ಶಿವಮೊಗ್ಗ



ದೀಪಾವಳಿ ಹಬ್ಬದ ಸಂದರ್ಭದಲ್ಲಿ ಅಂಟಿಗೆ-ಪಂಟಿಗೆ, ಹಾಡು ಹೇಳುವ ಹಸಲರು ಬುಡಕಟ್ಟಿನವರು, ಶಿವಮೊಗ್ಗ



ಬೇಡ ಬುಡಕಟ್ಟು ಮದುವೆ ಸಂಧರ್ಭದಲ್ಲಿ ಹಸೆ ಚಿತ್ತಾರ ಬರೆಯುವ

ಪದ್ಧತಿ, ಶಿವಮೊಗ್ಗ



ಬೇಡ ಬುಡಕಟ್ಟು ರೈತರು ಭೂಮಿ ಹುಣ್ಣಿಮೆ ಆಚರಣೆ ಮಾಡುತ್ತಿರುವ ಚಿತ್ರ,

ಶಿವಮೊಗ್ಗ



ಬೇಡ ಬುಡಕಟ್ಟು ಮಹಿಳೆಯ ಸೀಮಂತ ಕಾರ್ಯದ ಸಂದರ್ಭ,

ಶಿವಮೊಗ್ಗ



ಬೇಡ ಬುಡಕಟ್ಟು ಮುತ್ತೈದೆಯರು ಮದುವೆ ಸಂದರ್ಭದಲ್ಲಿ ಅಕ್ಕಿಯನ್ನು

ಬೀಸುವ ಕಲ್ಲಿನಿಂದ, ಬೀಸುತ್ತಿರುವ ಚಿತ್ರ, ಶಿವಮೊಗ್ಗ



ಹಸಲರು ಬುಡಕಟ್ಟು ಮಹಿಳೆಯರು ಭೂಮಿ ಪುಟ್ಟಿಗೆ ಹಸೆ ಚಿತ್ತಾರ
ಹಾಕುತ್ತಿರುವ ಚಿತ್ರ, ಶಿವಮೊಗ್ಗ



ಬೇಡ ಬುಡಕಟ್ಟು ಮದುವೆ ಸಂದರ್ಭದಲ್ಲಿ ಹಾಲುಗಂಭಕ್ಕೆ ಪೂಜಿಸುವ ಚಿತ್ರ, ಶಿವಮೊಗ್ಗ



ದೀಪಾವಳಿ ಹಬ್ಬದ ಸಂದರ್ಭದಲ್ಲಿ ಅಂಟಿಗೆ-ಪಂಟಿಗೆ, ಹಾಡು ಹೇಳುವ ಹಸಲರು ಬುಡಕಟ್ಟಿನ ವಯಸ್ಕರರು, ಶಿವಮೊಗ್ಗ



ಹಸಲರು ವಾಸಿಸುವ ಪ್ರದೇಶದಲ್ಲಿರುವ ಹಚ್ಚ ಹಸಿರುನಿಂದ ಕೂಡಿರುವ ಅರಣ್ಯದ ವಿಹಂಗಮ ನೋಟ ಶಿವಮೊಗ್ಗ



ಹಸಲರು ನಾಟಿ ವೈದ್ಯ ಪದ್ಧತಿಗಾಗಿ ಬಳಸುವ ಔಷಧಿಯ ಗುಣವುಳ್ಳ ಗಿಡಮರಗಳ ವಿಹಂಗಮ ನೋಟ, ಶಿವಮೊಗ್ಗ



ಹಸಲರು ಕೂಲಿ ಆಳುಗಳು ಹೊಲದ ಕೆಲಸಕ್ಕೆ ತೆರಳುತ್ತಿರುವ ಚಿತ್ರ,

ಶಿವಮೊಗ್ಗ



ಹಸಲರು ಬುಡಕಟ್ಟು ಜನರು ವಾಸಿಸು ಮನೆ ಮತ್ತು ಮಳೆಯಿಂದ

ಕೂಡಿರುವ ಚಿತ್ರ, ಶಿವಮೊಗ್ಗ

